# ಜ್ಯೋತಿ – ಕಿರಣ

(ಸಾಮಾಜಿಕ ಕಾದಂಬರಿ)

ಪದ್ಮಾ ಶ್ರೀಧರ್

ಧೃತಿ ಪ್ರಕಾಶನ
ಜಿ–3, ಹಯಗ್ರೀವ ಅಪಾರ್ಟ್‌ಮೆಂಟ್
ನಂ. 1, 2, ದತ್ತಾತ್ರೇಯ ದೇವಸ್ಥಾನ ರಸ್ತೆ,
1ನೇ ಕ್ರಾಸ್, 5ನೇ ಮುಖ್ಯರಸ್ತೆ
ನರಸಿಂಹರಾಜಕಾಲೋನಿ, ಬೆಂಗಳೂರು – 560 019
ದೂರವಾಣಿ : 26671773

**JYOTHI - KIRANA-** A Social Novel by Smt. Padhma Sridhar
Published by **M/s Druthi Prakashana,** G-3, 'Hayagriva Apartment', No. 1, 2 Dattatreya Temple Road, 1st Cross, 5th Main Road, N.R, Colony, Basavanagudi, Bangalore - 560 019

Pages : 244

© ಲೇಖಕಿಯದು

ಪ್ರಥಮ ಮುದ್ರಣ : 2007

ಬೆಲೆ : 120/–

ಬಳಸಿದ ಕಾಗದ : 70 ಜಿ ಎಸ್ ಎಂ. ಮ್ಯಾಪ್‌ಲಿಥೊ

ಮುಖಪುಟ ವಿನ್ಯಾಸ : ಆರ್ಟ್ ಫೋಕಸ್

ಅಕ್ಷರ ಜೋಡಣೆ :
ಪ್ರಶಾಂತ್ ಎಂಟರ್‌ಪ್ರೈಸಸ್
ತ್ಯಾಗರಾಜನಗರ, ಬೆಂಗಳೂರು – 28
ದೂರವಾಣಿ : 26761529

ಮುದ್ರಣ :
**ಸತ್ಯಾನಂದ ಪ್ರಿಂಟರ್ಸ್**
**ನಂ. 12, 4ನೇ ಅಡ್ಡರಸ್ತೆ, ಪೈಪ್‌ಲೈನ್ ರಸ್ತೆ,**
**ಚೋಳೂರುಪಾಳ್ಯ, ಬೆಂಗಳೂರು - 560 023.**

# ಮುನ್ನುಡಿ

''ಜ್ಯೋತಿ–ಕಿರಣ'' ಕೌಟುಂಬಿಕ ಪಾತ್ರಗಳನ್ನೊಳಗೊಂಡು ರಚಿತಗೊಂಡ ಸಾಮಾಜಿಕ ಕಾದಂಬರಿ. ಯೌವನಕ್ಕೆ ಪಾದಾರ್ಪಣೆ ಮಾಡಿ, ಅರೆಬರೆ ತಿಳುವಳಿಕೆಯ ಹುಡುಗಿಯೊಬ್ಬಳು. ಯುವಕನೊಬ್ಬನ ಪ್ರೀತಿಯ ಸೆಳೆತಕ್ಕೆ ಸಿಕ್ಕಿಬಿದ್ದು, ಅವನನ್ನು ಪ್ರೀತಿಸುವುದಲ್ಲದೇ, ಅವನ ಕಾಮದ ಆಸೆಗೆ ಮಣಿದು ,ಅವನನ್ನು ನಂಬಿ, ಅವನಿಗೆ ತನ್ನನ್ನು ತಾನು ಸಮರ್ಪಿಸಿಕೊಳ್ಳುತ್ತಾಳೆ. ಅವನ ಪ್ರೀತಿಯ ಮಡದಿಯಾಗಿರಲು ಬಯಸುತ್ತಾಳೆ. ಶ್ರಮಿಸುತ್ತಾಳೆ. ಅವನೊಂದಿಗೆ ಸಂಸಾರವನ್ನು ಮಾಡುವ ಅಪೇಕ್ಷೆಯನ್ನು ಹೊಂದಿರುತ್ತಾಳೆ. ಆದರೆ ಅವಳ ಆಸೆಗಳು ನೆರವೇರದಿದ್ದಾಗ ? ಅವಳ ಆಸೆ ಆಕಾಂಕ್ಷೆಗಳು ಕುಸಿಯುತ್ತವೆ. ಬಾಳು ಪ್ರಾರಂಭವಾಗುವ ಮೊದಲೇ, ಮುಗಿದು ಹೋಗುವ ಸಂಭವಗಳು ಎದುರಾಗುತ್ತವೆ. ಹೆಣ್ಣಾಗಲೀ, ಗಂಡಾಗಲೀ ಹುಟ್ಟಿದ ಮೇಲೆ ಬದುಕಲೇಬೇಕು. ಬದುಕಿಗೆ ಮಾರ್ಗಗಳನ್ನು ಕಂಡುಕೊಳ್ಳಲೇ ಬೇಕು. ಸಮಾಜದ ವ್ಯವಸ್ಥೆಗಳನ್ನು, ಅನುಕೂಲ, ಅನಾನುಕೂಲಗಳ ನಡುವೆ ಜೀವನಕ್ಕೆ ಅಳವಡಿಸಿಕೊಂಡು ಮುಂದುವರೆಯಬೇಕು. ಈ ತಿಳುವಳಿಕೆ ಎಲ್ಲರಲ್ಲೂ ಮೂಡಬೇಕು. ಇದು ಪ್ರತಿಯೊಬ್ಬ ನಾಗರೀಕನ ಕರ್ತವ್ಯವಾಗಿರುತ್ತದೆ. ದಿಟ್ಟತನದಿಂದ, ಎಡರು ತೊಡರುಗಳನ್ನು ಪರಿಗಣಿಸದೇ ಜೀವನವನ್ನು ಮುಂದುವರೆಸುವ ನಿಲುವನ್ನು ತೋರುವ ಒಬ್ಬ ಹುಡುಗಿಯ ಕತೆಯೇ ಈ ಕಾದಂಬರಿಯ ಕಥಾವಸ್ತು.

ಈಗಾಗಲೇ ನಾನು ಬರೆದ ಹತ್ತಾರು ಕಾದಂಬರಿಗಳನ್ನು ಓದಿ ಮೆಚ್ಚಿಕೊಂಡಿರುವ ಅಭಿಮಾನಿಗಳ ಮುಂದೆ ಈಗ ಮತ್ತೊಂದು ಕಾದಂಬರಿಯನ್ನು ಇಡುತ್ತಿದ್ದೇನೆ. ಓದಿ ಮೆಚ್ಚುವಿರೆಂಬ ನಂಬಿಕೆ ನನಗಿದೆ.

'ಜ್ಯೋತಿ–ಕಿರಣ' ಹೊತ್ತಗೆಯನ್ನು ಪ್ರಕಾಶಿಸುವ ಹೊಣೆಯನ್ನು ಹೊತ್ತಿರುವ ವಸಂತ ಪ್ರಕಾಶನದ ಸದಸ್ಯರೆಲ್ಲರಿಗೂ ನನ್ನ ಕೃತಜ್ಞತೆಗಳು. ಕಾದಂಬರಿಯ ಕುತೂಹಲವನ್ನು ಹೆಚ್ಚಿಸುವಂತೆ ಆಕರ್ಷಕವಾಗಿ ಮುಖಪುಟವನ್ನು ಚಿತ್ರಿಸಿಕೊಟ್ಟಿರುವ ಆರ್ಟ್ ಫೋಕಸ್ ಮಾಲೀಕರಿಗೆ ನನ್ನ ಧನ್ಯವಾದಗಳು.

ವಂದನೆಗಳೊಂದಿಗೆ,

ಇತಿ ತಮ್ಮ ವಿಶ್ವಾಸಿ

ಪದ್ಮ ಶ್ರೀಧರ್

# 1

“ರೈಟಾ ? ರೈಟಾ ? ಎಂದು ಕೇಳುತ್ತಾ ಅತಿ ಎಚ್ಚರಿಕೆಯಿಂದ ಮುಂದಿನ ಮನೆಗಳಿಗೆ ಹೆಜ್ಜೆಯನ್ನಿಡುತ್ತಿದ್ದಳು. ಪೂರ್ಣಿಮಾ ತಲೆಯನ್ನು ಆಕಾಶದೆಡೆಗೆ ಎತ್ತಿ, ಕಣ್ಣುಗಳನ್ನು ಮುಚ್ಚಿಕೊಂಡು, ಮುಂದಿನ ಮನೆಗಳಿಗೆ ಅಂಜುತ್ತಾ ಕಾಲನ್ನಿಡುತ್ತಿದ್ದವಳನ್ನೇ ಕುತೂಹಲದಿಂದ ನೋಡುತ್ತಿದ್ದ ಚಂದ್ರ ಬಾಲ್ಕನಿಯಲ್ಲಿ ನಿಂತು.

ಕುಂಟೆಬಿಲ್ಲೆಯಾಡುತ್ತಿದ್ದ ಹುಡುಗಿಯರ ಮಾತುಕತೆ ಗದ್ದಲಗಳಿಂದ ಅವನ ಓದಿಗೆ ಭಂಗ ಬಂದಿತ್ತು. ಕುಳಿತಿದ್ದವನು ಎದ್ದು ಬಂದು ಕಿಟಕಿಯ ಬಳಿ ನಿಂತಿದ್ದ. ಸಿಟ್ಟಿನಿಂದ ಮುಖವನ್ನು ಸಿಂಡರಿಸಿಕೊಂಡಿದ್ದ. ನಿಧಾನವಾಗಿ ಮೂಡಿದ್ದ ನೆರಿಗೆಗಳು ಸಡಿಲವಾದವು. ತಲೆ ಎತ್ತಿ ನಡೆಯುತ್ತಿದ್ದವಳು ತಪ್ಪು ಮಾಡಿದ್ದಳು. ಉಳಿದ ಹುಡುಗಿಯರು 'ರಾಂಗ್' ಎಂದೊಡನೆ ಅವಳು ಕಣ್ಣು ಬಿಟ್ಟು ಕೆಳಗೆ ನೋಡಿದ್ದಳು. ಪೂರ್ಣಿಮ ಗೆರೆಯ ಮೇಲೆ ಹೆಜ್ಜೆಯನ್ನುರಿದ್ದಳು. 'ತಥ್' ಎಂದು ರೇಗಿ, ಪಕ್ಕಕ್ಕೆ ಸರಿದು ನಿಂತಳು. ಬೇರೆ ಹುಡುಗಿಯ ಸರದಿ ಬಂದಿತ್ತು. ಒಂದು ಬದಿಗೆ ನಿಂತಿದ್ದವಳನ್ನೇ ಚಂದ್ರ ಗಮನಿಸಿದ.

ಯಾರೋ ಈ ಹುಡುಗಿ ಈ ಮೊದಲು ನೋಡಿದಂತಿಲ್ಲ. ಪಕ್ಕದ ಮನೆಗೆ ಬಂದಿರುವ ನೆಂಟರ ಹುಡುಗಿ ಇರಬಹುದು. ಆದರೆ ಹೊಸ ಹುಡುಗಿ ಎಂಬಂತೆ ಅನ್ನಿಸುವುದೇ ಇಲ್ಲ. ಬಹುಶಃ ಆ ಗುಂಪಿನಲ್ಲಿರುವ ಎಲ್ಲಾ ಹುಡುಗಿಯರಿಗಿಂತ ಸ್ವಲ್ಪ ದೊಡ್ಡವಳೇ ಇರಬಹುದು. ಎಲ್ಲರಿಗಿಂತ ಎತ್ತರವಾಗಿದಾಳೆ. ದುಂಡು ದುಂಡಾಗಿದಾಳೆ...... ದುಂಡನೆಯ ಅವಳ ಮೈಕಟ್ಟು ಅವನಲ್ಲಿ ಕಿರುನಗೆಯನ್ನು ಮೂಡಿಸಿತು. ಸೂರ್ಯನ ಬಿಸಿಲಿನ ತಾಪಕ್ಕೆ ಕೆಂಪಾದ ಉಬ್ಬಿದ ಕೆನ್ನೆಗಳು, ದುಂಡನೆಯ ಕೈ ತೋಳುಗಳು, ಎದೆಗೆ ಕೈ ಕಟ್ಟಿ ಇನ್ನೊಬ್ಬಳ ಆಟವನ್ನೇ ಗಮನಿಸುತ್ತಿದ್ದಳು. ಚಿಕ್ಕ ಹುಡುಗಿ ಎಂದೆನಿಸಲಿಲ್ಲ. ಕುತೂಹಲ ಮತ್ತೂ ಹೆಚ್ಚಿತು.

ಯಾರೀ ಹುಡುಗಿ ? ಹೈಸ್ಕೂಲಿನಲ್ಲೋ, ಕಾಲೇಜಿನಲ್ಲೋ ಓದುತ್ತಿರ ಬಹುದು. ಸ್ವಲ್ಪವಾದರೂ ನಾಚಿಕೆ ಬೇಡವೆ ? ಮೈ ಕೈ ಕುಣಿಸುತ್ತಾ, ಬೀದಿಯಲ್ಲಿ ಕುಂಟೆಬಿಲ್ಲೇ ಆಡುವುದೆ? ಯಾರಾದರೂ ನಗಬಹುದು ಎಂಬ ಪರಿವೆ ಬೇಡವೆ.... ? ತನ್ನನ್ನು ಒಂದು ಜೊತೆ ಕಣ್ಣುಗಳು ಗಮನಿಸುತ್ತಿವೆ ಎಂಬ ಪರಿವೆಯೇ ಇಲ್ಲದೆ ಪೂರ್ಣಿಮ ಆಟದಲ್ಲಿ ತಲ್ಲೀನಳಾಗಿದ್ದಳು.

'ಕಾಫಿ... ' ಎಂದು ಹಿಂದಿನಿಂದ ತಂಗಿಯ ಧ್ವನಿ ಕೇಳಿಸಿದಾಗ ಚಂದ್ರ ಎಚ್ಚೆತ್ತ. 'ಅಲ್ಲಿಡು...' ಎಂದು ಅಪ್ಪಣೆ ಮಾಡಿ, ತಥ್ ಬರೀ ಗಲಾಟೆ ಈ ರಸ್ತೇಲಿ.. ಓದಕ್ಕೇ ಆಗುಲ್ಲ ಎಂದು ತನಗೇ ಎಂಬಂತೆ ಗೊಣಗಿಕೊಂಡ.

''ಹತ್ತಿರ ಹತ್ತಿರಕ್ಕೆ ಮನೆಗಳು... ಸಣ್ಣ ರಸ್ತೆ.... ಗಲಾಟೆ ಕೇಳಿಸ್ದೇ ಇನ್ನೇನು? ಮಧ್ಯಾಹ್ನ ಆದ್ರೆ ಸಾಕು... ಈ ಹುಡುಗೀರು ಶುರು ಮಾಡಿ ಬಿಡುತ್ವೆ.. .ಕಿಟಕಿ ಹಾಕ್ಲಾ? '' ತಂಗಿ ಕೇಳಿದಾಗ, ಬೇಡ ಎನ್ನುವಂತೆ ತಲೆಯಾಡಿಸಿದ.

''ಇರಲಿ ಬಿಡು... ಗಾಳಿಯೇ ಇಲ್ಲ.... ಅಲ್ಲಾ ಈ ಹುಡಿಗೀರ್ಗೆ ಸ್ಕೂಲಿಲ್ವಾ... ಓದು ಬರಹ ಇಲ್ವಾ ? ''

''ಎಲ್ಲಾ ಇದೆ. ಮನೇಲಿ ಜಾಗ ಸಾಲದು. ಗಡದ್ದಾಗಿ ಊಟ ಮಾಡಿ ಹಿರಿಯೋರೆಲ್ಲಾ ಮಲಗಿರತಾರೆ. ಈ ಕಿರಿಯೋರೆಲ್ಲಾ ಆಚೆ ಬೀದಿಗೆ ಬಂದು ಹೀಗೆ ಆಟ'' ತಂಗಿಯ ಮಾತು ಕೇಳಿ ಅವನಿಗೆ ನಗು ಬಂತು.

''ಯಾಕೇ.... ನಿನ್ನನ್ನು ಆಟಕ್ಕೆ ಸೇರಿಸಿಕೊಂಡಿಲ್ಲ ಅಂತ ಕೋಪಾನಾ ? ಅಥವಾ ನಿಂಗೆ ಕುಂಟುಕ್ಕೆ ಬರುಲ್ವೋ .... ''

''ಕುಂಟುಕ್ಕೆ ಯಾಕೆ ಬರುಲ್ಲ. ಒಂದು ಕಾಲದಲ್ಲಿ ನಾನೂ ಛಾಂಪಿಯನ್ ಆಗಿದ್ದೆ.. ಈಗ ನಾನು ಬೀದೀಲಿ ಕುಂಟೆ ಬಿಲ್ಲೆ ಆಡಿದರೆ ಅಮ್ಮ ಸುಮ್ಮನಿರ್ತಾಳಾ?..''

''ಯಾಕೆ ? ಹೊರಗೆ ಬೀದಿಲಿ ಆಟ ಆಡದಿರುವಷ್ಟು ದೊಡ್ಡೋಳಾಗಿ ಬಿಟ್ಯಾ? ಅಲ್ಲಿ ನೋಡು ನಿನ್ನಷ್ಟೇ ವಯಸ್ಸಿನವಳಿರಬಹುದು. ಆ ಹುಡುಗಿ ಆಡ್ತಾ ಇಲ್ವಾ ? ''.... ಹೊರಗೆ ಇಣುಕಿದವಳು ಮುಖ ಸಿಂಡರಿಸಿದಳು.

''ಓ..... ಅವಳಾ ? ಅವಳೊಬ್ಬಳು ಬಜಾರಿ. ನಾಚಿಕೇನೇ ಇಲ್ಲ. ಚಿಳ್ಳೆ ಪಿಳ್ಳೆಗಳನ್ನೆಲ್ಲ ಕಟ್ಟಿಕೊಂಡು ದೊಂಬರಾಟ ಆಡುತ್ತಿದ್ದಾಳೆ. ''

ಥೂ... ಹಾಗೆಲ್ಲಾ ಚೀಪಾಗಿ ಮಾತಾಡ್ಬಾರ್ದು ಯಾರೋ ಏನೋ ನಿನಗೇಕೆ ಆ ಹುಡುಗಿ ಮೇಲೆ ಕೋಪ ?

''ಕೋಪವೂ ಇಲ್ಲತಾಪವೂ ಇಲ್ಲ.... ತಾನೇ ಸುರಸುಂದರಿ ಎಂಬ ಅಹಂಕಾರ ಅವಳಿಗೆ. ನನಗ್ಯಾಕೆ ಬೇಕು ಅವಳ ಸಹವಾಸ ? ''

''ಹಾಗಾದ್ರೆ 'ಠೂ' ಬಿಟ್ಟಿದೀಯೆ ಅನ್ನು'' ನಕ್ಕ.

''ನಾನ್ಯಾಕೆ 'ಠೂ' ಬಿಡಲಿ ? ನನಗೂ ಅವಳಿಗೂ ಸ್ನೇಹವೇ ಇಲ್ಲ. ಅವಳೇನೂ ಸದಾ ಇಲ್ಲಿರಲ್ಲ. ಬರ್ತಾಳೆ... ನಾಲ್ಕು ದಿನ ಅಜ್ಜಿ ಮನೇಲಿದ್ದು ಹೋಗ್ತಾಳೆ. ಅವಳು ಬಂದರೇ..ಇಷ್ಟು ಗಲಾಟೆ. ಆ ದಂಡನ್ನೆಲ್ಲ ಕಟ್ಟಿಕೊಂಡು ಕುಣಿದದ್ದೇ ಕುಣಿದದ್ದು....''

''ನಿಂಗೆ ಅಸೂಯೆ... ನಾನು ಅಮ್ಮನಿಗೆ ಹೇಳ್ತೀನಿ. ನೀನು ಆ ಹುಡುಗಿಯ ಫ್ರೆಂಡ್‌ಶಿಪ್ ಮಾಡ್ಕೋ... ನೀನೂ ಆಟ ಆಡಬಹುದು.''ಅವನು ಮತ್ತೆ ನಕ್ಕಾಗ ಅವಳು ರೇಗಿದಳು.

''ತಮಗೆ ಆ ಹುಡುಗೀರ ಜತೆ ಆಡ್ಬೇಕು ಅನ್ನೋ ಆಸೆ ಇದ್ರೆ ಆಡಬಹುದು.

ನನಗೇನೂ ಬೇಕಿಲ್ಲ.... ''

''ಕುಂಟೆಬಿಲ್ಲೆ ಹುಡುಗೀರ ಆಟ.... ಬೇಕಾದ್ರೆ ಹೇಳು... ಕ್ರಿಕೆಟ್ ಆಡೋಣ. ನಾನೇ ಕ್ಯಾಪ್ಟನ್. ನೀನೇ ವೈಸ್‌ಕ್ಯಾಪ್ಟನ್.... ಇನ್ನೊಂದ್ಹೈದಾರು ಹುಡುಗ್ರು ಸಿಕ್ಕಿದ್ರೆ ಆಯ್ತು... ಒಂದು ಟೀಮು ಆಗುತ್ತೆ''

''ಆ ಹುಡುಗಿ ಇದಾಳಲ್ಲ, ಆ ಬಜಾರೀನ ಸೇರಿಸ್ಕೊಂಡು ಆಡಪ್ಪ, ಬೇಕಿದ್ರೆ... ಒಂದೇ ಬಾಲ್‌ಗೆ ಬೋಲ್ಡ್ ಮಾಡ್ತಾಳೆ ನಿನ್ನನ್ನ...''

''ನಾನೇನು ಪೆಕ್ರಾನಾ ? ಬೋಲ್ಡ್ ಆಗಕ್ಕೆ... ಅವಳೇನು ಛಾಂಪಿಯನ್ನಾ? ... ಬಾಲ್ ಹಿಡ್ಕೊಳ್ಳೋಕೆ ಬರುತ್ತೋ ಇಲ್ವೋ ? ...ಆದರೆ ನೀನು ಏನೇ ಹೇಳು ಚಿಂಪಿ... ಹುಡುಗಿ ಮಾತ್ರ ಸಖತ್ ಆಗಿದಾಳೆ....''

''ನಿಂಗ್ಯಾಕೆ ಅವಳ ಮೇಲೆ ಕಣ್ಣು ? .... ಸ್ಟಡೀ ಮಾಡ್ತೀನಿ ಅಂತ ಯಾರಿಗೂ ಕಾಣದಂತೆ ಈ ಮಹಡಿ ಮೇಲಿನ ರೂಮ್ನಲ್ಲಿ ಕೂತ್ಕೊಂಡು ಹುಡುಗೀರನ್ನ ನೋಡ್ತೀಯಾ? ತಡೀ ಅಮ್ಮಂಗೆ ಹೇಳ್ತೀನಿ... ಆಗ ಗೊತ್ತಾಗುತ್ತೆ. ''

'' ಅಯ್ಯೋ... ಹೇಳ್ಕೋ ಹೋಗೇ... ನಂಗೇನು ? ನೀವೇನು ಹುಡುಗೀರು ಸಾಚಾನಾ ? ಕದ್ದು ಮುಚ್ಚಿ ಹುಡುಗರನ್ನ ನೋಡೋಲ್ವಾ ? ಚುಡಾಯಿಸಲ್ವಾ ? ಕೆಣಕೋಲ್ವಾ ? ಗೊತ್ತು ಬಿಡೇ ...''

''ಅವೆಲ್ಲಾ ನಿನಗೆ ಇರಲಿ. ನಾನು ಅಂಥೋಳಲ್ಲ.... ''

''ಹಾಗಾದ್ರೆ... ನಾಳೆ ಮದುವೆಯಾಗೋ ಹುಡುಗನ ಮುಖವನ್ನು ನೋಡದೆ... ಹಾಗೇ ಒಪ್ಗೆಕೊಟ್ಟು ಬಿಡ್ತೀಯ ಅನ್ನು.... ''

''ಅಮ್ಮ ನೋಡಮ್ಮಾ.... ಇವನನ್ನ ಸುಮ್ನೆ ಕೀಟಲೆ ಮಾಡ್ತಾ ಇದಾನೆ... '' ತಾಯಿ ಕೆಳಗಿನಿಂದಲೇ ಕೂಗು ಹಾಕಿದಳು.

''ಕಾಫಿ ಕೊಟ್ಯಾಯ್ತೋ ಇಲ್ವೋ .... ಸುಮ್ನೆ ಬಾರೇ ಅತ್ಲಾಗೆ... ಯಾವಾಗ ನೋಡಿದ್ರೂ ನಿಮ್ಮಿಬ್ಬರ ಜಗಳ ಬಗೆಹರಿಯೋದೇ ಇಲ್ಲ ... ''

ಖಾಲಿಯಾದ ಕಾಫಿ ಲೋಟವನ್ನೆತ್ತಿಕೊಂಡು ತಂಗಿ ಮಹಡಿಯಿಂದ ಕೆಳಗಿಳಿದು ಹೋದಳು.ಇವನು ಮತ್ತೆ ಕಿಟಕಿಯ ಬಳಿ ಸರಿದು ನಿಂತ. ಹುಡುಗಿಯರು ಆಟ ಮುಗಿಸಿ ಹೊರಟು ಹೋಗಿದ್ದರು.ಇವನು ಪುಸ್ತಕದ ಹಾಳೆಗಳನ್ನು ತಿರುವಿ ಹಾಕಿದ. ದುಂಡನೆಯ ಕೆನ್ನೆಗಳ ಆ ಹುಡುಗಿಯ ಚಿತ್ರವೇ ಮತ್ತೆ ಮತ್ತೆ ಕಂಡು ಬರುತ್ತಿತ್ತು.

ಇಂಜಿನಿಯರಿಂಗ್ ನಾಲ್ಕನೇ ವರ್ಷದಲ್ಲಿ ಅಭ್ಯಾಸ ಮಾಡುತ್ತಿದ್ದ ಪೂರ್ಣಚಂದ್ರನಿಗೆ ಹುಡುಗಿಯರೇನೂ ಹೊಸಬರಲ್ಲ. ಅವನೊಂದಿಗೆ ಎಷ್ಟೋ ಜನ ಹುಡುಗಿಯರು ಓದುತ್ತಿದ್ದರು. ಆದರೆ ದಿನಾ ತರಗತಿಗಳಲ್ಲಿ ನೋಡುತ್ತಿದ್ದ ಹುಡುಗಿಯರಿಗೂ,ಈ ಹುಡುಗಿಗೂ ಬಹಳ ವ್ಯತ್ಯಾಸವಿದೆ ಎಂದೆನಿಸಿತ್ತು. ದುಂಡು ಮುಖದ ಸೇಬು ಕೆನ್ನೆಗಳ ಹುಡುಗಿ, ಅತ್ತಿಂದಿತ್ತ ಓಲಾಡುವ ಪೋನಿ ಟೈಲ್‌ನಿಂದಾಗಿ ಮುಖ ಹುಣ್ಣಿಮೆಯ ಚಂದ್ರನಂತೆ ಎತ್ತಿ ಕಾಣುವಂತಿತ್ತು. ಅವಳ ವಯಸ್ಸು ಎಷ್ಟಿರಬಹುದು ಎಂದು ಮನಸ್ಸು ಲೆಕ್ಕ ಹಾಕಿದರೂ,

ತನಗೇಕೆ ಎಂದುತಲೆಕೊಡವಿ ಕೊಂಡ. ಆದರೂ ಆ ನಂತರ ಆ ವೃತ್ತದಿಂದ ಹೊರಬರಲಾಗಿರಲಿಲ್ಲ. ಅವಳು ಯಾರು? ಯಾರ ಮನೆಗೆ ಬಂದಿರಬಹುದು? ಅವಳ ಹೆಸರೇನಿರಬಹುದು ? ಖಂಡಿತಾ ಯಾವುದೋ ದೊಡ್ಡ ಊರಿನಿಂದ ಬಂದಿರಬಹುದು. ಇಲ್ಲದಿದ್ದರೆ ಮಿಡಿ, ಟಾಪ್ ಧರಿಸಿ. ಯೌವನವನ್ನೆಲ್ಲಾ ಚೆಲ್ಲುವಂತೆ ಆಕರ್ಷಕವಾಗಿ ಕುಂಟೆಬಿಲ್ಲೆ ಆಡುವ ಧೈರ್ಯ ಈ ರಸ್ತೆಯಲ್ಲಿರುವ ಹುಡುಗಿಯರಿಗೆ ಖಂಡಿತಾ ಇಲ್ಲ ಎಂದು ತನ್ನಲ್ಲೇ ನಿರ್ಧರಿಸಿ ಅವಳ ಅಂದ ಚಂದದ ಬಗ್ಗೆಯೇ ಚಿಂತಿಸಿದ.

''ಪಂಕಜಮ್ಮನ ಅತ್ತೆಗೆ ಕನಕಾಭಿಷೇಕವಂತೆ...... ''

''ಓ ಆದೇನಾ ಗಲಾಟೆ ? ನೆಂಟರಿಷ್ಟರೆಲ್ಲಾ ಬಂದು ಸೇರಿರುವ ಹಾಗಿದೆ... ''. ತಂದೆ ಮೈಲಾರಯ್ಯ, ತಾಯಿ ಗೌರಮ್ಮನ ಮಾತಿಗೆ ಪಡಿನುಡಿದರು.

''ಹೂಂ... ಅವರಿಗೋ ವಿಪರೀತ ನೆಂಟರು. ಬಂದೋರ್ಗೆ ಮಲಕ್ಕೊಳ್ಳೋಕೆ ನಿಮ್ಮನೆಯ ಮಹಡಿ ಮೇಲಿನ ರೂಮನ್ನು ಬಿಟ್ಟುಕೊಟ್ರ್ತೀರಾ ಅಂತ ಆಕೆ ಕೇಳಿದರು. ... ನಾನು ಹೂಂ ಅಂದೆ.... ''

''ಹೂಂ ಅಂತ ಯಾಕೆ ಅಂದೆ ? ಚಂದ್ರನ ಓದಿಗೆ ತೊಂದರೆಯಾಗಲ್ವಾ 1... ಕೆಳಗಡೆ ಹಾಲಿನಲ್ಲಿ ಮಲಗೋದಾದ್ರೆ ಮಲಗಲಿ....''

''ಚೆನ್ನಾಗಿದೆ... ಯಾರೋ ಪರಿಚಯವಿಲ್ಲದವರು, ಹಾಲಿನಲ್ಲಿ ಮಲಗಿದರೆ ನನಗೂ ಓಡಾಡುಕ್ಕೆ ಮುಜುಗರವಾಗುತ್ತೆ. ಒಂದೆರಡು ರಾತ್ರಿ ಅಷ್ಟೇ ಹೇಗೋ ಅಡ್ಜಸ್ಟ್ ಆಗುತ್ತೆ ಅಲ್ವೇನೋ ಚಂದ್ರ ? ''

''ನನ್ನನ್ನ ಒಂದ್ಮಾತೂ ಕೇಳ್ದೆ ಈಗ ಅಡ್ಯಸ್ಟ್ ಆಗುತ್ತೆ ಅಂತಂದ್ರೆ ನಾನೇನಮ್ಮ ಹೇಳಲಿ.... ನಾನೇ ನನ್ನ ಫ್ರೆಂಡ್ಸ್ ಮನೆಗೆ ಹೊರಟು ಹೋಗ್ತೀನಿ ಅಷ್ಟೆ..''

''ನೋಡಿದ್ಯಾ ? ನೀನು ಮಾಡೋದೆಲ್ಲಾ ಇಷ್ಟೆ... ಫ್ರೆಂಡ್ಸ್ ಮನೆಗೆ ಹೋದರೆ ಓದೋದೇನು ಬಂತು ? ಬರೀ ಮಾತು ಹರಟೇಲೇ ಕಾಲ ಕಳೀತಾರೆ ಅಷ್ಟೆ... '' ಅಕ್ಷೇಪಣೆಯ ಸ್ವರವನ್ನು ಎತ್ತಿದರು ಮೈಲಾರಯ್ಯ.

''ಈಗೇನಾಯ್ತು? ಆಗುಲ್ಲ ಅಂತ ಬೆಳಿಗ್ಗೇನೇ ಹೇಳಿ ಬಿಡ್ತೀನಿ. ನೆರೆ ಹೊರೆ ಅಂದ್ರೆ ಇಷ್ಟೇ.... ಸಮಯಾಂತಂದ್ರೆ ಇಷ್ಟೂ ಆಗೋದಿಲ್ಲಾಂತ ಹೇಳೋದಾದ್ರೂ ಹೇಗೆ .... ನೀನೇ ಹೇಳೋ ಚಂದ್ರ... ''

'' ಹೋಗ್ಲಿ ಬಿಡಮ್ಮ.... ಈಗೇನಾಯ್ತು.... ನಾನೇ ಎರಡು ರಾತ್ರಿ ಅಡಿಗೆ ಮನೇಲಿ ಮಲಗ್ತೀನಿ ಅಷ್ಟೆ. ಜಿರಲೆ ಗಿರಲೆ ಏನಿಲ್ಲ ತಾನೇ ? '' ವಾತಾವರಣವನ್ನು ತಿಳಿ ಮಾಡುವವನಂತೆ ನಕ್ಕ.

''ಅಡಿಗೆ ಮನೇಲಿ ಜಿರಲೆಗಳಿಗೇ ಜಾಗವಿಲ್ಲ, ಇನ್ನು ನಿನಗೆಲ್ಲಿದೆ ? ನೀನು ಅಪ್ಪನ ರೂಮಿನಲ್ಲಿ ಮಲಕ್ಕೋ... ನಾನು ಅಮ್ಮನ ರೂಮಿನಲ್ಲಿ ಮಲಗ್ತೀನಿ....'' ತಂಗಿ ಚಂಪಕ ಗೇಲಿ ಮಾಡುತ್ತಾ ನಕ್ಕಳು.

ಈ ಸಲಕ್ಕೆ ಆಯ್ತು. ಮುಂದಿನ ಸಲದಿಂದ ನನ್ನನ್ನ ಕೇಳದೇ ಹೂಂ ಅಂತ ಒಪ್ಕೋ

ಬೇಡ. ಅವರ ಮನೇಲಿ ಏನಾದ್ರೂ ಒಂದು ಫಂಕ್ಷನ್ ನಡೀತಾನೇ ಇರುತ್ತೆ....

''ಆಯ್ತು ಆಕೆ ಬಂದು ಕೇಳಿದ್ರೆ .. ನಿಮ್ಮನ್ನೇ ಕರಿತೀನಿ. ಅದೇನು ಹೇಳ್ತೀರೋ ನೀವೇ ಹೇಳಿಕೊಳ್ಳಿ... ನೀವುಂಟು ; ನಿಮ್ಮ ಮನೆಯುಂಟು ನಾನ್ಯಾಕೆ ಮಧ್ಯೆ ಬಾಯಿ ಹಾಕಲಿ.''

''ನೋಡು.... ನನಗೆ ಇದೇ ಸರಿ ಹೋಗಲ್ಲ. ನಮ್ಮ ಮಕ್ಕಳು ಬೆಳೆದು ದೊಡ್ಡವರಾಗಿದಾರೆ. ಅವರಿಗೆ ಸರಿ ಹೋಗುತ್ತೋ ಇಲ್ಲವೋ ಅಂತ ಯೋಚಿಸ ಬೇಡ್ವಾ? ಅವರುಗಳನ್ನು ಒಂದ್ಮಾತು ಕೇಳಬೇಕು ತಾನೆ ? ''

''ಹೋಗ್ಲಿ ಬಿಡಪ್ಪಾ... ಜಗಳ ಯಾಕೆ ಆಡ್ತೀರಿ ? ಒಂದೆರಡು ದಿನಗಳ ಮಾತು ತಾನೆ? ನಾನು ಯಾವುದಾದ್ರೂ ಬೇರೆ ಊರಿನಲ್ಲಿ ಕೆಲಸಕ್ಕೆ ಸೇರಿಕೊಂಡರೆ, ಚಿಂಪಿ ಮದುವೆಯಾಗಿ ಹೊರಟು ಹೋದ್ರೆ, ಮೇಲಿನ ರೂಮುಗಳು ಖಾಲಿ ತಾನೆ ಇರುತ್ತೆ? ಆಗ ನೀವೇ ಅವರುಗಳನ್ನು ಬನ್ನಿ ಅಂತ ಕರೀತೀರಿ ಅಷ್ಟೇ. ''

''ನಾನು ಮಾತ್ರ ಅಂತ ಕೆಲಸ ಮಾಡುಲ್ಲಯ್ಯ. ನನಗೆ ಇದೆಲ್ಲ ಸರಿ ಹೋಗುಲ್ಲ. ನನೀನು ಬೇರೆ ಊರಿಗೆ ಹೋದರೆ, ಚಿಂಪಿ ಮದುವೆಯಾದರೆ, ನಮಗ್ಯಾಕೆ ಇಷ್ಟು ದೊಡ್ಡ ಮನೆ ? ಇದನ್ನು ಬಾಡಿಗೆಗೆ ಕೊಟ್ಟು ಒಂದು ಚಿಕ್ಕ ಮನೆಯಲ್ಲಿರುತ್ತೇವೆ ಅಷ್ಟೆ.. ''

''ಯಾಕೆ ? ಅಳಿಯ ಮಗಳು ಮನೆಗೆ ಬರೋದೇ ಇಲ್ವೆ ? ಮಗನಿಗೆ ಮದುವೆ ಮಾಡಲ್ವೆ ! ಮೊದಲೇ ಸೊಸೆಯ ಸಹವಾಸ ಹೇಗೋ ? ಸಣ್ಣ ಮನೆ ಅಂತ ನನ್ನನ್ನು ತಾನೇ ಹಂಗಿಸೋದು.... ''

ಅಣ್ಣ ತಂಗಿ ಮುಖ ಮುಖ ನೋಡಿಕೊಂಡು ನಕ್ಕರು. ಮಾತು ಎಲ್ಲಿಂದೆಲ್ಲಿಗೋ ಹೋಗಿತ್ತು. ಅಮ್ಮನಿಗಾಗಲೇ ಸೊಸೆಯ, ಅಳಿಯನ ಚಿಂತೆ.... ಅಳಿಯ ಎಷ್ಟಾಗಲೀ ಹೊರಗಿನವನು, ಸೊಸೆ ? ಅಂದರೆ ನನ್ನ ಪತ್ನಿಯಾಗುವವಳು ಹೇಗಿರುತ್ತಾಳೋ... ? ದುಂಡು ಕೆನ್ನೆಗಳ, ಪೋನಿ ಟೈಲ್‌ನ ಮಿಡಿ ಡ್ರೆಸ್‌ನಲ್ಲಿ ಕುಂಟು ಬಿಲ್ಲೆಯಾಡುತ್ತಿದ್ದ ಆ ಹುಡುಗಿಯ ರೂಪ ಇವನ ಕಣ್ಣ ಮುಂದೆ ತೇಲಿ ಬಂತು.

''ಊಟ ಮುಗಿದಿದ್ರೆ ಎದ್ದು ಕೈ ತೊಳ್ಕೋ. ... ಹೋಗಿ ಮಲಕ್ಕೋ. ಸೊಗಸಾದ ಕನಸು ಬೀಳುತ್ತೆ. ಅದು ಬಿಟ್ಟು ತಟ್ಟೆ ಮುಂದೆ ಕೂತು ಅದೇನು ಕನಸು ಕಾಣ್ತೇದೀಯಾ?'' ತಂಗಿ ಕೆಣಕಿದಳು.

''ನಿಜ ಹೇಳ್ಲಾ ಚಿಂಪಿ... ನಾನು ಆ ಬಜಾರಿ ಹುಡುಗಿ ಬಗ್ಗೇನೇ ಚಿಂತಿಸ್ತಿದ್ದೆ. ''

''ಅಮ್ಮಂಗೆ ಹೇಳ್ಲಾ? ''

''ಹೇಳು. ಏನೀಗ ? ಯಾವುದಾದ್ರೂ ಒಂದು ಸುಂದರವಾದ ವಸ್ತುನ ನೋಡಿದ ಮೇಲೆ ಅದೇ ಕಣ್ಣ ಮುಂದೆ ಮತ್ತೆ ಮತ್ತೆ ಬರುತ್ತೇ ತಾನೇ ..... ಹಾಗೆ ... ''

''ಅಂದ್ರೇ.. ಆ ಬಜಾರಿ ಒಂದು ಸುಂದರವಾದ ವಸ್ತೂನ ? ''

''ವಸ್ತುವಲ್ಲ, ಹುಡುಗಿ. ನಿನಗೆ ಅದೆಲ್ಲ ಅರ್ಥವಾಗಲ್ಲ. ನೀನಿನ್ನೂ ಚಿಕ್ಕವಳು. ''

''ಇರಲಿ ಪರವಾಗಿಲ್ಲ ಹೇಳು. ನಾನೇನು ಸದಾ ಕಾಲಕ್ಕೂ ಹೀಗೇ ಚಿಕ್ಕವಳಾಗಿಯೇ ಇರಲ್ಲ.''

''ಸರಿ ಹಾಗಾದ್ರೆ... ಇಲ್ಲಿ ಬೇಡ. ಮೇಲೆ ಬಾಲ್ಕನಿಯಲ್ಲಿ ಕೂತು ಮಾತಾಡೋಣ. ಹೇಗೂ ಬಾಲ್ಕನಿ ಇವತ್ತಿಗೆ ಮಾತ್ರ ನಮ್ಮದು. ನಾಳೆ ನಾಡಿದ್ದು ಅತಿಥಿಗಳಿಗೆ ...ಅಷ್ಟರಲ್ಲಿ ಈ ವಿಷಯವೆಲ್ಲಾ ಹಳೆಯದಾಗಿರುತ್ತೆ. ''

''ಆಯ್ತಪ್ಪಾ ... ಅಮ್ಮನಿಗೆ ಸ್ವಲ್ಪ ಸಹಾಯ ಮಾಡಿ ಬರ್ತೀನಿ... ನಿದ್ದೆ ಮಾಡಿ ಬಿಡಬೇಡ ಮಾರಾಯ...''

''ಸುಮ್ನೆ ಬಾರೇ..'' ಲಘುವಾಗಿ ರೇಗಿ, ಎದ್ದು ಕೈತೊಳೆದು ಮಹಡಿಯನ್ನೇರಿದ. ಚಂಪಕ ಉಳಿದ ಕೆಲಸಗಳಲ್ಲಿ ತಾಯಿಗೆ ಸಹಾಯ ಮಾಡಿ, ಮಹಡಿಗೆ ಬರುವಷ್ಟರಲ್ಲಿ ಚಂದ್ರ ಗೊರಕೆ ಹೊಡೆಯುತ್ತಿದ್ದ. 'ನಂಗೊತ್ತಿತ್ತು' ಎಂದುಕೊಳ್ಳುತ್ತಾ, ಚಂಪಕ ತನ್ನ ರೂಮಿಗೆ ನಡೆದಳು.

  

''ಇವತ್ತು ಪಕ್ಕದ ಮನೆಯೋರು ಕರೆಯೋಕೆ ಬಂದಿದ್ರು. ನಾಳೆ ದಿನ ಎಲ್ರಿಗೂ ಅಲ್ಲೇ ಊಟ, ನಾನೂ, ಚಿಂಪಿಯಂತೂ ಹೋಗೇ ಹೋಗ್ತೀವಿ. ನಿಮ್ಮಪ್ಪ ಆಫೀಸ್ಗೆ ರಜ ಹಾಕಲ್ಲ. ನೀನೇನ್ಮಾಡ್ತಿಯೋ ಚಂದ್ರಾ... ನೀನೂ ಬರ್ತೀಯಾ ಹೇಗೆ ? ...'' ಗೌರಮ್ಮ ಕೇಳಿದಳು.

''ನಾನು ಬರಲ್ಲಮ್ಮ. ನನಗೆ ಸರಿ ಹೋಗಲ್ಲ''

''ಎಲ್ರಿಗೂ , ಖಂಡಿತಾ ಬಂದೇ ಬರಬೇಕೂಂತ ಹೇಳಿದಾರೆ... ''

''ಅಮ್ಮ ನಂಗೂ ಬರಕ್ಕೆ ಇಷ್ಟಾನೇ ಇಲ್ಲ '' ಚಿಂಪಿ ಗೊಣಗಿದಳು.

''ಸಾಕು ಸುಮ್ನಿರೇ... ನೀನೂ ಬರದಿದ್ರೆ ಏನಂದುಕೊಳ್ತಾರೆ ?''

''ಏನೂ ಅಂದ್ಕೊಳಲ್ಲ . ಏನೋ ಒಂದು ನೆವ ಹೇಳಿದ್ರಾಯ್ತು ''

''ಹೆಣ್ಣು ಹುಡುಗಿಯಾಗಿ ಹೀಗೆಲ್ಲಾ ಆಡಬಾರ್ದು. ನಾಳೆ ಬೆಳಿಗ್ಗೆ ಒಂದ್ಹೊತ್ತಿನ ಅಡಿಗೆ ಕೆಲಸನಾದ್ರೂ ತಪ್ಪುತ್ತೆ ಅಂತ ಅಂದ್ಕೊಂಡೆ. ಹೋಗ್ಲಿ ಊಟದ ಹೊತ್ತಿಗಾದ್ರೂ ಬರ್ತಿಯೇನೋ ....? ''

''ಥೂ ಹೋಗಮ್ಮ, ಬರೀ ಊಟಕ್ಕೆ ಅಂತ ಯಾರು ಬರ್ತಾರೆ ? ನಗ್ತಾರೆ ಅಷ್ಟೆ''

'' ಅದಕ್ಕೆಲ್ಲ ಯಾರೂ ನಗಲ್ಲ. ಹೇಗೂ ಅಡಿಗೆಯವರನ್ನು ಕರ್ಸಿದೀವಿ. ರಾತ್ರಿಯ ಊಟಕ್ಕೂ ಅಲ್ಲಿಗೇ ಬಂದು ಬಿಡಿ ಅಂತ ಹೇಳಿದ್ರು. ಈಗಲೂ ಅಷ್ಟೇ ಇವತ್ತಿನ ರಾತ್ರಿಗೂ ಅನ್ನ ಹುಳಿ ಹಪ್ಪಳ ಸಂಡಿಗೆ ಪಲ್ಯ ಎಲ್ಲಾ ತಂದಿಟ್ಟಿದಾರೆ...'' ತಾಯಿ ಸಂಭ್ರಮದಿಂದ ಹೇಳಿದಾಗ ಅಣ್ಣ ತಂಗಿ ಮುಖ ಮುಖ ನೋಡಿಕೊಂಡರು.

''ಏನಮ್ಮಾ ನಿನಗೆ ನಾಚಿಕೇನೇ ಇಲ್ವಾ ? ಅಪ್ಪ ಖಂಡಿತಾ ಬೈತಾರೆ ಅಷ್ಟೇ''

''ನನಗ್ಯಾಕೋ ನಾಚಿಕೆ ? ನಾನೇನು ಕೇಳಿದ್ನಾ.... ಮಾಡಿದ ಅಡಿಗೇನ ನನಗೂ ಕಳಿಸಿ ಅಂತ. ಏನೋ ಅಕ್ಕ ಪಕ್ಕದೋರೂ ಅಂತಂದ್ರೆ ಅದೊಂದು ತರಹದ ಸಂಬಂಧ... ''

'' ಹೌದು, ಹೌದು. ರಾತ್ರಿ ಎಲ್ರೂ ಬಂದು ಮಲಗ್ತಾರಲ್ಲ.. ಅದಕ್ಕೂಇದಕ್ಕೂ ವಜಾ ಅಷ್ಟೇ...''

''ಥೂ ಹಾಗೆಲ್ಲಾ ಹೇಳಬಾರದು. ನೀವುಗಳು ಇನ್ನೂ ಚಿಕ್ಕವರು. ನಿಮ್ಮಗಳದ್ದೇ ಸಂಸಾರ ಬೆಳೆದ ಮೇಲೆ ಇದೆಲ್ಲಾ ತಾನಾಗಿಯೇ ಅರ್ಥವಾಗುತ್ತೆ. ''

''ಮತ್ತೆ... ಇದೆಲ್ಲ ಅಪ್ಪನಿಗೇಕೆ ಅರ್ಥವಾಗಲ್ಲ? ''

''ಅವರು ಒಂಟಿಯಾಗಿ ಬೆಳೆದವರು. ಅಪ್ಪ ಅಮ್ಮ ಇರಲಿಲ್ಲ. ಸೋದರತ್ತೆಯ ಕೈಕೆಳಗೆ ಬೆಳೆದವರು. ಅವರ ರೀತಿ ನೀತಿನೇ ಸರಿಯಿಲ್ಲ. ''

''ಏನು ಸರಿಯಿಲ್ಲ ? ಅದೇನು ಸದಾ ನನ್ನ ಮೇಲೆ ಪಿತೂರಿ ನಡೆಸ್ತಿರ್ತೀಯಾ ? ನೀವೇಲ್ಲಾ ಒಂದು, ನಾನೇ ಒಂದಾ ?..... ಅಚ್ಚತ್ತೆ ನನ್ನನ್ನು ಸರಿಯಾಗಿಯೇ ಬೆಳೆಸಿದಾರೆ.... ನೀನೇ ನಿನ್ನ ಮಕ್ಕಳನ್ನು ಸರಿಯಾಗಿ ಬೆಳೆಸುತ್ತಿಲ್ಲ. ಅವರುಗಳು ಹೇಳಿದ ಹಾಗೆ ಕೇಳ್ತಿಯ. ...''

''ಇಲ್ಲ ಅಪ್ಪಾ... ನಾವು ಅಮ್ಮ ಹೇಳಿದ ಹಾಗೆ ಕೇಳ್ತಿಲ್ಲ ಅಷ್ಟೇ ಅದೇ ಚರ್ಚೆ ನಡೀತಿತ್ತು ಅಷ್ಟೇ. ''

''ನಂಗೆಲ್ಲಾ ಗೊತ್ತು. ನಾಳೆ ದಿನ ಅವರ ಮನೆಯ ಫಂಕ್ಷನ್‌ಗೆ ಹೋಗಿ ಬರೋದೇ ಒಂದು ಸಮಸ್ಯೇನಾ ? ಕೇಶವನ ತಾಯಿ ನನಗೂ ತಾಯಿಯಿದ್ದ ಹಾಗೆ. ಆಕೇನ ನೋಡಿದ್ರೆ ಅಚ್ಚತ್ತೇನೇ ನೆನಪಿಗೆ ಬರ್ತಾರೆ. ನಾನು ನಾಳೆ ರಜೆ ಹಾಕ್ತೀನಿ. ನಾವೆಲ್ರೂ ಅವರ ಮನೆ ಫಂಕ್ಷನ್‌ಗೆ ಹೋಗೋಣ.... ''

ಮೈಲಾರಯ್ಯನ ಮಾತಿಗೆ ಎಲ್ಲರೂ ಬೆರಗಾದರು. ಗೌರಮ್ಮನಂತೂ ಮೂಕಿಯಾಗಿದ್ದಳು. ಆತನೇ ಮತ್ತೆ ಎಚ್ಚರಿಸಿದ. ''ಬೇಗ ತಟ್ಟೆ ಹಾಕು ಊಟಮಾಡಿ ಮಲಗೋಣ. ಮೇಲಿನ ರೂಮುಗಳನ್ನು ತೆರವು ಮಾಡಿದೀರಿ ತಾನೇ ? ಒಂದಿಷ್ಟು ಹೊದ್ದಿಕೆ ದಿಂಬುಗಳನ್ನು ತೆಗೆದಿಟ್ಟಿರು. ಯಾರಿಗಾದ್ರೂ ಬೇಕಾಗಬಹುದು... ''

''ನಾಳೆ ಸೂರ್ಯ ಖಂಡಿತಾ ಪಶ್ಚಿಮ ದಿಕ್ಕಿನಲ್ಲೇ ಕಣೆ ಹುಟ್ಟೋದು... '' ಗೌರಮ್ಮ ಮಗಳ ಕಡೆ ನೋಡಿ ವ್ಯಂಗ್ಯ ನಗೆ ನಕ್ಕಳು.

''ನಾನೂ ಮನುಷ್ಯನೇ ಕಣೇ. ಅಚ್ಚತ್ತೆ ನನ್ನನ್ನು ಮನುಷ್ಯನ ತರಹವೇ ಬೆಳೆಸಿರೋದು... ''

''ಮತ್ತೆ ಅವತ್ತು ಯಾಕೆ ಹಾಗಾಡಿದ್ರಿ?''

''ಅದೆಲ್ಲಾ ಯಾರೆ ಈಗ ? ಬೇಗ ಬಡಿಸು. ಅವರುಗಳೆಲ್ಲಾ ಬರೋ ಹೊತ್ತಿಗೆ ನಾನಂತೂ ಮಲಗಿರಲೇಬೇಕು. ಇಲ್ಲದಿದ್ರೆ ನಾನೇ ಬಾಗಿಲು ತೆಗಿಯಬೇಕು. ಬೇಕೋ ಬೇಡವೋ ಎಲ್ಲರ್ನೂ ಮಾತ್ನಾಡಿಸಬೇಕು. ನನಗಂತೂ ಅದೆಲ್ಲಾ ಇಷ್ಟವಿಲ್ಲ.'' ಎನ್ನುತ್ತಾ ಅನ್ನ ಹುಳಿಯನ್ನು ಕಲೆಸಲಾರಂಭಿಸಿದ.

''ಈ ಅನ್ನ ಹುಳಿ ಎಲ್ಲಾ ಪಕ್ಕದ ಮನೆಯವರು ಕಳಿಸಿದ್ದು. ಸೇರುತ್ತೋ ಇಲ್ವೋ? ಸೇರದಿದ್ರೆ ಹೇಳಿ, ಬೆಳಗಿನ ಸಾರು ಇದೆ ಹಾಕ್ತೀನಿ.''

‘‘ಇರಲಿ, ಪರವಾಗಿಲ್ಲ ತಿಂತೀನಿ. ದಿನಾ ನಿನ್ನ ಕೈನ ಅಡಿಗೇನ ತಿಂದೂ ತಿಂದೂ ಬೇಜಾರಾಗಿದೆ. ಇವತ್ತು ಒಂದು ಛೇಂಜ್.... ಇನ್ನು ಸ್ವಲ್ಪ ಹುಳಿ ಹಾಕು. ’’

‘‘ನೀವ [illegible]ೂ ಏನೂಂತ ನನಗಿನ್ನು ಅರ್ಥವಾಗಿಲ್ಲ’’ ಗೌರಮ್ಮ ಗೊಣಗುತ್ತಾ ಬಡಿಸಿದಳು. ಅಣ್ಣತಂಗಿ ಮುಸಿ ಮುಸಿ ನಕ್ಕರು.

  

ಮುಂದಿನ ಬಾಗಿಲಿನ ಕರೆಗಂಟೆ ಸದ್ದಾದಾಗ, ಸೋಫಾದ ಮೇಲೆ ಕುಳಿತಿದ್ದ ಚಂದ್ರನೇ ಎದ್ದು ಹೋಗಿ ಬಾಗಿಲು ತೆರೆದ. ಎದುರಿಗೆ ಒಂದಿಷ್ಟು ಹುಡುಗಿಯರು ನಿಂತಿದ್ದರು. ಅವನು ತಬ್ಬಿಬ್ಬಾದ.

‘‘ನಾವು ನಿಮ್ಮ ಮನೇಲಿ ಮಲಕ್ಕೋಳೋಕೆ ಬಂದಿದೀವಿ.’’ ಒಂದು ಚಿಕ್ಕ ಹುಡುಗಿ ಮುದ್ದಾಗಿ ನುಡಿಯಿತು. ಚಂದ್ರ ಎರಡು ಹೆಜ್ಜೆ ಹಿಂದೆ ಸರಿದು ‘ಚಿಂಪೀ....ಚಿಂಪಿ ಬಾಯಿಲ್ಲಿ’ ಅಂತ ಕರೆದ. ಚಿಂಪಿ ಒಳಗಿನಿಂದ ಬಂದಳು.

‘‘ನೋಡು... ನಮ್ಮ ಪಕ್ಕದ ಮನೆಯ ಗೆಸ್ಟ್‌ಗಳು. ಮಲಕ್ಕೊಳ್ಳೋಕೆ ಅಂತ ಬಂದಿದಾರೆ... ಹಾಸಿಗೆ ದಿಂಬು, ಹೊದ್ದಿಕೆ, ಎಲ್ಲಾ ರೆಡಿಯಾಗಿದೆ ತಾನೇ.... ? ’’ ಕಿಸಿಕಿಸನೆ ನಗುತ್ತಾ ಕೇಳಿದ.

‘‘ಯಾಕ್ರೀ ನಗೋದು ? ’’ ಹೊರಗಿನಿಂದ ಒಂದು ಹೆಣ್ಣು ಧ್ವನಿ ಸ್ವಲ್ಪ ಎತ್ತರದ ಧ್ವನಿಯಲ್ಲಿ ಕೇಳಿದಾಗ ಸ್ವಲ್ಪ ಮೆತ್ತಗಾದ.

‘‘ನೀನೇ ಸಂಭಾಳಿಸಮ್ಮ.... ಎನ್ನುತ್ತಾ ಅಲ್ಲಿಂದ ಸರಿದ.’’

‘‘ದೊಡ್ಡೋರು ಯಾರೂ ಬಂದಿಲ್ವಾ ? ’’ ಚಂಪಕ ಕೇಳಿದಳು.

‘‘ನಮಗೆಲ್ಲಾ ತುಂಬಾ ನಿದ್ದೆ ಬರ್ತಿದೆ. ಅದಕ್ಕೇ ನಮ್ಮನ್ನೆಲ್ಲ ಕಳಿಸಿದ್ರು... ಅವರೆಲ್ಲಾ ಊಟ ಮಾಡ್ತಿದ್ದಾರೆ. ಆಮೇಲೆ ಬರ್ತಾರಂತೆ.’’ ಅದೇ ಹುಡುಗಿ ಮತ್ತೆ ಅದೇ ಮಧುರ ಧ್ವನಿಯಲ್ಲಿ ನುಡಿಯಿತು.

‘‘ಮಹಡಿ ಮೇಲೆ ಜಮಖಾನ, ಹಾಸಿಗೆ, ದಿಂಬು, ಹೊದ್ದಿಕೆ ಎಲ್ಲಾ ಇದೆ. ಹೋಗಿ ಮಲಗಿಕೊಳ್ಳಿ’’ ಅಷ್ಟೇ ಹೇಳಿದ್ದೇ ಸಾಕು ಎಂಬಂತೆ ಒಂದನ್ನೊಂದು ತಳ್ಳಿಕೊಂಡು ಓಡಿದವು. ಎಲ್ಲರ ಹಿಂದೆ ಬಂದವಳು ಪೂರ್ಣಿಮಾ. ಚಂದ್ರನಿಗೆ, ಮೊದಲಿಗೆ ಅವಳ ಗುರುತು ಸಿಗಲಿಲ್ಲ. ಚಿಂಪಿ ಅವನ ಕಡೆ ನೋಡಿ ಮೂತಿ ಸೊಟ್ಟಗೆ ಮಾಡಿದಳು. ಬಿಚ್ಚಿದ ತಲೆ ಗೂದಲಿನ ನಡುವೆ ದುಂಡನೆಯ ಮುಖ ಮುಚ್ಚಿಹೋಗಿತ್ತು. ಉಟ್ಟಿದ್ದ ನೈಟಿಯೊಳಗೆ ಚಿಕ್ಕವಳಂತೆ ಕಾಣುತ್ತಿದ್ದಳು.

ಚಂದ್ರ ಮುಗುಳ್ನಕ್ಕು ತಲೆ ಕೆರೆದುಕೊಂಡ ಅವನ ಕಣ್ಣುಗಳು ಅವಳನ್ನೇ ಹಿಂಬಾಲಿಸಿದವು. ಮಹಡಿ ಮೆಟ್ಟಲ ಬಳಿ ನಿಂತು ಹಿಂತಿರುಗಿ ಅವರಿಬ್ಬರ ಕಡೆ ನೋಡಿದಳು. ‘‘ಸ್ವಲ್ಪ ಕುಡಿಯೋಕೆ ನೀರು ಬೇಕಾಗಿತ್ತು’’ ಸುಮಧುರ ಸಂಗೀತದಂತೆ ಕೇಳಿಸಿತು ಅವಳ ಧ್ವನಿ. ... ತಾನು ಹೋಗಿ ತಂದುಕೊಡಬೇಕೋ.. ಅಥವಾ ತಂಗಿಗೆ ತಂದುಕೊಡು ಎಂದು ಅಪ್ಪಣೆ ಮಾಡಬೇಕೋ ತಿಳಿಯದೆ ಪೆದ್ದನಂತೆ ನಿಂತೇ ಇದ್ದ. ತುಟಿ ಸೊಟ್ಟಗೆ ಮಾಡುತ್ತಾ ಚಿಂಪಿಯೇ ಒಳ ನಡೆದಳು. ಚಂದ್ರ ನೇರವಾಗಿ ಅವಳನ್ನೇ ನೋಡಲಾಗದೆ ಕಸಿವಿಸಿಗೊಂಡ.

ಅಷ್ಟರಲ್ಲಿ ತಂಗಿ ನೀರಿನ ಜಗ್ ಮತ್ತು ಲೋಟಗಳನ್ನು ತಂದು ಪೂರ್ಣಿಮಾಳ ಕೈಗಿತ್ತಳು. 'ಥ್ಯಾಂಕ್ಸ್' ಎಂದು ನುಡಿದಳು ಅದೇ ಸರಿಗಮದ ಧ್ವನಿಯಲ್ಲಿ. ಚಂದ್ರ ಯಾವುದೋ ಧ್ಯಾನದಲ್ಲಿ ಮುಳುಗಿ ಹೋಗಿದ್ದ. ಪೂರ್ಣಿಮಾ ಮಹಡಿ ಹತ್ತಿ ಹೋಗಿದ್ದಳು.

''ನಾನು ಹೋಗಿ ಮಲಗ್ತೀನಪ್ಪಾ... ಉಳಿದ ಗೆಸ್ಟ್‌ಗಳನ್ನು ನೀನು ವಿಚಾರಿಸ್ಕೋ ....'' ಎನ್ನುತ್ತಾ ಚಿಂಪಿ ಒಳಗೆ ಹೊರಟು ಹೋಗಿದ್ದಳು. ಚಂದ್ರ ಅಲ್ಲಿದ್ದ ಸೋಫಾದ ಮೇಲೆ ಕುಳಿತು ಕುಂಟೆಬಿಲ್ಲೆಯಾಡುತ್ತಿದ್ದ ಮಿಡಿ ಸ್ಕರ್ಟ್‌ನ ಹುಡುಗಿಗೂ, ಈ ದಿನದ ನೈಟಿ ಧರಿಸಿರುವ ಹುಡುಗಿಗೂ ಎಷ್ಟು ಅಂತರ ಅಂದುಕೊಂಡ.

''ಇದ್ಯಾಕೋ ಇಲ್ಲಿ ಕೂತಿದೀಯ ? ಹೋಗಿ ಮಲಗಬಾರದೇ... ಬೀದಿ ಬಾಗಿಲು ಯಾಕೆ ತೆಗೆದೇ ಇದೆ'' ಎನ್ನುತ್ತಾ ಗೌರಮ್ಮ ಒಳಗಿನಿಂದ ಬಂದವಳು ಮಗನನ್ನು ಪ್ರಶ್ನಿಸಿದಳು.

''ಪಕ್ಕದ ಮನೆಯೋರು ಮಲಗುಕ್ಕೆ ಬರ್ತಾರೆ ಅಂತ ಅಂದೆಯಲ್ಲಮ್ಮ...''

''ಒಂದ್ಹೊಟ್ಟತ್ತು ಹುಡುಗೀರು ಬಂದ್ರು ಅಂತ ಚಿಂಪಿ ಹೇಳಿದಳು... ಮತ್ತೆ ಯಾರು ಬರ್ತಾರಂತೆ ?''

''ಯಾರೋ ನಂಗೇನು ಗೊತ್ತು?....'' ಸಿಡುಕಿದ.

''ನೀನುಹೋಗಿ ಮಲಕ್ಕೋ.... ಬಂದೋರ್ಗೆ ನಾನು ಬಾಗಿಲು ತೆಗೀತೀನಿ...''

''ಬೇಡಮ್ಮ... ನೀನ್ಯಾಕೆ ಅವರ್‍ಯಾರಿಗೋ ಕಾಯ್ತಾ ಕೂತ್ಕೋಬೇಕು ? ನಾನು ಇಲ್ಲೇ ಕೂತ್ಕೊಂಡು ಓದ್ತಾ ಇರ್ತೀನಿ.... ಆಮೇಲೆ ಮಲಗ್ತೀನಿ.''

''ಸರಿಯಾಗಿ ಮುಂಬಾಗಿಲನ್ನು ನೋಡಿಬಿಟ್ಟು ಹೋಗಿ ಮಲಕ್ಕೋ. ಎಷ್ಟು ಹೊತ್ತಾಗುತ್ತೋ ಏನೋ... ಅದಕ್ಕೇ ನಿಮ್ಮಪ್ಪ ಹೇಳೋದೇ ಸರಿ '' ಇಂಥ ಮುಲಾಜಿಗೆಲ್ಲ ತಲೆಯಾಡಿಸಲೇ ಬಾರದು.

''ಬಿಡಮ್ಮ.... ಒಂದೊಂದು ಸಲ ಒಂದೊಂದು ತರಹ ಮಾತಾಡ್ತೀಯ. ಅಪ್ಪಂಗೆ ಕೇಳಿಸಿದ್ರೆ ಎದ್ದು ಬರ್ತಾರೆ ಅಷ್ಟೇ. ಮತ್ತೆ ಶುರುವಾಗುತ್ತೆ ನಿಮ್ಮ ಜಗಳ.'' ತಾಯಿ ಅವನ ಮಾತಿಗೆ ಉತ್ತರಿಸದೇ ತನ್ನ ಪಾಡಿಗೆ ತಾನು ಮಲಗಲು ಹೊರಟಳು. ಚಂದ್ರ ಆಕಳಿಸಿದ. ಹಾಗೆ ಸೋಫಾದ ಮೇಲೆ ಉರುಳಿಕೊಂಡ. ದೀಪ ಉರಿಯುತ್ತಿದ್ದರೂ, ಕಣ್ಣುಗಳು ಎಳೆದುಕೊಂಡು ಹೋಗಿ ನಿದ್ದೆಯ ಆಳಕ್ಕೆ ಇಳಿದು ಹೋದ.

ಬೆಳಗಿನ ಝಾವದಲ್ಲಿ ತಾಯಿ ಬಂದು ಎಬ್ಬಿಸಿದಾಗಲೇ ಅವನಿಗೆ ಎಚ್ಚರವಾದದ್ದು. 'ಏಳೋ ಚಂದ್ರ.... ಏಳು... ಎದ್ದು ಒಳಗೆ ಹೋಗಿ ಮಲಕ್ಕೋ.... ರಾತ್ರಿ ದೀಪವನ್ನು ಸಹ ಆರಿಸಿಲ್ಲ.... ಬಾಗಿಲನ್ನು ಸಹ ಸರಿಯಾಗಿ ಹಾಕಿಲ್ಲ... ಇಲ್ಲಿ ಯಾರು ಈ ದೀವಾನದ ಮೇಲೆ ಮಲಗಿರೋದು ?''

''ನಂಗೊತ್ತಿಲ್ಲಮ್ಮ.... ಯಾವಾಗ ನಿದ್ದೆ ಬಂತೋ ಗೊತ್ತಾಗ್ಲೇ ಇಲ್ಲ. ಚಳಿ ಕೂಡಾ ಆಗ್ಲಿಲ್ಲ. ಇಲ್ಲಿ ಮುಸುಕೆಳೆದು ಮಲಗಿರೋರು ಯಾರು ? ಚಿಂಪಿ ಅಂತ ಕಾಣುತ್ತೆ... ಏಳೇ ಚಿಂಪಿ ಇಲ್ಯಾಕೇ ಮಲಗಿದೀಯ ಎನ್ನುತ್ತಾ ಮುಸುಕೆಳೆದು, ಬೆಚ್ಚಿ ಹಾಗೇ ಹಿಂದಕ್ಕೆ ಸರಿದ. ತಾಯಿ ಅವನ ಕಡೆ ಗಮನಕೊಡದೆ ಬಚ್ಚಲುಮನೆಯ ಕಡೆ ನಡೆದಿದ್ದಳು. ಮತ್ತೆ ಹಾಗೇ ಮುಸುಕನ್ನು ಹೊದಿಸಿ , ಸಪ್ಪಳ ಮಾಡದಂತೆ ಹೆಜ್ಜೆಹಾಕಿ, ರೂಮಿನೊಳಗೆ ಹೋಗಿ

ಹಾಸಿಗೆಯ ಮೇಲೆ ಬಿದ್ದುಕೊಂಡು ಮುಸುಕೆಳೆದು ಮಲಗಿದ.

ಕೆಲವು ಕ್ಷಣಗಳ ಹಿಂದೆ ಮುಸುಕಿನೊಳಗೆ ಕಂಡ ಮುಖವನ್ನು ನೆನೆಸಿಕೊಂಡ. ಮೈಯೆಲ್ಲಾ ಸತ್ವವನ್ನು ಕಳೆದುಕೊಂಡಂತೆನಿಸಿತು. ಅಬ್ಬಾ ಎಷ್ಟು ಧೈರ್ಯ ! ಮೇಲಿನಿಂದ ಯಾವಾಗಲೋ ಇಳಿದು ಬಂದು, ತನ್ನಿಂದ ಕೆಲವೇ ಅಡಿಗಳ ಅಂತರದಲ್ಲಿ ಆ ದೀವಾನದ ಮೇಲೆ ಮಲಗಲು ಎಷ್ಟು ಧೈರ್ಯ ? ಯಾರಾದ್ರೂ ನೋಡಿದ್ರೆ ! ..... ಯಾರಿಗಾದ್ರೂ ಗೊತ್ತಾದ್ರೆ ಏನಂದುಕೊಳ್ಳಬಹುದು ? ಅಮ್ಮಂಗೆ ಏನಾದ್ರೂ ಅನುಮಾನ ಬಂದು ಕೇಳಿದ್ರೆ ಏನು ಹೇಳೋದು ? ನಿಜಾನೇ ಹೇಳಿ ಬಿಡೋದು... ನಂಬಿದರೆ ನಂಬಲಿ... ಬಿಟ್ಟರೆ ಬಿಡಲಿ... ಆದರೆ ಒಂದು ಗಳಿಗೆಯಲ್ಲಿ ಎಷ್ಟು ಹೆದರಿಸಿ ಬಿಟ್ಟಳಲ್ಲ.. ಅವನ ನಿದ್ದೆ ಹಾರಿ ಹೋಗಿತ್ತು. ಅವಳು ಎಷ್ಟು ಹೊತ್ತಿಗೆ ಏಳುವಳೋ... ಎದ್ದಮೇಲೆ ಏನೇನು ಮಾತುಕತೆಗಳಾಗುತ್ತವೋ ಎನ್ನುವುದನ್ನೇ ಕಾಯುತ್ತಾ ಆತಂಕ ಮಿಶ್ರಿತ ಉದ್ವೇಗದಿಂದ ಬೆಳಗಾಗುವುದನ್ನೇ ಎದುರು ನೋಡುತ್ತಾ ಮುಸುಕಿನೊಳಗೆ ಮಿಸುಕಾಡಿದ.

ನಿತ್ಯದಂತೆ ಬೆಳಗಿನ ಕಾರ್ಯಕ್ರಮಗಳು ಪ್ರಾರಂಭವಾಗಿದ್ದವು. ಪಕ್ಕದ ಮನೆಯ ಸಮಾರಂಭಕ್ಕೆ ಬಂದಿದ್ದವರಲ್ಲಿ ಕೆಲವರು ಇಲ್ಲಿಯೇ ಸ್ನಾನಕ್ಕೆ ಬಂದಿದ್ದರು. ಅವರಿವರ ಪಿಸುಮಾತು, ಸರಭರ ಓಡಾಡುವ ಸದ್ದು ಕೇಳಿಸಿದರೂ ಎದ್ದು ಬಂದು ನೋಡುವ ಕುತೂಹಲ ಯಾರಿಗೂ ಇರಲಿಲ್ಲ. ಗೌರಮ್ಮನೇ ಬಂದು ಒಬ್ಬೊಬ್ಬರನ್ನಾಗಿ ಎಬ್ಬಿಸಿದಳು.

''ಅವರ ಮನೆಯ ಕಲಾಪಗಳು ಒಂದೊಂದಾಗಿ ಶುರವಾಗಿದೆ. ನಾನು ಹೊರಡ್ತೀನಿ. ನೀವುಗಳೂ ಸ್ನಾನ ಮಾಡಿ ತಿಂಡಿ ತಿಂದು ಬನ್ನಿ''

''ಏನು ತಿಂಡಿ ಮಾಡಿಟ್ಟಿದ್ದೀಯ ? ''

''ಪಕ್ಕದ ಮನೆಯಿಂದಲೇ ತಿಂಡಿ ಬರುತ್ತೆ. ಕಳಿಸ್ತೀನಿ ಅಂತ ಅವತ್ತೇ ಹೇಳಿದ್ದರು.''

''ನನಗೆ ಓದೋದು ತುಂಬಾ ಇದೆ. ನಾನು ಬರಲ್ಲಮ್ಮ''

''ನಿನ್ನಿಷ್ಟ ಇಂಥಾ ಸಮಾರಂಭಗಳು ಅಪರೂಪ ... ಪುಣ್ಯ ಮಾಡಿರೋರಿಗೆ ಇಂತಹ ಅವಕಾಶಗಳು ಸಿಗೋದು...''

''ಎಂತಹ ಅವಕಾಶ ? ನೋಡೋದೋ ಮಾಡಿಸಿ ಕೊಳ್ಳೋದೋ ? ''

''ಎರಡೂನೂ.... ಜೊತೆಗೆ ಮಾಡುವ ಅವಕಾಶಾನೂ ..ಅಜ್ಜಿಗೆ ಕನಕಾಭಿಷೇಕ ಮಾಡಿಸ್ತಾ ಇರೋದು ಮಲಮಗ. ಆದರೇನಂತೆ , ಹೆತ್ತ ತಾಯಿಗಿಂತ ಹೆಚ್ಚಾಗಿ ನನ್ನನ್ನು ನೋಡಿಕೊಂಡಿದಾರೆ. ಅವರು ಚಿಕ್ಕಮ್ಮ ಅಂತ ಅನ್ನಿಸೋದೇ ಇಲ್ಲ ಅಂತ ಹೇಳ್ತಾರಂತೆ. ಅವರ ಹಿರಿಯ ಮಗನಿಗೆ ಗಂಡು ಮಗ ಹುಟ್ಟಿದೆಯಂತೆ. ನೋಡಿ ಎಂಥಾ ಪುಣ್ಯವಂತೆ., ಸ್ವಂತ ಮಕ್ಕಳು ಕೂಡಾ ಇಷ್ಟು ಒದ್ದಾಡಲ್ಲ ತಂದೆ ತಾಯಿಗಳಿಗೋಸ್ಕರ....''

''ಅಮ್ಮಾ... ಯಾಕೋ ಬೋರ್ ಆಗ್ತಿದೆ... ಈ ಟಾಪಿಕ್ ಚೇಂಜ್ ಮಾಡ್ತೀಯಾ?''

''ನಿಮ್ಮಗಳ ಹತ್ತಿರ ಮಾತಾಡ್ತಾನೇ ಕೂತಿರೋಕೆ ನನಗೆ ಬಿಡುವಿಲ್ಲ, ನಾನು ಹೊರಡ್ತೀನಿ. ನೀವುಗಳು ಯಾವಾಗ ಬರ್ತೀರೋ ಆಗ ಬನ್ನಿ''

''ಹಾಗಾದ್ರೆ ನಾನು ಊಟದ ಹೊತ್ತಿಗೆ ಬರ್ತೀನಿ. ಮೀಟಿಂಗ್ ಇದೆ. ಮೀಟಿಂಗ್

ಮುಗಿಸಿ ಸೀದಾ ಹಾಗೆ ಶಂಕರ ಮಠಕ್ಕೆ ಬಂದು ಬಿಡ್ತೀನಿ.''

''ಪ್ಯಾಂಟು ಷರ್ಟ್‌ನಲ್ಲಿ ಬರ್ತೀರಾ ? ಬೇಡಾ ಬೇಡಾ... ದಿವಿನಾದ ಪಂಚೆ. ಶಲ್ಯ ತೆಗೆದಿಟ್ಟಿದೀನಿ. ಪಂಚೆ ಉಟ್ಟುಕೊಂಡು ಬನ್ನಿ.''

''ನೀರು ಕುಡಿಯೋಕೆ ಲೋಟಾನೂ ತರ್ಲಾ ? ''ಉಳಿದವರು ಗೊಳ್ಳನೆ ನಕ್ಕಾಗ ಗೌರಮ್ಮ ರೇಗಿದಳು.

''ಸಾಕು ನಿಮ್ಮ ತಮಾಷೆ... ಏಳಿ... ಅವರುಗಳು ಮತ್ಯಾರಾದ್ರೂ ಸ್ನಾನಕ್ಕೆ ಬರೋ ಮೊದಲು ನೀವು ಸ್ನಾನ ಮುಗಿಸಿ. ನೋಡಿ ಯಾರೋ ಬಾಗಿಲು ಬೆಲ್ ಮಾಡ್ತಿದ್ದಾರೆ. ... ''ಎನ್ನುತ್ತಾ ಹೊರಟು ಹೋದಳು.

ಚಂದ್ರ ಎದ್ದು ಬಂದು ಕಾಫಿ ಕುಡಿದು ಕೈಯಲ್ಲಿ ಅವತ್ತಿನ ದಿನ ಪತ್ರಿಕೆ ಹಿಡಿದು ಕೂತ. ಪಕ್ಕದ ಮನೆ ಕಡೆಯಿಂದ ಗುಜುಗುಜು ಸದ್ದು ಕೇಳಿ ಬರುತ್ತಲೇ ಇತ್ತು. ತಂದೆ ತಿಂಡಿ ಕಾಫಿ ಮುಗಿಸಿ ಆಫೀಸಿಗೆ ಹೊರಟರು. ತಾಯಿ, ಚಿಂಪಿ ಇಬ್ಬರೂ ರೇಶಿಮೆ ಸೀರೆಗಳನ್ನುಟ್ಟು ಸಿದ್ಧರಾಗಿದ್ದರು. ಎದುರಿಗೆ ಓಡಾಡುತ್ತಿದ್ದ ತಂಗಿ, ಸೀರೆಯಲ್ಲಿ ದೊಡ್ಡವಳಂತೆ ಕಂಡು ಬರುತ್ತಿದ್ದಳು.

''ನೀನೇನೇ ಚಂಪಿ ? ನಾನು ಯಾರೋ ಪಕ್ಕದ ಮನೆಗೆ ಬಂದಿರುವ ಹೆಂಗಸು ಅಂತ ಅಂದ್ಕೊಂಡಿದ್ದೆ'' ರೇಗಿಸಿದ.

''ನಿನಗೆ ಹಾಗೇನೇ....ಎಲ್ರೂ ಪಕ್ಕದ ಮನೆಯೋರ ತರಹಾನೇ ಅನ್ನಿಸುತ್ತೆ. ನಿಗಾ ಎಲ್ಲಾ ಅಲ್ಲೇ ಇದೆಯೇನೋ...''ಅವಳೂ ಹಂಗಿಸಿದಳು.

''ನನಗನ್ನಿಸ್ತು ಹಾಗಂದೆ. ಅದಕ್ಯಾಕೆ ಗುರ್ ಅಂತೀಯ... ಸೀರೆ ಯಾರದ್ದು ? ಅಮ್ಮಂದೋ ನಿಂದೇನೋ....''

''ನಿನ್ನ ಹೆಂಡ್ತೀದು....'' ಅವಳೂ ರೇಗಿಸಿದಳು.

''ಬಜಾರಿ.... ಏನೇನೋ ಮಾತಾಡ್ತೀಯಾ.. ಸರಿಯಾಗಿ ಮಾತಾಡೋಕೆ ಬರಲ್ವಾ?'' ಎನ್ನುತ್ತಾ ಅವಳ ಕಿವಿ ಹಿಂಡಿದ...

''ಅಮ್ಮಾ....''ಎನ್ನುತ್ತಾ ಅಳು ಕೂಗು ಹಾಕಿದಳು. ಅವನು ಕೈಬಿಟ್ಟ.

''ನಾನೇನು ಬಜಾರಿ ಅಲ್ಲ... ನನಗಿಂತ ಚಿಕ್ಕ ಹುಡುಗಿಯರನ್ನ ಸೇರಿಸ್ಕೊಂಡು ಕುಂಟೆ ಬಿಲ್ಲೆ ಆಡಲ್ಲ'' ಅವನು ಮೆತ್ತಗಾದ. ರಾತ್ರಿಯ ನೆನಪು ಮರುಕಳಿಸಿತು. ಹೌದು ಅವಳು ಬಜಾರಿ.. ಎಷ್ಟು ಧೈರ್ಯ ಅವಳಿಗೆ ? ಸದ್ಯ ಯಾರಿಗೂ ಗೊತ್ತಾಗಿಲ್ಲ ಅಂತ ಕಾಣಿಸುತ್ತೆ. ಯಾವಾಗ ಎದ್ದು ಹೋದಳೋ ? ಅವಳ ಕಿವಿ ಹಿಡಿದು, ಏನೇ ಬಜಾರಿ...? ಎಷ್ಟು ಧೈರ್ಯ ನಿನಗೆ ? ಭಯವೇ ಇಲ್ಲವಾ ? ಅಂತ ಕೇಳುವಂತಿದ್ದರೆ.. ? ತನ್ನಲ್ಲೇ ಅಂದುಕೊಂಡು ನಕ್ಕ.

''ಏನಪ್ಪಾ... ನೀನೇ ನಗ್ತಾ ಇದೀಯ ? ಏನು ವಿಷಯ ? ''

''ಏನೂ ಇಲ್ಲ, ನಿನಗೆ ಹೇಳುವಂಥದ್ದಲ್ಲ....''

''ನನಗೆ ಹೇಳ್ದೆ ಇನ್ಯಾರಿಗೆ ಹೇಳ್ತೀಯ ? ಕಿ ವಿ ಹಿಂಡಿಸಿಕೊಂಡು ನೀನು ಹೇಳಿದ ಹಾಗೆ ಕೇಳೋಕೆ ನಿನ್ನ ಹೆಂಡ್ತಿ ಇನ್ನೂ ಈ ಮನೆಗೆ ಬಂದಿಲ್ಲ.''

''ಮೊದಲು ನಿನ್ನನ್ನು ಈ ಮನೆಯಿಂದ ಹೊರಗೆ ಕಳುಹಿಸಿದ ಮೇಲೆ ನನ್ನ ಹೆಂಡ್ತಿ ಈ ಮನೆಗೆ ಬರೋದು.. ಇಲ್ಲದಿದ್ರೆ ಹುರಿದು ಮುಕ್ಕಿ ಬಿಡ್ತೀಯ.... ಅದೆಲ್ಲಾ ಸಾಕು. ಈಗ ಹೊರಡು ನನಗೆ ಡಿಸ್ಟರ್ಬ್ ಮಾಡಬೇಡ'' ತಂಗಿ ಅಣಕಿಸುತ್ತಾ ಅಲ್ಲಿಂದ ಹೊರಟು ಹೋದಳು.

  

ಮೊದಲ ಪಂಕ್ತಿಯಲ್ಲೇ ಊಟ ಮುಗಿಸಿ ತಾಯಿ ಮಗಳು ಮನೆಗೆ ಬಂದಿದ್ದರು. ತಂದೆ ಇನ್ನು ಮನೆಗೆ ಬಂದಿರಲಿಲ್ಲ. ಹೊಟ್ಟೆ ಹಸಿದಾಗ, ಡಬ್ಬಗಳನ್ನು ಹುಡುಕಿ ಅದೂ ಇದೂ ತಿಂದಿದ್ದಾಗಿತ್ತು. ತಂದು ಕೊಟ್ಟಿದ್ದ ತಿಂಡಿ ಸಹ ಮುಗಿದು ಹೋಗಿತ್ತು. ಬಂದ ಕೂಡಲೇ ತಾಯಿ ನುಡಿದಿದ್ದಳು.

''ನೀನು ಹೋಗಿ ಊಟ ಮಾಡ್ಕೊಂಡು ಬರೋದಾದ್ರೆ ಬಾ.... ನಿಮ್ಮಪ್ಪ ಎಷ್ಟು ಹೊತ್ಗೆ ಬರ್ತಾರೋ ಏನೋ ? ''

''ಹೋಗಮ್ಮ.... ನಾನೊಬ್ನೆ ಅಂತೂ ಖಂಡಿತಾ ಹೋಗಲ್ಲ. ನಂಗೆ ಇಷ್ಟವಿಲ್ಲ.''

''ನಾನೇ ನಿನ್ನ ಜೊತೆಗೆ ಬರ್ತೀನಿ ಬಾ... ಚಿಂಪೀ ನಿಮ್ಮಪ್ಪ ಬಂದರೆ ಅವರ್ನ ಅಲ್ಲಿಗೇ ಕಳಿಸೇ... ಪಂಚೆ ಷರಟನ್ನು ತೆಗೆದಿಟ್ಟಿದೀನಿ... ''

''ನಾನು ಪಂಚೆ ಗಿಂಚೆ ಉಟ್ಕೊಂಡು ಬರಲ್ಲಮ್ಮ... ಹೀಗೆ ಪ್ಯಾಂಟು ಹಾಕಿಕೊಂಡೇ ಬರ್ತೀನಿ.''

''ಹೇಗೆ ಬೇಕೋ ಹಾಗೇ ಬಾ.... ನನ್ನ ಮಾತನ್ನೆಲ್ಲಿ ಕೇಳ್ತೀರಿ ? ಹೇಗೂ ಟೇಬಲ್ ಸಹ ಹಾಕ್ಸಿದಾರೆ. ಇನ್ನು ಸುಲಭವೇ ಆಯ್ತು ನಿಮ್ಮಂಥೋರಿಗೆ...'' ಚಂದ್ರ ತಂಗಿಯ ಕಡೆ ನೋಡಿ ಮುಗುಳ್ನಕ್ಕು ತಾಯಿಯನ್ನು ಹಿಂಬಾಲಿಸಿದ.

ಸಂಕೋಚದಿಂದ ತಾಯಿಯ ಜೊತೆ ಹೆಜ್ಜೆ ಹಾಕಿದರೂ, ಅವನ ಕಣ್ಣುಗಳು ಆ ಹುಡುಗಿಯನ್ನೇ ಅರಸಿದವು. ಈಗ ಯಾವ ಉಡುಪಿನಲ್ಲಿದ್ದಾಳೋ ಗುರುತು ಸಿಗ್ತಾಳೋ ಇಲ್ಲವೋ ಎಂಬ ಅನುಮಾನದಿಂದಲೇ ಅತ್ತಿತ್ತ ನೋಡಿದ. ಗೌರಮ್ಮ ಪರಿಚಯಸ್ಥರಿಗೆಲ್ಲ ತಾನು ಮತ್ತೆ ಬಂದ ಕಾರಣವನ್ನು ಅರುಹಿದಳು.

''ಈಗಿನ ಕಾಲದೋವು... ನೋಡಿ. ಏನೋ ಬಿಗುಮಾನ... ಒಬ್ಬನೇ ಹೊಟ್ಟೆ ಹಸಿದುಕೊಂಡು ಕೂತಿದ್ದ. ನಾನೇ ಬಲವಂತ ಮಾಡಿ ಕರೆದುಕೊಂಡುಬಂದೆ. ''

''ಒಳ್ಳೇದಾಯ್ತು.... ಏನಪ್ಪಾ ಯಾಕೆ ಸಂಕೋಚ ? ಅಕ್ಕ ಪಕ್ಕದೋರು ಅಂದರೆ ಒಂದೇ ಮನೆಯೋರ ತರಹಾನೆ ತಾನೇ... ನಿಮ್ಮ ತಂದೆ ಯಾಕೋ ಬರಲಿಲ್ಲವಲ್ಲ...'' ಪಕ್ಕದ ಮನೆಯಾತ ದನಿ ಕೂಡಿಸಿದ.

''ಅವರಿನ್ನೂಆಫೀಸ್ನಿಂದ ಬಂದೇ ಇಲ್ಲ. ಯಾವಾಗ ಬರ್ತಾರೋ ?''

''ಯಾವಾಗ ಬಂದರೂ ಕಳಿಸಿಕೊಡಿ. ನಾವುಗಳು ರಾತ್ರಿಯ ತನಕ ಇಲ್ಲೇ ಇರ್ತೀವಿ. ಬಾರಯ್ಯಾ.... ಟೇಬಲ್ ಬೇಕೋ ನೆಲದ ಮೇಲೆ ಕೂತ್ಕೋತಿಯೋ ?''

''ಯಾವುದಾದ್ರೂ ಪರವಾಗಿಲ್ಲ''

"ಅಲ್ಲಿ ನೋಡು ಎರಡು ಎಲೆ ಖಾಲಿ ಇದೆ. ಕೂತ್ಕೊಂಡ್ಬಿಡು."

"ಹೂಂ ಸರಿ ಎನ್ನುತ್ತಾ ತಲೆ ಆಡಿಸುತ್ತಾ ಆ ಎಲೆಯ ಬಳಿಗೆ ಅವನು ಹೋಗುವುದಕ್ಕೂ ಪೂರ್ಣಿಮಾ ಅಲ್ಲಿಗೆ ಬರುವುದಕ್ಕೂ ಸರಿಹೋಯ್ತು..."

ಅವನಿಗೆ ಇನ್ನೇನು ಡಿಕ್ಕಿ ಹೊಡೆಯುವುದರಲ್ಲಿದ್ದವಳು ಸಾವರಿಸಿಕೊಂಡು 'ಸಾರಿ' ಎಂದಳು. ಇವನು ತಬ್ಬಿಬ್ಬಾಗಿ ಅವಳನ್ನೇ ನೋಡಿದ. ಅವಳು ಮುಗುಳ್ನಕ್ಕಳು. ಇವನಿಗೆ ತಕ್ಷಣಕ್ಕೆ ಅವಳ ಗುರುತು ಹತ್ತಲಿಲ್ಲ. ಲಕ್ಷಣವಾಗಿ ಸೀರೆ ಉಟ್ಟು, ಜಡೆ ಹೆಣೆದು ಹೂ ಮುಡಿದು ಅಲಂಕರಿಸಿಕೊಂಡಿದ್ದಳು. ಅವಳು ಅದೇ ಹುಡುಗಿ ಎಂದು ಅರಿವಾಗುವಷ್ಟರಲ್ಲಿ ಅಲ್ಲಿದ್ದ ಎರಡು ಎಲೆಗಳಲ್ಲಿ ಒಂದರ ಬಳಿ ಅವಳಾಗಲೇ ಕುಳಿತಾಗಿತ್ತು. ಅವನು ಮತ್ತೆ ಬೆಪ್ಪಾದ. ಈಗೇನು ಮಾಡುವುದು ? ಅವಳ ಪಕ್ಕ ಕುಳಿತುಕೊಳ್ಳುವುದೇ ಅಥವಾ .... ಬೇರೆ ಎಲೆ ಹುಡುಕುವುದೇ ? ಒಂದು ಗಳಿಗೆ ಸಂಕೋಚವೆನಿಸಿದರೂ, ಮರುಗಳಿಗೆಯಲ್ಲಿ ಕಾಲೇಜಿನ ಕ್ಯಾಂಟಿನ್‌ನಲ್ಲಿ ಹುಡುಗಿಯ ರೊಡನೆ ಕುಳಿತು ತಿಂಡಿ ಕಾಫಿ ತಿಂದಾಗ ಏನೂ ಅನ್ನಿಸುವುದಿಲ್ಲ, ಇಲ್ಯಾಕೆ ಅನ್ನಿಸಬೇಕು ಅಂತಂದುಕೊಂಡು , ಅವಳ ಪಕ್ಕದ ಜಾಗದಲ್ಲಿ ಕುಳಿತ. ಅವಳು ಒಂದೆರಡು ಬಾರಿ ಇವನ ಕಡೆ ತಿರುಗಿ ನೋಡಿದ್ದು ಇವನ ಗಮನಕ್ಕೆ ಬಂದರೂ ತಾನು ತಿರುಗಿ ನೋಡಲಿಲ್ಲ. ಅಂತೂ ಊಟದ ರುಚಿ ಗೊತ್ತಾಗಲಿಲ್ಲ. ಹೊಟ್ಟೆಯನ್ನು ತುಂಬಿಸಿಕೊಳ್ಳಲೆಂಬಂತೆ ಸೇರಿದ್ದನ್ನು ತಿಂದು ಮುಗಿಸಿದ. ಎದ್ದು ಕೈ ತೊಳೆದು ಬಂದಾಗ ತಾಯಿ ದೂಷಿಸಿದಳು.

"ನೀನು ಸರಿಯಾಗಿ ಊಟ ಮಾಡಲಿಲ್ಲ ಕಣೋ ಚಂದ್ರಾ. ಆ ಹುಡುಗಿ ಪಕ್ಕ ಸರಿ ಹೋಗಲಿಲ್ಲ ಅಂತನ್ನಿಸಿದ್ದರೆ ಎದ್ದು ಬೇರೆ ಎಲೆಯನ್ನು ನೋಡಬಹುದಾಗಿತ್ತು."

"ಷ್.... ಮೆಲ್ಲಗೆ ಮಾತಾಡಮ್ಮ. ನಾನು ಸರಿಯಾಗಿಯೇ ಊಟ ಮಾಡಿದೀನಿ. ಆ ಹುಡುಗೀನ ಬೇಕಾದ್ರೆ ಕೇಳು. .... ನಾಚಿಕೆಯಿಂದ ಅವಳು ಕಡಿಮೆ ಊಟ ಮಾಡಿರಬಹುದು ಅಷ್ಟೇ."

"ಅದ್ಹೇಗೆ ಕೇಳಕ್ಕಾಗುತ್ತೆ? ಅಜ್ಜಿಗೆ ನಮಸ್ಕಾರ ಮಾಡಿ ಬಾ. ಮನೆಗೆ ಹೋಗೋಣ"

"ನಮಸ್ಕಾರ ಮಾಡಲೇ ಬೇಕಾ ?" ಪಿಸುದನಿಯಲ್ಲಿ ಕೇಳಿದ.

"ಮತ್ತೇನು ಬರೀ ಊಟಕ್ಕೆ ಕರೆದುಕೊಂಡು ಬಂದೆ ಅಂತ ಅಂದುಕೊಂಡ್ಯಾ ? ಆಕೆಯ ಆಶೀರ್ವಾದವೂ ಬೇಕು."

"ಥೂ ಹೋಗಮ್ಮ ನೀನೊಬ್ಬಳು ಅಂತ ನುಡಿದರೂ, ಅಜ್ಜಿ ಕುಳಿತಿದ್ದ ಕಡೆಗೆ ತಾಯಿಯೊಡನೆ ನಡೆದ."

"ನಂಜಮ್ನೋರೆ... ಇವನು ನನ್ನ ಮಗ.. ಪೂರ್ಣಚಂದ್ರ ಅಂತ. ಇಂಜಿನಿಯರಿಂಗ್ ಓದುತ್ತಿದ್ದಾನೆ... ಫಸ್ಟ್ ಕ್ಲಾಸ್‌ನಲ್ಲಿ ಪಾಸಾಗಿ, ಬೇಗ ಕೆಲಸ ಸಿಗಲಿ ಅಂತ ಆಶೀರ್ವಾದ ಮಾಡಿ..." ಅಜ್ಜಿಗೆ ಪರಿಚಯ ಮಾಡಿಕೊಟ್ಟು, 'ಪ್ರವರ ಹೇಳಿಕೊಂಡು ನಮಸ್ಕಾರ ಮಾಡು..ಅಜ್ಜಿಗೆ ಖುಷಿಯಾಗುತ್ತೆ...' ಮಗನನ್ನುಅವಸರಿಸಿದಳು.

ಚಂದ್ರ ಕಿವಿಗಳ ಮೇಲೆ ಕೈಯನ್ನಿಟ್ಟುಕೊಂಡು ಪ್ರವರವನ್ನು ಹೇಳಿಕೊಂಡು

ದೀರ್ಘದಂಡ ನಮಸ್ಕಾರ ಹಾಗಿದ. ನಂಜಮ್ಮನಿಗೆ ಖುಷಿಯಾಗಿತ್ತು. ತಲೆಯ ಮೇಲೆ ಕೈ ಇಟ್ಟು ಮನಃಪೂರ್ವಕವಾಗಿ ಆಶೀರ್ವದಿಸಿದಳು. ಒಂದ್ನಿಮಿಷ ತಡಿಯಪ್ಪಾ.... ಎಂದು ಹೇಳಿ ''ಏ ಪೂರ್ಣಾ ಬಾರೇ ಇಲ್ಲಿ....'' ಎಂದು ಅಲ್ಲಿಯೇ ಅಡ್ಡಾಡುತ್ತಿದ್ದ ಹುಡುಗಿಯನ್ನು ಕರೆದಳು.

''ಏನಜ್ಜಿ... ''ಎಂದು ರಾಗವಾಗಿ ಕೇಳುತ್ತಾ ಅದೇ ಹುಡುಗಿ ಅಜ್ಜಿಯ ಸಮೀಪಕ್ಕೆ ಬಂದಳು. ಇವನು ತಿರುಗಿ ಅವಳನ್ನೇ ನೋಡಿದ. ಏನೋ ಒಂದು ರೀತಿಯ ಉತ್ಸಾಹ ಮೂಡಿತು.

''ನೋಡು ಅಲ್ಲಿ ಹಣ್ಣಿನ ಬುಟ್ಟಿ ಇದೆಯಲ್ಲ ಅದನ್ನು ತಗೊಂಡು ಬಾ...'' ಆ ಹುಡುಗಿ ಸರಭರನೆ ಹೋಗಿ ಹಣ್ಣಿನ ಬುಟ್ಟಿಯನ್ನು ತಂದಳು. ಅದರಿಂದ ಒಂದು ದೊಡ್ಡ ಮೋಸಂಬಿ ಹಣ್ಣನ್ನು ತೆಗೆದು ಚಂದ್ರನ ಕೈಗಿತ್ತು ಶುಭ ಹಾರೈಸಿದಳು.

''ಥ್ಯಾಂಕ್ಸ್ ಅಜ್ಜೀ..... ''ಎಂದ ಚಂದ್ರ ಸಂಕೋಚದಿಂದ.

ಅಜ್ಜಿ ಬಾಯ್ತುಂಬಾ ನಕ್ಕು ಮತ್ತೊಮ್ಮೆ ಆಶೀರ್ವದಿಸಿತು.

''ಅಜ್ಜಿ ನಾನೊಂದು ಹಣ್ಣನ್ನು ತಗೊಳ್ಲಾ? '' ಅಜ್ಜಿಯನ್ನು ಕೇಳಿದಳು ಆ ಹುಡುಗಿ.

''ತಗೋ ಧಾರಾಳವಾಗಿ ತಗೋ...ಒಂದಲ್ಲ ಅಂತ ಎರಡು ಹಣ್ಣನ್ನು ತಗೋ... ಆದರೆ ರಾತ್ರಿ ಮಾತ್ರ ಮರೀಬಾರದು. ಎರಡೂ ಕಾಲನ್ನು ಹಿತವಾಗಿ ಒತ್ತಬೇಕು. ಕೂತು ಕೂತು ಮೈಯೆಲ್ಲಾ ಹಿಂಡಿದ ಹಾಗೆ ನೋಯ್ತಿದೆ. '' ಅಜ್ಜಿ ಮತ್ತೆ ನಕ್ಕಿತು.

''ಚೆನ್ನಾಗಿ ದೃಷ್ಟಿ ನಿವಾಳಿಸಿ ತೆಗೆಯೋಕೆ ಹೇಳ್ತೀನಿ ಅಜ್ಜಿ... ಎಷ್ಟು ಜನರ ದೃಷ್ಟಿ ತಾಕಿದೆಯೋ ? .... ಇವತ್ತಿನ ಕೇಂದ್ರ ಬಿಂದು ನೀನೇ ಅಲ್ವಾ ?.... ಮೈಕೈ ನೋವೆಲ್ಲಾ ತಾನಾಗೇ ಮಾಯವಾಗುತ್ತೆ...''

''ಹೋಗೇ ಹುಚ್ಚುಡ್ಗಿ. ನನ್ನಂತಹ ಮುದುಕಿ ಮೇಲೆ ಯಾರ ಕಣ್ಣು ಬೀಳುತ್ತೆ? ಇನ್ನು ನೋಡು.. ನಿನ್ನಂತಹ ಪಡ್ಡೆ ಹುಡುಗೀರ ಮೇಲೆ ಹತ್ತಾರು ಜೊತೆ ಕಣ್ಣುಗಳು ಹರಿ ಹಾಯಿದಿರುತ್ತವೆ... ನೀನು ನಿತ್ಯ, ಆ ನೈಟಿ, ಆ ಮಿಡಿಗಳಲ್ಲಿ ಹೇಗೋ ಕಾಣಿಸ್ತಿದ್ದೆ. ಇವತ್ತು ನೋಡು, ಒಳ್ಳೆ ರಾಜಕುಮಾರಿ ತರಹ ಕಾಣ್ತೇದೀಯ''

''ಹೋಗಿ ಅಜ್ಜಿ.... '' ಅವಳು ನಾಚಿ ಕೆಂಪಾದಳು. ಅಜ್ಜಿಯ ಮಾತಿನ ಮೇಲೇ ಗಮನವಿಟ್ಟಿದ್ದ ಚಂದ್ರ ಆಗಾಗ್ಗೆ ಅವಳ ಕಡೆ ನೋಡುತ್ತಿದ್ದ. ಅವಳ ಕೆಂಪಾದ ದುಂಡನೆಯ ಕೆನ್ನೆಗಳನ್ನೇ ನೋಡಿದ. ಅವನ ಗಮನ ತನ್ನ ಮೇಲೆ ಇರುವುದನ್ನು ಅರಿತ ಅವಳು ತಲೆ ತಗ್ಗಿಸಿ, ಹಣ್ಣನ್ನು ಕೈಯಲ್ಲಿ ಹಿಡಿದು ಅಲ್ಲಿಂದ ಸರಿದು ಹೋದಳು. ಅವನ ಕಣ್ಣುಗಳು ಅವಳನ್ನೇ ಹಿಂಬಾಲಿಸಿದವು. ಅಲ್ಲಿಂದ ಮರೆಯಾಗುವ ಮೊದಲು ಅವಳು ಮತ್ತೊಮ್ಮೆ ತಿರುಗಿ ಅವನ ಕಡೆ ದೃಷ್ಟಿ ಹಾಯಿಸಿದಳು. ಇವನು ಮುಗುಳ್ನಗೆಯನ್ನು ಸೂಸಿದ... ಅವಳು ಹಾಗೆ ಮಾಯವಾದಳು.

ಮನೆಗೆ ವಾಪಸ್ಸಾದರೂ ಅವನು ಅದೇ ಗುಂಗಿನಲ್ಲಿದ್ದ. ಅಜ್ಜಿ ಅವಳನ್ನು ಪೂರ್ಣ ಎಂದು ಕರೆದಿದ್ದರು. ಪೂರ್ಣ.... ಹೆಸರೇನೋ ಚೆನ್ನಾಗಿದೆ. ಆದರೆ ಅವಳಿನ್ನು ನನಗೆ ಅಪೂರ್ಣ... ಅವಳನ್ನು ಪೂರ್ಣವಾಗಿ ಅರಿಯಬೇಕೆಂಬ ಬಯಕೆ ಹುಟ್ಟಿತು. ಸೀರೆಯನ್ನುಟ್ಟು ಯುವತಿಯಂತೆ ಕಂಡು ಬಂದಿದ್ದಳು. ಕುಂಟೆ ಬಿಲ್ಲೆಯಾಡುತ್ತಾ ಇದ್ದಾಗಿನ ಚಿಕ್ಕ ಹುಡುಗಿಯ

ರೂಪ ಬದಲಾಗಿತ್ತು. ಆದರೆ ಆ ರೂಪ ಚೆನ್ನವೋ ಈ ರೂಪ ಚೆನ್ನವೋ ? ಅವನು ಯೋಚಿಸುತ್ತಲೇ ಇದ್ದ.

''ನಿನ್ನೆ ರಾತ್ರಿಯಂತೆ ಈ ರಾತ್ರಿಯೂ ಬರೀ ಆ ಹುಡುಗಿಯರೇ ಮಲಕ್ಕೊಳ್ಳೋಕೆ ಬರುತ್ತೋ ಏನೋ... ನಿನ್ನ ಪಾಡಿಗೆ ನಿನ್ನ ರೂಮಿನಲ್ಲಿ ಬಾಗಿಲು ಹಾಕಿಕೊಂಡು ಮಲ್ಕೋ... ಇಲ್ಲೇ ಕೆಳಗೇ ಮಲಗುತ್ವೆ ಅಷ್ಟೇ'' ತಾಯಿ ನುಡಿದಾಗ ಸಣ್ಣಗೆ ಏನೋ ಅನುಮಾನ ಕಾಡಿತು. ರಾತ್ರಿ ತಾನು ಇಲ್ಲಿಯೇ ಸೋಫಾದ ಮೇಲೆ ಮಲಗಿದ್ದೆ... ದೊಡ್ಡೋರ್ಯಾರೂ ಬರಲೇ ಇಲ್ಲ ಅಂತ ಕಾಣುತ್ತೆ. ಆ ಚಿನಾಲಿಯೋ ಯಾವಾಗಲೋ ಕೆಳಗೆ ಬಂದು ಬಿದ್ದು ಕೊಂಡಿದ್ದಾಳೆ. ಎಂಥಾ ಪೇಚಿಗೆ ಸಿಕ್ಕಿಬಿದ್ದೆ ನಾನು ? ಆದರೆ ಅಮ್ಮ ಯಾಕೆ ಏನೂ ಕೇಳಲಿಲ್ಲ. ಸುಮ್ಮನೆ ರಂಪ ಯಾಕೆ ಅಂತ ಸುಮ್ಮನಿರಬಹುದು. ಗುಡ್ ಅಮ್ಮ... ಆ ಹುಡುಗಿ ಬಗ್ಗೆ ಅಮ್ಮನಿಗೆ ಏನು ಅಭಿಪ್ರಾಯವೋ ''ಇವತ್ತು ರಾತ್ರಿ ಇಲ್ಲೇ ಕೆಳಗೆ ಮಲಗ್ತೀನಿ ಅಂತಂದ್ರೆ ಅಮ್ಮ ಏನಂತಾಳೆ ?'' ಅಂತ ಅನ್ನಿಸಿದರೂ ಹೇಳುವ ಧೈರ್ಯ ಬರಲಿಲ್ಲ. ಚಿಂಪಿ ನುಡಿದಳು

''ಇವತ್ತು ಯಾರೂ ಬರದಿದ್ರೆ ಸಾಕು... ಮೇಲೆ ಹಾಸಿಗೆ ದಿಂಬು ಒಂದನ್ನಾದ್ರೂ ಮಡಿಸಿಟ್ಟಿಲ್ಲ. ಹೇಗೆ ಹೇಗೋ ಬಿಸ್ಹಾಕಿ ಹೋಗಿವೆ ಕಪಿಗಳು''

''ಷ್.. ಮೆಲ್ಲಗೆ, ಕೇಳಿಸೀತು... ನೀವೇನು ಚಿಕ್ಕೋರಿದ್ದಾಗ ಎಲ್ಲವನ್ನು ಮಡಿಸಿಟ್ಟು ಎದ್ದು ಬರ್ತಿದ್ರಾ...?''

''ಎಲ್ಲರಿಗಿಂತ ದೊಡ್ಡೋಳು ಬಂದಿದ್ದಳಲ್ಲ ಆ ಪೂರ್ಣಿಮಾ.. ಅವಳೂ ಕೂಡಾ ಹಾಗೆ ಎದ್ದು ಹೋಗಿದಾಳೆ.'' ಚಂದ್ರ ತಾಯಿಯ ಕಡೆ ನೋಡಿದ.

''ಅವಳು ಅಲ್ಲಿ ಮಲಗೇ ಇರಲಿಲ್ಲ. ಇಲ್ಲಿ ಕೆಳಗೆ ಬಂದು ಮಲಗಿದ್ದಳು. ಇಲ್ಲಿ ಯಾವ ದಿಂಬೂ ಇಲ್ಲ. ಹೊದಿಕೆಯೂ ಇಲ್ಲ.''

''ಓ... ಇಲ್ಲಿ ಆರಾಮವಾಗಿ ಮಲಗಿದ್ಲಾ... ನಂಗೇನಾದ್ರೂ ಗೊತ್ತಾಗಿದ್ದಿದ್ರೆ ಎಬ್ಬಿಸಿ ಓಡಿಸ್ತಿದ್ದೆ.''

''ಸಾಕು ಸುಮ್ಮನಿರೇ... ಇದ್ಯಾವ ಮಾತಿನ ಲಕ್ಷಣ ? ಅಲ್ಲಿ ಜಾಗ ಸಾಕಾಗಲಿಲ್ಲವೇನೋ ಅದಕ್ಕೆ ಕೆಳಗಿಳಿದು ಬಂದಿರಬೇಕು. ಆದರೆ ನೋಡು ಯಾರಿಗೂ ಗೊತ್ತಾಗ್ಲೇ ಇಲ್ಲ.''

''ನಿನಗೆ ಹೇಗೆ ಗೊತ್ತಾಯ್ತು? '' ಚಿಂಪಿ ಚುಡಾಯಿಸಿದಳು.

''ನೀನು ನನ್ನ ಪಕ್ಕ ಮಲಗಿದ್ದೆ. ಅಪ್ಪ ಮಗ ಈ ರೂಮಿನಲ್ಲಿ ಮಲಗಿದ್ರು . ಇಲ್ಯಾಕಪ್ಪಾ ಮಲಗಿರುವುದು ಎಂದು ದೀಪ ಹಚ್ಚಿಕೊಂಡು ಬಂದು ನೋಡಿದ್ರೆ ಈ ಹುಡುಗಿ ! '' ಅಮ್ಮ ಯಾಕೆ ಸುಳ್ಳು ಹೇಳ್ತಿದಾಳೆ ಅಂತ ಚಂದ್ರನಿಗೆ ಅರ್ಥವಾಗಲಿಲ್ಲ. ಕೃತಜ್ಞತೆಯಿಂದ ತಾಯಿಯನ್ನು ನೋಡಿದ. ತಾಯಿ ಏನನ್ನೂ ಅರಿಯದವಳಂತೆ ಮುಖ ಮಾಡಿದಳು.

ಆ ರಾತ್ರಿ ನಿದ್ದೆ ಹತ್ತುವವರೆಗೂ ಅವಳೇನಾದರೂ ಬರಬಹುದೋ ಏನೋ ಎಂದು ಕಾತುರದಿಂದ ಎದುರು ನೋಡುತ್ತಿದ್ದ. ಬೆಳಿಗ್ಗೆ ಎದ್ದು ಕೆಳಗಿಳಿದು ಬಂದಾಗ ಹತ್ತಾರು ಚಿಕ್ಕ ಹುಡುಗ ಹುಡುಗಿಯರು ಜಮಖಾನದ ಮೇಲೆ ಅಡ್ಡಾ ದಿಡ್ಡಿ ಮಲಗಿದ್ದರು. ಮುಸುಕೆಳೆದು,

ದಿವಾನದ ಮೇಲೆ ಮಲಗಿದ್ದ ವ್ಯಕ್ತಿಯ ಮಸುಕು ತೆಗೆದು ನೋಡುವ ಧೈರ್ಯವಾಗಲಿಲ್ಲ. ತನ್ನ ಪಾಡಿಗೆ ತಾನು ಮುಖ ತೊಳೆದು ಕಾಫಿ ಕುಡಿದು ಮತ್ತೆ ಮಹಡಿ ಏರಿದ.

''ಏಯ್ ಸೋಂಭೇರಿ ಏಳು ಗಂಟೆ ಹತ್ತಾಗ್ತಾ ಬಂದಿದೆ. ಅಪ್ಪ ಆಗ್ಲೇ ಆಫೀಸ್ಗೆ ಹೊರಟಾಯ್ತು. ಕುಂಭಕರ್ಣನ ತರಹ ಗೊರಕೆ ಹೊಡಿತೀದೀಯಲ್ಲ...ಏಳೋ....'' ಚಿಂಪಿ ಕಚಗುಳಿ ಇಟ್ಟಾಗ ಅವನು ಕೊಸರಾಡಿದ ತಂಗಿ ಮತ್ತೆ ತಿವಿದಾಗ ಎದ್ದು ಕೂತ...

''ಪ್ಲೀಸ್ ಇನ್ನೊಂದು ಕಪ್ ಕಾಫಿ ತಂದುಕೊಡೇ... ಯಾಕೋ ಸಣ್ಣಗೆ ತಲೆ ನೋಯ್ತಿದೆ.''

''ರಾತ್ರಿಯೆಲ್ಲಾ ಎಚ್ಚರವಾಗಿದ್ದುಕೊಂಡು ನೀನೇನು ಓದಿಲ್ಲ.... ನಂಗೆ ಗೊತ್ತು. ಸುಳ್ಳು ಹೇಳ್ತೀದೀಯ.''

''ಸುಳ್ಳು ಯಾಕೆ ಹೇಳಲಿ ? ಜ್ವರ ಕೂಡಾ ಬಂದಿದೆಯೇನೋ.... ನೋಡು, ಬಾಯೆಲ್ಲಾ ಒಣಗಿ ಹೋಗಿದೆ. ''

''ಕೆಳಗಿಳಿದು ಬಾ. ತಿಂಡಿ ತಿನ್ನುವಂತೆ. ಪಕ್ಕದ ಮನೆಯವರು ಏನೇನೋ ತಿಂಡಿ ತಂದು ಕೊಟ್ಟಿದಾರೆ.... '' ಅವನ ಉತ್ತರಕ್ಕೆ ಕಾಯದೆ ಅವಳು ಕೆಳಗಿಳಿದು ಹೋದಳು. ಅವನೂ ಬಂದ. ಡೈನಿಂಗ್ ಟೇಬಲ್ ತುಂಬ ಏನೇನೋ ತಿಂಡಿಗಳು ಹರಡಿದ್ದವು. ಯಾಕೋ ತಿನ್ನಬೇಕೆನಿಸಲಿಲ್ಲ.

''ಏನು ತಿಂತೀಯಾ ? ನಿಂಗೆ ಏನು ಬೇಕು ಹೇಳು...''

''ನನಗೆ ಯಾವುದೂ ಬೇಡ ಕಣೆ ಚಿಂಪಿ... ಯಾಕೋ ಇದನ್ನೆಲ್ಲಾ ತಿನ್ನಬೇಕು ಅಂತ ಅನ್ನಿಸ್ತಾನೇ ಇಲ್ಲ. ಸ್ಟ್ರಾಂಗ್ ಕಾಫೀನ ಒಂದು ಕಫ್ ಕೊಡು ಕುಡಿದು ಮಲಗ್ತೀನಿ. ಯಾಕೋ ಚಳಿ ಚಳಿಯಾಗ್ತಿದೆ.''

''ತಡಿ ಅಮ್ಮಂಗೆ ಹೇಳ್ತೀನಿ. ಅವಳ ಮಾತು ಇನ್ನು ಮುಗಿದೇ ಇಲ್ಲವೇನೋ....''ತಾಯಿಯನ್ನು ಕರೆಯಲು ಚಿಂಪಿ ಪಕ್ಕದ ಓಣಿಗೆ ನಡೆದಳು. ಅವನು ಹಾಗೆ ಕಣ್ಣು ಮುಚ್ಚಿ ಕುಳಿತ.

ಒಂದೆರಡು ದಿನಗಳ ಫ್ಲೂ ಜ್ವರ ಅವನನ್ನು ಕಾಡಿಸಿತು. ಜ್ವರದ ತಾಪದಲ್ಲಿ ಏನೇನನ್ನೋ ಬಡಬಡಿಸಿದ್ದ. ಪರೀಕ್ಷೆಯ ಮುಂದೆ ಹೀಗೆ ಜ್ವರ ಬಂದಿತಲ್ಲ ಎಂಬ ಆತಂಕದಲ್ಲಿದ್ದಳು ಗೌರಮ್ಮ. ಅವನ ಕನವರಿಕೆ ಅರ್ಥವಾಗಿರಲಿಲ್ಲ. ಡಾಕ್ಟರಿಗೆ ಹೇಳಿ, ಸ್ಟ್ರಾಂಗ್ ಮೆಡಿಸಿನ್ ತಂದು ಕೊಡು ಎಂದು ಮಗಳಿಗೆ ಹೇಳಿದ್ದಳು.

''ಎದ್ದು ಹೋಗೋಕ್ಕೆ ಆಗದಿರುವಷ್ಟು ಜ್ವರ ಏನಿಲ್ಲ, ಅವನೇ ಹೋಗಲಿ'' ಚಿಂಪಿ ತಕರಾರು ಮಾಡಿದ್ದಳು.

''ಹೇಳಿದಷ್ಟು ಕೇಳೇ.... '' ಮಗಳನ್ನು ಗದರಿದ್ದಳು.

''ಹಾಗಾದ್ರೆ... ಅವರೇನು ಕೊಡ್ತಾರೋ ಅದನ್ನ ತರ್ತೀನಿ. ಅದನ್ನೇ ನುಂಗಬೇಕು ಇವನು'' ಒತ್ತಿ ನುಡಿದಳು. ಒಂದು ಗಂಟೆಯ ನಂತರ ವಾಪಸ್ಸಾದಳು. ಅಬ್ಬಾ ಡಾಕ್ಟರ ಷಾಪಿನಲ್ಲಿ ರಷ್ಶೋ ರಷ್ಷು... ಯಾರು ನೋಡಲಿ ಫ್ಲೂ ಜ್ವರ ಅಂತ ಬಂದವರೇ... ನನಗಂತೂ

ಭಯವಾಗ್ತಿದೆ. ನನಗೂ ಎಲ್ಲಿ ಜ್ವರ ಬಂದು ಬಿಡುತ್ತೋ ಅಂತ. ಕಾದು ಕಾದು ಸಾಕಾಯ್ತು.

ತಾಯಿಗೆ ಅವಳ ಮಾತಿನ ಮೇಲೆ ನಿಗಾ ಇರಲಿಲ್ಲ. ತಂದಿದ್ದ ಪಾತ್ರೆಗಳನ್ನು ನೋಡುತ್ತಿದ್ದಳು.

''ಅಮ್ಮ.... ಪಕ್ಕದ್ಮನೆಗೆ ಬಂದಿದಾಳಲ್ಲ ಬಜಾರಿ... ಅವಳಿಗೂ ಜ್ವರವಂತೆ. ಮೊದಲೇ ಕೆಂಪು ಕೆಂಪು ... ಕೆನ್ನೆಯೆಲ್ಲ ಟ್ಯೊಮಾಟೋ ಹಣ್ಣಿನಂತಾಗಿತ್ತು'' ನಗುತ್ತಾ ನುಡಿದಳು.

''ಥೂ ಜ್ವರ ಬಂದೋರನ್ನ ಆಡಿಕೊಂಡು ಯಾರಾದ್ರೂ ನಗ್ತಾರಾ ? ನಿನಗೆ ಜ್ವರ ಬಂದಾಗ ನಿನಗೂ ಗೊತ್ತಾಗುತ್ತೆ'' ಚಂದ್ರ ರೇಗಿದ.

''ನಾನು ಆಡಿಕೊಂಡಿದ್ದು ಅವಳನ್ನು. ನಿನಗ್ಯಾಕಪ್ಪಾ ಉರಿ ಉರಿ ? ಒಂದೆರಡು ದಿನಗಳು ಸದ್ದು ಗದ್ದಲವಿಲ್ಲದೇ ಮಲಗಿರ್ತಾಳೆ ಅಂತ ನನಗೆ ಖುಷಿ'' ಚಂದ್ರ ಮಾತನಾಡಲಿಲ್ಲ. ತನ್ನಲ್ಲೇ ಚಿಂತಿಸುತ್ತಿದ್ದ. ನನಗೂ ಜ್ವರ ; ಅವಳಿಗೂ ಜ್ವರ. ಇದ್ಯಾವ ಕಾಕತಾಳೀಯ ? ಅಜ್ಜಿ ಹೇಳಿದ ಹಾಗೆ ಅವಳಿಗೆ ದೃಷ್ಟಿ ತಾಗಿರಬೇಕು. ಇಲ್ಲದಿದ್ದರೆ ಅವಳಿಗೆ ಜ್ವರ ಬರೋಣ ಅಂದ್ರೇನು? ನನಗೆ ಅವಳ ದೃಷ್ಟಿಯೇ ತಾಗಿರಬೇಕು... ನನ್ನ ಪಾಡಿಗೆ ನಾನು ಇದ್ದವನು....ಅವಳ ಕಣ್ಣಿಗೆ ಬಿದ್ದೆ... ಬಂತು ನನಗೀ ಗತಿ... ತನ್ನಲ್ಲೇ ನಕ್ಕ..

''ಯಾಕೋ ನಗ್ತಿದೀಯಾ ? ನಂಗೂ ಹೇಳೋ...''

''ಸುಮ್ನೇ ಅವನನ್ನು ಪೀಡಿಸಬೇಡ. ಮೊದಲು ಅವನ ಜ್ವರ ಇಳೀಲಿ. ಪರೀಕ್ಷೆಯಂತೂ ತಲೆ ಮೇಲೆ ಕೂತಿದೆ. ಈಗಲೇ ಈ ಜ್ವರ ಬರಬೇಕೆ ?''

''ನಾನು ಔಷಧಿ ತಂದು ಕೊಟ್ಟಿದ್ದಕ್ಕೆ ಒಂದು ಥ್ಯಾಂಕ್ಸ್ ಬೇಡ... ನನ್ನನ್ನೇ ಅಂತಾಳೆ ಈ ಅಮ್ಮ'' ಎಂದು ಕೋಪಿಸಿಕೊಂಡು ಚಂಪಕ ಕೆಳಗಿಳಿದು ಹೋದಳು. ಚಂದ್ರ ತಾಯಿಯ ಕಡೆ ಸುಮ್ಮನೇ ನೋಡಿದ. ಅವಳ ಮುಖದಲ್ಲಿ ಆತಂಕದ ಗೆರೆಗಳು ಮೂಡಿದ್ದವು.

ಇಂಜಿನಿಯರ್ ಆಗಬೇಕೆಂಬ ಹಂಬಲದಲ್ಲಿ ಈಗಾಗಲೇ ಮೂರು ವರ್ಷಗಳನ್ನು ವ್ಯಯ ಮಾಡಿದ್ದ. ಪಿ.ಯು.ಸಿ.ಲ್ಲಿ ಅವನು ಅಪೇಕ್ಷಿಸಿದ್ದಷ್ಟು ಮಾರ್ಕ್ಸ್ ಬರಲಿಲ್ಲವೆಂದು ಆ ವರ್ಷ ವಿತ್‌ಡ್ರಾ ಮಾಡಿ, ಮತ್ತೆ ಮುಂದಿನ ವರ್ಷ ಪರೀಕ್ಷೆಗೆ ಕೂತಿದ್ದ. ಆದರೆ ಸಿ.ಇ.ಟಿ. ರ್‍ಯಾಂಕಿಂಗ್‌ನಿಂದಾಗಿ ಅವನಿಗೆ ಬೇಕಾದ ಕೋರ್ಸಿಗೆ ಸೀಟು ಸಿಕ್ಕಿರಲಿಲ್ಲ. ಬೇಸರಗೊಂಡು ಬಿ.ಎಸ್ಸಿಗೆ ಸೇರಿಕೊಂಡಿದ್ದ. ಆದರೆ ಅವನ ಜೊತೆಯವರೆಲ್ಲಾ ಇಂಜಿನಿಯರಿಂಗ್‌ನಲ್ಲಿ ಓದುತ್ತಿರುವುದನ್ನು ಕಂಡು ಮನಸ್ಸಿನಲ್ಲಿ ಹೊಯ್ದಾಟವಿದ್ದಿತ್ತು. ಎರಡನೇ ವರ್ಷದ ಬಿ.ಎಸ್ಸಿಗೆ ಬಂದಿದ್ದಾಗ, ಪರೀಕ್ಷೆಗೆ ಹಾಜರಾಗದೆ ತಾನಾಗಿಯೇ ಫೇಲಾದ. ಆ ವರ್ಷದ ಸಿ.ಇ.ಟಿ. ಪರೀಕ್ಷೆಗೆ ಮತ್ತೆ ಬರೆದು, ಇಂಜಿನಿಯರಿಂಗ್ ಸೀಟು ಗಳಿಸಿದ. ಆದರೆ ಅವನು ಅಪೇಕ್ಷೆ ಪಟ್ಟ ಊರಿನಲ್ಲಿ ಓದಲಾಗಿರಲಿಲ್ಲ. ಈ ಊರಿನ ಕಾಲೇಜಿನಲ್ಲಿ ಸೀಟು ಸಿಕ್ಕಿತ್ತು. ಎರಡು ವರ್ಷಗಳ ನಂತರ ತಂದೆಗೆ ಇದೇ ಊರಿಗೆ ವರ್ಗವಾಗಿತ್ತು. ಎರಡು ವರ್ಷದ ಹಾಸ್ಟೆಲಿನಲ್ಲಿ ಜೀವನ ಬೇಸರವೆನಿಸದಿದ್ದರೂ ಅವನ ಕ್ಲಾಸುಮೇಟುಗಳಲ್ಲಿ ಹೆಚ್ಚು ಕಡಿಮೆ ಎಲ್ಲರಿಗಿಂತ ಇವನೇ ದೊಡ್ಡವನು. ಒಮ್ಮೊಮ್ಮೆ ಅದೂ ಮುಜುಗುರವೆನ್ನಿಸುತ್ತಿತ್ತು. ವಯಸ್ಸಿನ ಅಂತರದಿಂದಾಗಿ ಸುಲಭವಾಗಿ ಅವರೊಡನೆ ಬೆರೆಯಲು ಆಗುತ್ತಿರಲಿಲ್ಲ.

ತಂದೆಯ ವರ್ಗದ ಸುದ್ದಿ ಕೇಳಿದೊಡನೆ, ಮನೆಯನ್ನು ಹುಡುಕಿದ್ದ. ಮನೆ ಮಾಡಿದ ಕೂಡಲೇ ತಾಯಿ ಹಾಗೂ ತಂಗಿ ಬಂದು ಸಂಸಾರ ಹೂಡಿದರು. ಈ ಕಾರಣದಿಂದಾಗಿ, ತಂಗಿ ಆ ವರ್ಷದ ಪಿಯುಸಿ ಪರೀಕ್ಷೆಯಲ್ಲಿ ಬರೀ ಪಾಸಾದಳು. ಅವಳಿಗೆ ಆ ಕೋಪ. ಬರೀ ಪಾಸಾದುದಕ್ಕೆಇವನೇ ಕಾರಣ ಎಂದು ಜಗಳ ಆಡಿ ತನ್ನ ಕೋಪವನ್ನು ತೋರ್ಪಡಿಸಿದ್ದಳು.

''ನೀನು ಚೆನ್ನಾಗಿ ಓದಿದ್ದರೆ, ಸೆಕೆಂಡ್ ಕ್ಲಾಸಾದ್ರೂ ಬರ್ತಿದ್ದೆ''

''ನಂಗೆ ಇಂಜಿನಿಯರಿಂಗ್ ಕೋರ್ಸ್‌ಗೆ ಸೇರಬೇಕೂಂತ ಆಸೆ ಇತ್ತು. ನನ್ನ ಆಸೆಗೆ ನೀನು ಕಲ್ಲುಹಾಗಿದೆ.''

''ಷಟಪ್, ಕಲ್ಲೂ ಹಾಕಿಲ್ಲ, ; ಮಣ್ಣೂ ಹಾಕಿಲ್ಲ. ಈಗಲೂ ವಿತ್‌ಡ್ರಾ ಮಾಡಿಕೊಂಡು ಮತ್ತೆ ಪರೀಕ್ಷೆಗೆ ಕಟ್ಟು. ಯಾರು ಬೇಡಾಂದ್ರು ? ''

''ಯಾರು ಮತ್ತೆ ಮತ್ತೆ ಓದಿದ್ದನ್ನೇ ಓದ್ತಾರೆ ? ನೀನು ಹಾಗೆ ಮಾಡಿದೆ ಅಂತ ಎಲ್ರಿಗೂ ಅಡ್ವೈಸ್ ಮಾಡೋಕೆ ಹೋಗ್ಬೇಡಾ. ಕಲ್ಲಲ್ಲಿ ಹೊಡೀತಾರೆ ಅಷ್ಟೆ ''

''ಹೂಂ, ಭಾರಿ ಅಪರಾಧ. ಜೈಲಿಗೂ ಹಾಕ್ತಾರೆ... ಹೋಗೇ ಹೋಗೇ ನಿನ್ನನ್ನು ನೀನು ಸರಿ ಮಾಡಿಕೊಳ್ಳೋಕೆ ಆಗದೆ ಇದ್ದ ಮೇಲೆ ನನ್ನ ಸುದ್ದಿಗೆ ಬರಬೇಡ.''

''ನಿನ್ನ ಸುದ್ದಿ ಯಾರಿಗೆ ಬೇಕಾಗಿದೆ ? ನೀನಂತೂ ಅದನ್ನ ಬಿಟ್ಟು ಇದನ್ನು, ಇದನ್ನ ಬಿಟ್ಟು ಅದನ್ನು ಓದ್ತಾ ಇರ್ತಿಯಾ ಅಂತಂದ್ರೆ ನನಗೆ ತಲೇಲಿ ಬುದ್ಧಿ ಇಲ್ವಾ ... ಹೋಗೋ ಹೋಗೋ...'' ಮೂದಲಿಸಿದಳು.

''ಸಾಕ್ಮಾಡ್ತೀರಾ ? ಅಲ್ಲ ಕಣೆ, ಅವನಂತೂ ಗಂಡು ಹುಡುಗ ಅಂತಂದ್ರೆ ನೀನ್ಯಾಕೆ ಕಾಲು ಕೆರೆದುಕೊಂಡು ಜಗಳ ಆಡ್ತೀಯಾ ?''

''ನಂಗೊತ್ತು. ನೀನು ಅವನ ಪರ ವಹಿಸಿಕೊಂಡೇ ಮಾತಾಡ್ತೀಯ ಅಂತ. ಅವನು ಮಾಡೋದೆಲ್ಲಾ ಸರಿ. ನಾನು ಹೇಳೋದೆಲ್ಲ ತಪ್ಪು'' ಚಿಂಪಿ ಸೊರಸೊರ ಅಳತೊಡಗಿದಳು.

''ಸಾಕು ಮಾಹಾರಾಯ್ತಿ.. ಅತ್ತು ಹೆದರಿಸಬೇಡ. ಇನ್ನು ಮೇಲೆ ನಾನು ನಿನ್ನ ಸುದ್ದಿಗೆ ಬರಲ್ಲ... ತಪ್ಪಾಯ್ತು....'' ತನ್ನ ಕೆನ್ನೆಗೆ ತಾನೇ ಮೆಲ್ಲನೆ ಹೊಡೆದುಕೊಂಡ. ಚಿಂಪಿಗೆ ಸಮಾಧಾನವಾಗಿತ್ತು.

''ಹೆಣ್ಣು ಮಕ್ಕಳು ಸ್ವಲ್ಪ ತಗ್ಗಿ ಬಗ್ಗಿ ನಡೆಯೋದನ್ನ ಕಲೀಬೇಕು. ಎಲ್ಲಾ ಸಮಯದಲ್ಲೂ ನಿನ್ನ ಮಾತೇ ನಡೆಯುತ್ತೇ ಅಂದ್ಕೋಬೇಡ''

''ಅಲ್ಲಾ ಅಮ್ಮಾ... ನೀನೇ ಹೇಳು. ಅನ್ಯಾಯವಾದದ್ದು ನನಗೆ... ಹಾಗಾದ್ರೆ ನಾನು ಏನು ಆಡಲೇ ಬಾರದಾ ?''

''ನ್ಯಾಯ, ಅನಾಯ್ಯದ ಮಾತೇಕೆ ? ಇದೆಲ್ಲ ಹಣೇಬರಹ. ಇವನೇ ಸರಿಯಾಗಿ ಓದಿಕೊಂಡು ಬಂದಿದ್ದರೆ ಇಷ್ಟುಹೊತ್ತಿಗೆ ಕೆಲಸಕ್ಕೆ ಸೇರಬಹುದಾಗಿತ್ತು...'' ತಾಯಿ ವ್ಯಥೆಯಿಂದ ನುಡಿದಳು.

ಚಿಂಪಿ ಪ್ರೈವೇಟ್‌ನಲ್ಲಿ ಬಿ.ಎ. ಪರೀಕ್ಷೆಗಳನ್ನು ಕಟ್ಟುವುದಾಗಿ ಹೇಳಿದಳು. ಮನೇಲಿ ಕೂತು ಏನ್ಮಾಡ್ತೀಯಾ ? ಕಾಲೇಜಿನ ಪರಿಸರ ಸ್ನೇಹಿತೆಯರ ಒಡನಾಟ ಚೆನ್ನಾಗಿರುತ್ತೆ ಅಂತ

ಎಲ್ಲರೂ ಹೇಳಿದರು. ಅವಳು ಒಪ್ಪಲಿಲ್ಲ.

''ಇದು ನನ್ನ ನಿರ್ಧಾರ; ನನ್ನ ಇಷ್ಟ. ಓದಿನ ಜೊತೆಗೆ ಮನೇಲಿದ್ದು ಕಲಿಯುವುದು ಬೇಕಾದಷ್ಟಿದೆ. ನನ್ನನ್ನು ಯಾರೂ ಬಲವಂತ ಮಾಡಬೇಡಿ'' ಅಲ್ಲಿಗೆ ಅವಳ ವಿದ್ಯಾಭ್ಯಾಸ ಹೆಚ್ಚುಕಡಿಮೆ ಮುಗಿದಂತೆಯೇ ಆಗಿತ್ತು. ಮೇಲೆ ನಗುನಗುತ್ತಾ ಇದ್ದರೂ, ಅವಳಿಗೆ ಅಣ್ಣನ ಮೇಲಿನ ಅಸಮಾಧಾನ ಕಡಿಮೆ ಆಗಿರಲಿಲ್ಲ. ಅವನು ಏನೇ ಹೇಳಲಿ,ಅದನ್ನು ವಿರೋಧಿಸುತ್ತಿದ್ದಳು. ಹೇಗೂ ಈ ಮನೆಯಲ್ಲಿ ತಾನೇನು ಸದಾಕಾಲಕ್ಕೂ ಇರುವವಳಲ್ಲ. ಮದುವೆ ಮಾಡಿಕೊಂಡು ಹೋಗುವವಳು ಎಂದು ತನಗೆ ತಾನೇ ಸಮಾಧಾನವನ್ನು ಹೇಳಿಕೊಂಡಿದ್ದಳು.

ಎರಡು ವರ್ಷಗಳಿಂದ ದಿನಗಳು ಹಾಗೇ ಕಳೆದು ಹೋಗಿದ್ದವು. ಚಂದ್ರನ ಹಾಗೂ ಚಿಂಪಿಯ ವ್ಯಾಸಂಗ ನಡೆಯುತ್ತಿತ್ತು. ಚಿಂಪಿಗೆ ಯಾವ ವರನನ್ನುನೋಡಲು ಪ್ರಾರಂಭಿಸಿರಲಿಲ್ಲ. ಒಮ್ಮೊಮ್ಮೆ ಚಂದ್ರನಿಗೆ ತಾನು ಸಮಯವನ್ನು ಅನಾವಶ್ಯಕ ಹಾಳು ಮಾಡಿದೆನೇನೋ ಅಂತೆನಿಸಿತ್ತು. ತಂದೆ ಬಾಯಿ ಬಿಟ್ಟು ಏನನ್ನೂ ಹೇಳದಿದ್ದರೂ, ಅವರೂ ಏನೋ ಯೋಚನೆ ಮಾಡುತ್ತಿದ್ದಾರೆಂದೆನಿಸುತ್ತಿತ್ತು.

ಈ ವರ್ಷ ಕಳೆದರೆ, ತನ್ನ ಇಂಜಿನಿಯರಿಂಗ್ ಕೋರ್ಸ್ ಮುಗಿದು ಹೋಗುತ್ತದೆ. ನಂತರ ತಾನಂತೂ ಈ ಊರಿನಲ್ಲಿರುವುದಿಲ್ಲ. ಯಾವುದಾದರೂ ಬೇರೆ ಊರಿನಲ್ಲಿ ಕೆಲಸಕ್ಕೆ ಸೇರಿಕೊಂಡು ಸೆಟ್ಲ್ ಆಗ್ತೀನಿ ಎಂದು ನಿರ್ಧರಿಸಿದ್ದ. ತಂಗಿಯ ಜವಾಬ್ದಾರಿ ತನ್ನ ತಂದೆ ತಾಯಿಯರಿಗೆ ಸೇರಿದ್ದು. ಒಳ್ಳೆ ಕೆಲಸ ಸಿಕ್ಕಿ, ಕೈತುಂಬಾ ಸಂಬಳ ಸಿಗುವಂತಾದರೆ ತನಗೆ ಸಾಕು. ತನಗೆ ಬೇರೆ ಯಾರ ಗೊಡವೆಯೂ ಬೇಡ ಎಂದುಕೊಂಡಿದ್ದ. ಕೆಲವು ವಿಷಯಗಳಲ್ಲಿ ಅವನು ಸ್ವಾರ್ಥಿಯೇ, ಸ್ವಲ್ಪ ಛಲವಾದಿ ಕೂಡ. ತನಗೆ ಅನ್ನಿಸಿದ್ದನ್ನು ಮಾಡುವವನೇ. ತನಗೆ ಬೇಕೆನ್ನಿಸಿದ್ದನ್ನು ಪಡೆಯುವವನೇ. ಈಗಾಗಲೇ ಮೂರು ಮೂರವರೆ ವರ್ಷಗಳು ವ್ಯರ್ಥವಾಗಿವೆ. ತನ್ನ ಈ ಓದು ಮುಗಿದರೆ ಸಾಕು ಎಂದೆನಿಸಿತ್ತು.

ಜ್ವರ ವಾಸಿಯಾಗಿ ಮೇಲೆ ಎದ್ದಿದ್ದ. ಪಕ್ಕದ ಮನೆಗೆ ಬಂದಿದ್ದ ಆ ಹುಡುಗಿ ಮತ್ತೆ ಕಣ್ಣಿಗೆ ಬಿದ್ದಿರಲಿಲ್ಲ. ಊರಿಗೆ ವಾಪಸ್ಸು ಹೊರಟು ಹೋದಳೇನೋ ಅಂದುಕೊಂಡ. ಹಗಲೂ ರಾತ್ರಿ ಕಷ್ಟಪಟ್ಟು ಓದಿರಲಿಲ್ಲವಾದರೂ ಫಸ್ಟ್ ಕ್ಲಾಸ್‌ನಲ್ಲಿ ಪಾಸಾಗಬಹುದು ಎಂದೆನಿಸಿತ್ತು.

ಪರೀಕ್ಷೆ ಪೇಪರುಗಳು, ಮುಗಿಯುತ್ತಿದ್ದಂತೆಯೇ ತಾಯಿಯೊಡನೆ ಮಾತಾಡಿದ್ದ. ''ನಾಳೆ ನಾಡಿದ್ದರ ನಂತರ ನಾನು ಬೆಂಗಳೂರಿಗೆ ಹೋಗ್ತೀನಿ. ಅಲ್ಲಿಯೇ ಯಾವುದಾದರೂ ಕೆಲಸಕ್ಕೆ ಪ್ರಯತ್ನ ಮಾಡ್ತೀನಿ.''

''ಇಲ್ಲಿಂದಲೇ ಅಪ್ಲೈ ಮಾಡಿದ್ರೆ ಆಗಲ್ವಾ ? ಅಲ್ಲಿ ಹೋಗಿ ಎಲ್ಲಿರ್ತಿಯಾ ?''

''ಹೇಗೋ ಆಗುತ್ತೆ. ಸ್ನೇಹಿತರಿದಾರೆ ಹೋಟೆಲ್ಲಿದೆ''

''ರಿಸಲ್ಟ್ ಬರದೆ ಹೇಗ್ಗೋ ಕೆಲಸ ಸಿಕ್ಕುತ್ತೋ .. ? ''

''ಮೊದಲೇ ವಿಚಾರಿಸಿಕೊಂಡಿದ್ದರೆ ಸುಲಭವಾಗುತ್ತೆ. ರಿಸಲ್ಟ್ ಬರೋವರೆಗೂ

ಕಾಯಬೇಕಾಗಿಲ್ಲ. ಫಸ್ಟ್‌ಕ್ಲಾಸ್‌ನಲ್ಲಿ ಪಾಸಾಗ್ತೀನಿ ಅನ್ನೋ ನಂಬಿಕೆ ನನಗಿದೆ.''

''ನಿನ್ನ ಧೈರ್ಯವಪ್ಪಾ... ನಾನು ಬೇಡಾ ಅನ್ನಲ್ಲ... ಆದ್ರೆ ಒಂದ್ಮಾತು... ಹೋಟೇಲಿನ ಊಟ ತಿಂಡಿ ಆರೋಗ್ಯಕ್ಕೆ ಒಳ್ಳೇದಲ್ಲ. ಸ್ನೇಹಿತರುಗಳ ಮನೇಲಿ ಎಷ್ಟು ದಿನಾಂತ ಇರೋಕ್ಕಾಗುತ್ತೆ ನಿನೇಕೆ ನಿನ್ನ ಚಿಕ್ಕಪ್ಪನ ಮನೇಲಿ ಇರಬಾರದು ?''

''ಆ ಉರಿಸಿಂಗನ ಮನೇಲಾ ? ಕೂತ್ರೆ ತಪ್ಪು, ನಿಂತ್ರೆ ತಪ್ಪು ಗುರ್‌ಅಂತಾನೇ ಇರ್ತಾನೆ...''

''ಆಗೆಲ್ಲಾ ನೀವು ಚಿಕ್ಕೋರು... ತುಂಬಾ ಚೇಷ್ಟೆ ಮಾಡ್ತಿದ್ರಿ . ಈಗಲೂ ಹಾಗೇ ಇದ್ದೀರಾ ? ಅವನಿಗೂ ನಿನ್ನನ್ನು ಕಂಡು ಖುಷಿಯಾಗುತ್ತೆ. ಅವನೂ ಬದಲಾಗಿರ್ತಾನೆ.''

''ನೋಡೋಣ. ಮೊದಲು ಸ್ನೇಹಿತನ ಮನೆಗೆ ಹೋಗ್ತೀನಿ. ಅಲ್ಲಿ ಸರಿ ಹೋಗದಿದ್ದರೆ ಹೋದರೂ ಹೋಗ್ತೀನಿ. ನೀನು ಈಗಲೇ ಅಪ್ಪನಿಗೆ ಏನನ್ನು ಹೇಳಬೇಡ''

''ಅಲ್ಲಿಯೇ ಇದ್ರೆ ಚಿಂಪಿಗೆ ಯಾವುದಾದ್ರೂ ಸರಿಹೋಗುವಂತಹ ಗಂಡನ್ನು ನೋಡಬಹುದು. ನರಸಿಂಹನಿಗೆ ಊರತುಂಬಾ ಪರಿಚಯವಂತೆ. ನಿನ್ನ ಕೆಲಸಕ್ಕೂ ಅನುಕೂಲವಾಗಬಹುದು.''

''ಅದೆಲ್ಲಾ ಸುಳ್ಳು. ನನ್ನ ಅರ್ಹತೆಗೆ ತಕ್ಕ ಹಾಗೆ ನನಗೆ ಕೆಲಸ ಸಿಗುತ್ತೆ. ಅದಕ್ಕೆ ಚಿಕ್ಕಪ್ಪನ ಶಿಫಾರಸ್ಸು ಯಾಕೆ ? ಚಿಂಪಿಗ್ಯಾಕೆ ಬೆಂಗಳೂರಿನ ಗಂಡು ! ಅವಳಿಗೆ ಬೆಂಗಳೂರಿನ ಜೀವನ ಕಷ್ಟವಾಗುತ್ತೆ. ಇಂಥಾ ಊರೇ ಸರಿ.''

''ನೋಡಿದ್ಯೇನಮ್ಮ ಹೇಗಾಡ್ತಾನೆ ? ನಾನು ಏನೇ ಆದ್ರೂ ಈ ಊರಿನಲ್ಲಿ ಮಾತ್ರ ಇರಲ್ಲ. ತಾನು ಮಾತ್ರ ದೊಡ್ಡ ಸಿಟೀಲಿರಬೇಕು. ನಾನು ಮಾತ್ರ ಇಂಥಾ ಕೊಂಪೇಲಿರ ಬೇಕಾ?''

''ಬಿಡೇ ಜಗಳ ಯಾಕೆ ಆಡ್ತೀರಿ ನಿನ್ನ ಋಣ ಎಲ್ಲಿರುತ್ತೋ ಅಲ್ಲಿಗೇ ಹೋಗಿ ಸೇರ್ತೀಯ... ಇನ್ನು ಒಂದು ವರ್ಷದ ಓದು ಬಾಕಿ ಇದೆಯಲ್ಲ. ಅಷ್ಟರೊಳಗೆ ಇವನೇ ಒಂದು ಮನೆ ಮಾಡಿರುತ್ತಾನೆ... ನೀನೇ ಹೋಗಿ ಅವನ ಜೊತೆಲೀದ್ದು ಅಡಿಗೆ ಗಿಡಿಗೆ ಮಾಡಿ ಹಾಕಬಹುದು. ''

''ನಾನ್ಯಾಕೆ ಅಡಿಗೆ ಮಾಡಿ ಬಡಿಸಲಿ ? ನಾನೇನು ಇವನ ಮನೆ ಅಡಿಗೆಯೋಳಾ? ನೋಡ್ತಿರು ಕೆಲಸ ಸಿಕ್ಕ ಕೂಡಲೇ ನಮಗೂ ತಿಳಿಸದಂತೆ ಮದುವೆ ಮಾಡ್ಕೋತಾನೆ. ... ಅವಳು ನೋಡ್ಕೋತಾಳೆ ಬಿಡು.''

ತಾಯಿ ತಮಾಷೆ ಎಂಬಂತೆ ಅವಳ ಮಾತಿಗೆ ನಕ್ಕಳು. ಆದರೆ ಚಂದ್ರ ನಗಲಿಲ್ಲ. ಅವನಿಗೆ ಯಾವ ಜವಾಬ್ದಾರಿಯನ್ನು ಹೊರುವ ಇಷ್ಟವಿರಲಿಲ್ಲ. ಆದರೆ ಏನನ್ನು ಹೇಳಲಿಲ್ಲ. ತನ್ನ ಮದುವೆ ಬಗ್ಗೆ ಅವನೇನೂ ಚಿಂತಿಸಿರಲಿಲ್ಲ. ಆದರೆ ಈಗ ತಂಗಿಯ ಮಾತಿನಿಂದಾಗಿ, ಏಕಾಗಬಾರದು ಎಂಬ ಭಾವನೆ ಮೂಡಿತು. ಆ ಗಳಿಗೆಯಲ್ಲಿ ತಟ್ಟನೆ ನೆನಪಿಗೆ ಬಂದು ಕಣ್ಣೆದುರು ನಿಂತವಳು ಅದೇ ಹುಡುಗಿ !

ಕೆಲವಾರು ದಿನಗಳಿಂದ ಆ ಹುಡುಗಿಯ ಬಗ್ಗೆ ತಲೆ ಕೆಡಿಸಿಕೊಳ್ಳುತ್ತಿದ್ದೇನೆ. ಅವಳು

ಯಾರು ? ಎಲ್ಲಿದ್ದಾಳೆ ? ಏನು ಓದುತ್ತಿದ್ದಾಳೆ ಒಂದೂ ಸರಿಯಾಗಿ ತಿಳಿಯದು. ಏನೋ ಆಕರ್ಷಣೆ ಸೆಳೆದಿದೆ. ಅವಳ ವಯಸ್ಸು ಎಷ್ಟೋ ? ಅವಳ ಮನಸ್ಸಿನಲ್ಲಿ ಏನಿದೆಯೋ ತಿಳಿಯುವುದಾದರೂ ಹೇಗೆ ? ಈ ವಿಷಯದಲ್ಲಿ ಚಿಂಪಿ ತನಗೆ ಖಂಡಿತಾ ಯಾವ ಸಹಾಯನ್ನು ಮಾಡುವುದಿಲ್ಲ. ನಾನೇ ತಿಳಿದುಕೊಳ್ಳಬೇಕು. ಆದರೆ ಹೇಗೆ ? ಪಕ್ಕದ ಮನೆಯಲ್ಲಿ ನನ್ನ ವಯಸ್ಸಿನ ಯಾವ ಗಂಡು ಹುಡುಗರೂ ಇರುವಂತೆ ಅನ್ನಿಸುವುದಿಲ್ಲ. ಅಮ್ಮನ್ನ ಕೇಳುವುದು ಹೇಗೆ ? 'ತಾಳಿದವನು ಬಾಳಿಯಾನು ' ಅಂತ. ನಿಧಾನವಾಗಿ ನಾನೇ ಎಲ್ಲವನ್ನು ತಿಳಿದುಕೊಳ್ಳುತ್ತೇನೆ.

ಅವನು ಬಸ್‌ಸ್ಟ್ಯಾಂಡಿಗೆ ಹೋಗಿ ಬೆಂಗಳೂರಿಗೆ ಹೋಗುವ ಬಸ್ಸುಗಳ ಬಗ್ಗೆ ವಿಚಾರಿಸಿದಾಗ, ಪಕ್ಕದ ಮನೆಯಾತ ಅವನ ಬಳಿಗೆ ಬಂದು ಮುಗುಳ್ನಕ್ಕು ಕೇಳಿದನು. ಯಾವುದೋ ಊರಿಗೆ ಹೊರಟಿರುವ ಹಾಗಿದೆ... ಅಥವಾ ಯಾರಿಗಾದರೂ ಕಾಯ್ತಾ ಇದೀರೋ.... ?

''ಇಲ್ಲ ಅಂಕಲ್, ನಾನೇ ಬೆಂಗಳೂರಿಗೆ ಹೊರಟಿದ್ದೀನಿ... ಮುಂದಿನ ಬಸ್ಸು ಎಷ್ಟು ಹೊತ್ತಿಗೆ ಹೊರಡುತ್ತೆ ಅಂತ ವಿಚಾರಿಸುತ್ತಿದ್ದೆ... ''

''ಹೌದಾ ? ನನ್ನ ತಂಗಿ ಮಗಳೂ ಬೆಂಗಳೂರಿಗೆ ಹೊರಟಿದಾಳೆ. ಒಬ್ಬಳೇ ಹೊರಟಿದಾಳಲ್ಲ ಅಂತ ಆತಂಕವಾಗ್ತಿದೆ. ಅವಳು ಆ ಬಸ್ಸಿಗೆ ಹತ್ತಿದಾಳೆ. ಇನ್ನು ಟಿಕೆಟ್ ಕೊಟ್ಟಿದಾರೋ ಇಲ್ಲವೋ. ಟಿಕೆಟ್ ಆಗಿಲ್ಲದಿದ್ರೆ ಅವಳೂ ಮುಂದಿನ ಬಸ್ಸಿಗೆ ಹೊರಡಬಹುದಾಗಿತ್ತು. ಒಂದ್ನಿಮಿಷ ಕೇಳಿಕೊಂಡು ಬರ್ತೀನಿ'' ಅವನ ಉತ್ತರಕ್ಕೂ ಕಾಯದೇ ಆತ ಆ ಬಸ್ಸಿನ ಬಳಿಗೆ ಓಡಿದನು. ಕೆಲವೇ ನಿಮಿಷಗಳಲ್ಲಿ ಆತ ವಾಪಸ್ಸಾದರು... ಅವರು ಬಳಿಗೆ ಬರುವವರೆಗೂ ಅವನು ತಿರುಗಿ ನೋಡಿರಲಿಲ್ಲ. ಯಾವುದೋ ಹುಡುಗಿಯ ಜವಾಬ್ದಾರಿಯನ್ನು ನನ್ನ ತಲೆಗೆ ಕಟ್ತಾರೆ. ನಂಗ್ಯಾಕೆ ಸಿಗಬೇಕಿತ್ತು ಈ ಮನುಷ್ಯ ಎಂದು ತನ್ನಲ್ಲೇ ಸಿಡಿಮಿಡಿಗೊಳ್ಳುತ್ತಿದ್ದ.

''ನೋಡು ಪೂರ್ಣ.... ಇವರು ನಮ್ಮ ಪಕ್ಕದ ಮನೆಯ ಹುಡುಗ.... ''

ಚಂದ್ರ ಪಕ್ಕಕ್ಕೆ ತಿರುಗಿ ನೋಡಿದ ಅಷ್ಟೇ.... ಅವನ ಹುಬ್ಬುಗಳ ಗಂಟು ತಾನೇ ತಾನಾಗಿ ಸಡಿಲಗೊಂಡಿತು. ಇವಳೇ ಅಂತ ಗೊತ್ತಿದ್ದಿದ್ರೆ ಮನೆಯಿಂದಲೇ ಕರೆದುಕೊಂಡು ಬರ್ತಿದ್ದೆ ಅಂತಂದುಕೊಂಡ. ಮುಖದಲ್ಲಿ ಮುಗುಳ್ನಗು ಸರಾಗವಾಗಿ ಮೂಡಿತು.

''ನಿಮ್ಮ ಹೆಸರು ಚಂದ್ರ ಅಂತಲ್ವಾ ? ''.... ಕೇಶವ ಕೇಳಿದ.

''ನನ್ನ ಪೂರ್ಣ ಹೆಸರು ಪೂರ್ಣಚಂದ್ರ ಅಂತ... ಮನೇಲಿ ಷಾರ್ಟ್ ಆಗಿ ಚಂದ್ರ ಅಂತ ಕರೀತಾರೆ.''

''ಓ... ಇವಳ ಹೆಸರು ಪೂರ್ಣಿಮಾ ಅಂತ. ಮನೇಲಿ ಪೂರ್ಣ ಅಂತ ಕರೀತೀವಿ. ನನಗೀಗ ಧೈರ್ಯ ಬಂತು. ಇವಳು ನವರಂಗ್ ಟಾಕೀಸ್ ಬಳಿ ಇಳೀತಾಳೆ. ನೀವು ಹೋಗುವುದು ಎಲ್ಲಿಗೆ ?''

''ನಾನು ಬಸವೇಶ್ವರ ನಗರದಲ್ಲಿರುವ ನನ್ನ ಸ್ನೇಹಿತನ ಮನೆಗೆ ಹೋಗ್ತಿದೀನಿ. ಬೇಕಾದರೆ ಇವರನ್ನು ಇವರ ಮನೆ ತಲುಪಿಸಿ, ನಾನು ಮುಂದಕ್ಕೆ ಹೋಗ್ತೀನಿ. ''

''ಅಷ್ಟು ಮಾಡಿ ಬಿಡಪ್ಪಾ ಸಾಕು. ತಲುಪಿದ ಕೂಡಲೇ ಫೋನು ಮಾಡಿಸಿ ಬಿಡು. ಕಾಯ್ತಾ ಇರ್ತೀವಿ. ಬೆಳಗಿನ ಹೊತ್ತಿನ ಪ್ರಯಾಣಕ್ಕಿಂತ ರಾತ್ರಿಯ ಪ್ರಯಾಣ ವಾಸಿ....ಆದ್ರೆ ಹುಡಿಗಿಯರಿಗೆ ಕ್ಷೇಮವಲ್ಲ....''

''ನಾನು ತಲುಪುವ ಹೊತ್ತಿಗೆ, ನನ್ನ ಸ್ನೇಹಿತ ಕೆಲಸದಿಂದ ಬಂದಿರುತ್ತಾನೆ. ಇಲ್ಲದಿದ್ದರೆ ನನಗೂ ರಾತ್ರಿಯ ಪ್ರಯಾಣವೇ ಇಷ್ಟ ಬೆಳಿಗ್ಗೆ ಕೆಲಸದ ಗಡಿಬಿಡಿ... ಹಾಗೆ....''

''ಹೌದು, ಹೌದು. ತುಂಬಾ ಉಪಕಾರವಾಯ್ತಪ್ಪಾ.... ಜ್ವರ ಬಂದು ಸುಧಾರಿಸಿಕೊಳ್ಳೋದ್ರಲ್ಲಿ ಒಂದು ವಾರವೇ ಕಳೆದುಹೋಯ್ತು. ಇಲ್ಲದಿದ್ದರೆ ಅವರ ಅಪ್ಪ ಅಮ್ಮನ ಜೊತೆಯೇ ಹೊರಟು ಹೋಗುತ್ತಿದ್ದಳು. .... ''

''ಹಾಗೆ ನೀನು ಹೊರಟು ಹೋಗಿರುತ್ತಿದ್ದರೆ, ನನಗೀಗ ಎಲ್ಲಿ ಜೊತೆಗೆ ಸಿಗುತ್ತಿದ್ದೆ? ಒಳ್ಳೇದೇ ಆಯ್ತು... ''ಎಂದು ತನ್ನಲ್ಲೇ ಹೇಳಿಕೊಂಡು ಅವಳ ಕಡೆ ನೋಡಿ ಮುಗುಳ್ನಕ್ಕ. ಅವಳೂ ನಿಸ್ಸಂಕೋಚವಾಗಿ ಮರು ಮುಗುಳ್ನಗೆ ಬೀರಿದಳು. ಈ ಹುಡುಗಿಗ್ಯಾಕೆ ಯಾರದ್ದಾದರೂ ಜೊತೆ ಬೇಕು ? ಒಬ್ಬಳೇ ದೇಶವನ್ನೆಲ್ಲಾ ಸುತ್ತಾಡಿ ಬರಬಲ್ಲಳು ಎಂದುಕೊಂಡ.

ಹಿಂದಿನ ಬಸ್ಸು ಹೊರಟು ಹೋಗಿತ್ತು. ಮುಂದೆ ಹೊರಡಲಿರುವ ಬಸ್ಸು ಫ್ಲಾಟ್‌ಫಾರಂಗೆ ಬಂದು ನಿಂತಿತು. ಯಾರ್ರೀ ಬೆಂಗ್ಳೂರ್... ಬೆಂಗ್ಳೂರ್... ಕಂಡಕ್ಟರ್ ಕೂಗು ಹಾಕಿದ. ಚಂದ್ರನ ಬಳಿ ಒಂದು ಸಣ್ಣ ಸೂಟ್‌ಕೇಸ್ ಹಾಗೂ ಒಂದು ಹ್ಯಾಂಡ್‌ಬ್ಯಾಗ್. ಅವಳು ಮುಂಚೆಯೇ ಹತ್ತಿ ಕಿಟಕಿಯ ಬಳಿಯ ಸೀಟನ್ನು ಹಿಡಿದಳು. ಇವನು ಅವಳ ಸೂಟ್‌ಕೇಸನ್ನು ಹೊತ್ತು ಮೇಲೆ ಲಗೇಜ್ ಇಡುವ ಸ್ಥಳದಲ್ಲಿ ಅವಳಿಗೆ ಕಾಣುವಂತೆ ಇಟ್ಟ, ಅದರ ಪಕ್ಕದಲ್ಲಿ ತನ್ನ ಕಿಟ್‌ಬ್ಯಾಗ್‌ನ್ನು ತೂರಿಸಿ. ಅವಳ ಸೀಟಿನ ಹಿಂದಿನ ಸೀಟಿನಲ್ಲಿ ಕುಳಿತ. ಏಕೋ ಏನೋ ಅವಳ ಪಕ್ಕ ಕೂರುವ ಧೈರ್ಯ ಬರಲಿಲ್ಲ. ಅವಳ ಸೋದರಮಾವ ಅಲ್ಲೇ ನಿಂತಿದ್ದರಲ್ಲ.

ಮುಕ್ಕಾಲು ಜನ ಪ್ರಯಾಣಿಕರು ತುಂಬಿದ ಕೂಡಲೇ ಬಸ್ಸು ಹೊರಟಿತು. ಆತ ಪೂರ್ಣಿಮಾಗೆ ಉಪದೇಶ ಹೇಳುತ್ತಲೇ ಇದ್ದರು. ಇವನು ಸುಮ್ಮನೆ 'ಬರ್ತೀನಿ' ಎನ್ನುವಂತೆ ತಲೆಯಾಡಿಸಿದ. ಆತ ಕೈ ಯಾಡಿಸಿದರು. ಬಸ್ಸು ಹೊರಟಾಗ ಹಾಯೆನಿಸಿತ್ತು. ಮಾತು ಪ್ರಾರಂಭಿಸುವುದು ಹೇಗೆ ಎಂದು ಚಿಂತಿಸುತ್ತಿದ್ದ. ಕಂಡಕ್ಟರ್ ಸಮೀಪಕ್ಕೆ ಬಂದಾಗ, ಇವನೇ ಎರಡು ಟಿಕೆಟ್‌ಗಳನ್ನು ತೆಗೆದುಕೊಂಡ. 'ನನ್ನ ಟಿಕೆಟ್ ನಾನೇ ತಗೋತಿದ್ದೆ' ಮೆಲ್ಲನೆ ಉಲಿಯಿತು ಕೋಗಿಲೆ. ಇವನ ಮನ ಕುಣಿದೆದ್ದು ಹಾಡಿತು.

''ಪರವಾಗಿಲ್ಲ...'' ಅದೇನು ಮಹಾ ಎನ್ನುವಂತೆ ನುಡಿದ. ಅವಳು ಮತ್ತೇನನ್ನು ಆಡದೇ ಸುಮ್ಮನಾದಾಗ ನಿರಾಸೆಗೊಂಡ. ಅವಳು ಟಿಕೆಟ್ಟಿನ ಹಣವನ್ನು ಆಫರ್ ಮಾಡದಿದ್ದಾಗ ಪಿಚ್ಚೆನಿಸಿತು. 'ಇರಲಿ ಒಂದಲ್ಲ ಒಂದು ದಿನ ನಿನ್ನಿಂದ ಈ ಹಣವನ್ನು ವಸೂಲಿ ಮಾಡ್ತೀನಿ' ಎಂದು ತನ್ನಲ್ಲೇ ಹೇಳಿಕೊಂಡ.

ಅವಳು ಮುಂದೆ ಕುಳಿತಿದ್ದರಿಂದ, ಅವಳು ಹಿಂದೆ ತಿರುಗಿ ಮಾತನಾಡಲು ಪ್ರಯತ್ನ

ಮಾಡಲಿಲ್ಲ. ಇವನು ಮುಂದೆ ಬಾಗಿ ಮಾತನಾಡಲು ಅನುಮಾನಿಸಿದ. ಮಧ್ಯೆ ಒಂದು ಕಡೆ ಬಸ್‌ಗೆ ಹತ್ತು ಇಪ್ಪತ್ತು ನಿಮಿಷಗಳ ಬ್ರೇಕ್ ಇದ್ದಿತು. ಅವನು ಕೆಳಗಿಳಿಯುವಾಗ ''ಎಳೆನೀರು, ಕೂಲ್‌ಡ್ರಿಂಕ್ಸ್ ಏನಾದ್ರೂ ಬೇಕಾ ? '' ಔಪಚಾರಿಕ ವಾಗಿ ಕೇಳಿದ.

''ಏನೂ ಬೇಡ.... ಥ್ಯಾಂಕ್ಸ್....''

''ಕಾಫಿ....''

''ಥೂ, ಕಾಫಿ ಚೆನ್ನಾಗಿರುತ್ತಾ ಇಲ್ಲಿ?'' ನಕ್ಕಳು.

''ಚೆನ್ನಾಗೇನಿರಲ್ಲ, ನೀವು ಕುಡಿಯೋದಾದ್ರೆ ನಾನೂ ಕುಡಿತೀನಿ.''

''ಚೆನ್ನಾಗಿರದ ಕಾಫೀನ ಏನು ಕುಡಿಯೋದು ? ನನ್ನ ಹತ್ತಿರ ಕಿತ್ತಲೆ ಹಣ್ಣು ಮೋಸಂಬಿ ಹಣ್ಣು ಇದೆ. ಬಿಡಿಸಿಕೊಂಡು ತಿಂತೀನಿ.''

''ನಿಮಗೆ ಬೇಕಾ?'' ಎಂದು ಅವಳು ಕೇಳಲಿಲ್ಲವೆನ್ನುವುದನ್ನು ಗಮನಿಸಿದ. 'ನಿನ್ನ ಅಜ್ಜಿ ಕೊಟ್ಟ ಆ ಹಳೇ ಹಣ್ಣು ಯಾರಿಗೆ ಬೇಕು ಎಂದು ತನ್ನಲ್ಲೇ ಹೇಳಿಕೊಂಡು, ಎದುರಿಗಿದ್ದ ಸ್ಟಾಲ್‌ನಲ್ಲಿ ಎರಡು ಬಾಳೆಹಣ್ಣುಗಳನ್ನು ತಂದು ಒಂದನ್ನು ಅವಳಿಗೆ ಕೊಟ್ಟ. ತಾನು ಹಣ್ಣನ್ನು ತಿಂದು ಮುಗಿಸಿ ಸಿಗರೇಟೊಂದನ್ನು ಹಚ್ಚಿ ಹೊಗೆ ಬಿಡತೊಡಗಿದ. ಅವಳು ಅವನನ್ನೇ ವಿಚಿತ್ರವಾಗಿ ನೋಡಿದಳು. 'ಥೂ ಸಿಗರೇಟು ಸೇದುತ್ತಾನೆ ' ಎನ್ನು ವ ಭಾವನೆ ಇತ್ತು ಆ ನೋಟದಲ್ಲಿ.

''ನಾನೇನು ಸದಾ ಸೇದಲ್ಲ. ಈಗ ಸುಮ್ಮನೆ ಹೀಗೆ.... ಹುಡುಗಿಯರ ಎದುರಿಗೆ ಒಂದು ಸ್ಟೈಲ್. ..''ಎಂದು ಹೇಳಬೇಕೆನ್ನಿಸಿತ್ತು. ಆದರೆ ಹೇಗೆ ಹೇಳುವುದು ? ಸಿಗರೇಟು ಮುಗಿಸಿ, ಕೆಳಗೆ ಹಾಕಿದ ಚೂರನ್ನು ಕಾಲಲ್ಲಿ ಹೊಸಗಿ, ಮತ್ತೆ ಬಸ್ಸನ್ನೇರಿದ. ಅವನು ಕುಳಿತ ಕೂಡಲೇ ಅವಳು ಕರ್ಚೀಫಿನಿಂದ ಮೂಗನ್ನು ಮುಚ್ಚಿಕೊಂಡಳು. ಇವನ ಮೈಯೆಲ್ಲಾ ಉರಿದಂತಾಯಿತು. ಇವಳ ಮಾವ, ಇವಳ ಕೇರ್‌ನ ನನಗೆ ವಹಿಸಿ ಹೋದರು. ಇವಳಿಗೆ ಇಷ್ಟನ್ನು ಸಹಿಸಿಕೊಳ್ಳೋಕೆ ಆಗಲ್ವಾ ? ಇರಲಿ ಇರಲಿ... ಮುಂದೆ ಏನೇನು ಸಹಿಸಬೇಕು ಅಂತ ಇವಳಿಗೆ ಗೊತ್ತಿಲ್ಲ ಅಂತ ಕಾಣುತ್ತೆ ಅಂತ ಅಂದುಕೊಂಡು ತೆಪ್ಪಗೆ ಕೂತ. ಪರಸ್ಪರ ಮಾತಾಡಿದ್ರೆ ಪರಿಚಯ ಸ್ನೇಹಕ್ಕೆ ತಿರುಗುತಿತ್ತು. ಆದರೆ ಆಸ್ಪದವೇ ಆಗಲಿಲ್ಲವಲ್ಲ. ಬಸ್ಸು ಬೆಂಗಳೂರು ತಲುಪುವವರೆಗೂ ಇಬ್ಬರಿಗೂ ಸ್ವಲ್ಪ ತೂಕಡಿಕೆ... ಮಂಪರು.

''ಯಾರ್ರೀ ನವರಂಗ್ ಇಳಿಯುವವರು ?'' ಕಂಡೆಕ್ಟರ್ ಕರೆದಾಗ ಇವನು ಎದ್ದು ನಿಂತ. ಅವಳ ಲಗೇಜನ್ನು ತಾನೇ ಹೊತ್ತು ಕೆಳಗಿಳಿಸಿದ. ಸಮೀಪದಲ್ಲಿದ್ದ ಒಂದು ಆಟೋ ರಿಕ್ಷಾ ಕರೆದು ಅವಳನ್ನು ಹತ್ತುವಂತೆ ಹೇಳಿ ಲಗ್ಗೇಜುಗಳನ್ನಿಟ್ಟ.

''ಯಾವ ಕಡೆ ಹೋಗಬೇಕೂಂತ ಹೇಳ್ತೀರಾ ? '' ಅವಳ ಪಕ್ಕದಲ್ಲಿ ಕೂರುತ್ತಾ ಕೇಳಿದ. ಅವಳು ಹೇಳಿದಳು. ಆಟೋ ಚಲಿಸಿತು. ತನ್ನ ಮನೆಯ ಮುಂದೆ ಇಳಿಯುವಾಗ ಅವಳು 'ಥ್ಯಾಂಕ್ಸ್' ಎಂದಷ್ಟೇ ಹೇಳಿ ತನ್ನ ಲಗೇಜನ್ನು ಹಿಡಿದು ಮನೆಯ ಕಡೆ ನಡೆದಳು. ಬಾಯಿ ಮಾತಿಗೂ ಬನ್ನಿ ಎಂದು ಕರೆಯಲಿಲ್ಲವಲ್ಲ ಎಂದು ಪಿಚ್ಚೆನ್ನಿಸಿತ್ತು. ತುಟಿ ಸೊಟ್ಟಗೆ ಮಾಡಿದ.

''ಮನೆಗೆ ಫೋನು ಮಾಡಿ, ಮರೀಬೇಡಿ'' ತನ್ನ ಕರ್ತವ್ಯವೆಂಬಂತೆ ಜ್ಞಾಪಿಸಿದ.

''ನೀವು ಮನೆಗೆ ಫೋನು ಮಾಡಲ್ವಾ ?'' ಬಳಕುತ್ತಾ ದುಂಡು ಕೆನ್ನೆಗಳನ್ನು ಅಲುಗಿಸುತ್ತಾ ಕೇಳಿದಳು.

''ಹೇಗೂ ನೀವು ಮಾಡ್ತೀರಲ್ಲ. ಆಗ ಹಾಗೇ ನಮ್ಮ ಮನೆಗೂ ಮೆಸೇಜ್ ಕೊಡುವಂತೆ ತಿಳಿಸಿಬಿಡಿ.'' ತನ್ನ ಜಾಣತನಕ್ಕೆ ತಾನೇ ಎದೆ ನೀವಿಕೊಂಡ.

''ಓ...ಕೇ... ನಿಮ್ಮ ಸ್ನೇಹಿತನ ಮನೆ ನಂಬರನ್ನು ಕೊಡಿ. ನಾನು ನಿಮಗೂ ಫೋನು ಮಾಡ್ತಿನಿ.''

''ಪರವಾಗಿಲ್ಲ ಬಿಡಿ. ಅವನ ಹತ್ತಿರ ಫೋನ್ ಇದೆಯೋ ಇಲ್ಲವೋ ನನಗೆ ಗೊತ್ತಿಲ್ಲ.'' ಹೀನಾಯವೆನಿಸಿತ್ತು. ಅವಳ ಮನೆ ನಂಬರನ್ನು ಮನದಲ್ಲಿ ಗುರುತಿಟ್ಟುಕೊಂಡು, ಆಟೋದವನಿಗೆ ಮುಂದೆ ಹೊರಡುವಂತೆ ಹೇಳಿದ. ಇವನು ಬರುವ ವಿಷಯ ತಿಳಿದಿದ್ದರಿಂದ ಸ್ನೇಹಿತ ಇವನಿಗಾಗಿ ಕಾಯುತ್ತಾ ಕುಳಿತಿದ್ದ. ಇವನಿಗೆ ಹಿತವೆನಿಸಿತ್ತು.

ಸ್ನೇಹಿತನೊಡನೆ ಮಾತನಾಡಿ ಉದ್ಯೋಗಕ್ಕೆ ಸಂಬಂಧಿಸಿದ ಕೆಲವು ಮಾಹಿತಿಗಳನ್ನು ಸಂಗ್ರಹಿದ. ''ಇಂಜಿನಿಯರ್‌ಗೆ ಕೆಲಸ ಸಿಗುವುದು ಕಷ್ಟವೇನಲ್ಲ. ಆದರೆ ನಿನಗೆ ಸರಿಹೊಂದುವಂಥ ಕೆಲಸಕ್ಕೇ, ತಡವಾದರೂ ಪರವಾಗಿಲ್ಲ. ಹುಡುಕಿ ಸೇರ್ಕೋ.... ಆಮೇಲೆ ಸುಮ್ಮನೆ ಬೇಜಾರಾಗುತ್ತೆ. ಈಗಾಗ್ಲೇ ನೀನು ಎರಡು ಮೂರು ವರ್ಷ ಲಾಸ್ ಮಾಡಿಕೊಂಡಿದೀಯ''

''ಅದೇ ನನಗೆ ಬೇಜಾರು... ಆ ಲಾಸ್‌ನ ಹೇಗೆ ತುಂಬಬೇಕು ಅಂತ ತಿಳೀತಿಲ್ಲ.''

''ಈಗ ಏನೂ ಮಾಡಕ್ಕಾಗಲ್ಲ. ಪಾಲಿಗೆ ಬಂದದ್ದು ಪಂಚಾಮೃತ ಅಂತ... ಈಗ ಅದನ್ನೆಲ್ಲ ಸರಿಸಿಬಿಡಬೇಕು.''

''ಯಾಕೋ ನನ್ನ ಗ್ರಹಚಾರವೇ ಚೆನ್ನಾಗಿಲ್ಲ ಅಂತನ್ನಿಸುತ್ತೆ. ಪರೀಕ್ಷೆಯ ಮುಂಚೆ ಹುಶಾರಿರಲಿಲ್ಲ. ರಿಸಲ್ಟ್ ಏನಾಗುತ್ತೋ ಅಂತ.''

''ರಿಸಲ್ಟ್ ಬಗ್ಗೆ ಚಿಂತಿಸಬೇಡ... ಆ ರಿಸಲ್ಟ್ ಸರಿಯಿಲ್ಲ ಅಂತ ಅನ್ನಿಸಿದರೆ ರಿ ಎಕ್ಸಾಂ ತಗೊಳ್ಳೋ ಹುಮ್ಮಸ್ಸಿನವನು ನೀನು''

''ಚುಡಾಯಿಸಬೇಡ ನೋಡು... ಈಗ ಹಾಗೆಲ್ಲಾ ಮಾಡಕ್ಕಾಗಲ್ಲ''

''ಸ್ಸಾರಿ ಫ್ರೆಂಡ್.. ಈಗ ನಿನ್ನ ಆಟಿಟ್ಯೂಡ್ ಬದಲಾಗಿದೆ. ಓ.ಕೆ. ಅದೂ ಒಳ್ಳೆಯ ಲಕ್ಷಣವೇ. ನಿನಗೆ ಸರಿಹೊಂದುವಂಥ ಕೆಲಸ ಸಿಗದಿದ್ದರೆ, ನೀನೇ ಏಕೆ ಒಂದು ಬಿಸಿನೆಸ್ ಪ್ರಾರಂಭ ಮಾಡಬಾರದು ? ''

''ಎಂಥಾ ಬಿಸಿನೆಸ್ಸೋ ?''

''ಮೆಷನರಿ ಸ್ಪೇರ್ ಪಾರ್ಟ್ಸ್, ಎಲೆಕ್ಟ್ರಾನಿಕ್ಸ್ ಗೂಡ್ಸ್, ಎಲೆಕ್ಟ್ರಿಕಲ್ ಥಿಂಗ್ಸ್, ಅದೂ ಇದೂ ಅಂತ ಡೀಲರ್‌ಗಳಾಗಿ, ಬೇಕಾದಷ್ಟು ಸಂಪಾದಿಸ್ತಾರೆ ಗೊತ್ತಾ ? ತಿಂಗಳ ಸಂಬಳ, ಮೂವತ್ತನೇ ತಾರೀಖಿಗೆ ಕೈಗೆ ಸೇರೋ ವಿಷಯ ಬೇರೆ.... ಕಷ್ಟಪಟ್ಟು ಲಾಭಗಳಿಸೋ ವಿಷಯವೇ ಬೇರೆ.... ಎಷ್ಟೋ ಜನ ಹೇಗಿರ್ತಾರೆ ಅಂತೀಯಾ ? ಕಾರು ಗೀರು

ಓಡಿಸ್ಕೊಂಡು ಜುಂ ಅಂತ ಇರ್ತಾರೆ...."

"ಹಾಗಂತೀಯ ? ನನಗೆ ಬಿಸಿನೆಸ್‌ನ ಗಂಧವೇ ಗೊತ್ತಿಲ್ಲವಲ್ಲೋ"

"ನನ್ನ ಪರಿಚಯದವರು ಒಂದಿಬ್ಬರು ಇದಾರೆ. ಅವರ ಪರಿಚಯ ಮಾಡಿಸಿ ಕೊಡ್ತೀನಿ. ಮಾತನಾಡಿ ತಿಳಕೋ... ಬೇಕಾದರೆ ಒಂದೆರಡು ವರ್ಷ ಅವರ ಪಾರ್ಟನರ್ ತರಹ ಕೆಲಸ ಮಾಡು. ಕ್ರಮೇಣ ನೀನೇ ಸ್ವಂತ ಶುರು ಮಾಡಬಹುದು."

"ಬಂಡವಾಳಕ್ಕೆ ಏನು ಮಾಡೋದು ?"

"ನಿಮ್ಮ ತಂದೇನ ಕೇಳಿದ್ರೆ ಇಲ್ಲ ಅಂತಾರಾ ?"

"ನಂಗೊತ್ತಿಲ್ಲಪ್ಪ ನಮ್ಮ ತಂದೆ ಏನಂತಾರೆ ಅಂತ... ನನ್ನ ತಂಗಿ ಮದುವೆ ಬಗ್ಗೆ ಅವರಿಗೆ ಚಿಂತೆ."

"ಮಗಳ ಮದುವೆ ಹೇಗೆ ಮುಖ್ಯಾನೋ ... ಹಾಗೇ ಮಗನ ಉದ್ಯೋಗವೂ ಮುಖ್ಯ... ಅವರು ಖಂಡಿತಾ ಸಹಾಯ ಮಾಡ್ತಾರೆ."

"ಅವರಿಗೆ, ನಾನು ಬಿ ಎಸ್ಸಿ ಬಿಟ್ಟು ಬಿ.ಇ.ಗೆ ಸೇರಿದಾಗ ನನ್ನ ಮೇಲೆ ಅಸಮಾಧಾನವಿತ್ತು., ನಾನೇ ಕೈಯಾರೆ ಎಲ್ಲಾ ಹಾಳು ಮಾಡಿಕೊಳ್ತಿದೀನಿ ಅನ್ನೋಥರ ಮಾತನ್ನಾಡಿದ್ದರು."

"ಅದನ್ನೆಲ್ಲಾ ಮರೆತು ಬಿಡು. ಅವರಿಗೆ ತಾನೇ ಎಲ್ಲಾ ಎಲ್ಲಿ ನೆನಪಿನಲ್ಲಿರುತ್ತೋ.... ಈಗಲಿಂದ ಯಾಕೆ ಚಿಂತೆ ? ಮೊದಲು ರಿಸಲ್ಟ್ ಬರಲಿ... ಕೆಲಸಕ್ಕೆ ಪ್ರಯತ್ನ ಪಡು. ಈ ಬಿಸಿನೆಸ್ ವಿಷಯ ಈಗ ಬೇಡವೇ ಬೇಡ."

"ಈಗ ನೀನೇ ಅದರ ಆಸೆ ಹುಟ್ಟಿಸಿದೋನು..."

"ಒಂದು ಸಲಹೆ ಕೊಟ್ಟೆ ಅಷ್ಟೆ. ನಿರ್ಧಾರ ನಿನ್ನದು. ಯಾಕೆ ಅಷ್ಟು ಬೇಗ ಅಪ್ಸೆಟ್ ಆಗ್ತೀಯ"

"ಏನೋ ಗೊತ್ತಿಲ್ಲ. ಈ ನಡುವೆ ಏನೇನೋ ಬೇರೆ ಬೇರೆ ಆಲೋಚನೆಗಳೂ ಬರುತ್ವೆ... ನಿನಗೆ ಯಾರಾದ್ರೂ ಗರ್ಲ್‌ಫ್ರೆಂಡ್ ಇದಾರಾ ? "ಇದ್ದಕ್ಕಿದ್ದಂತೆ ಕೇಳಿದಾಗ, ಆ ಸ್ನೇಹಿತ ಪಕ ಪಕನೆ ನಕ್ಕ.

"ಇಲ್ಲಪ್ಪಾ , ನನಗೆ ಯಾವ ಗರ್ಲ್‌ಫ್ರೆಂಡ್ ಇಲ್ಲ, ಅಂಥಾದ್ದನ್ನೆಲ್ಲ ಕನಸ್ನಲ್ಲೂ ಯೋಚಿಸುವುದಿಲ್ಲ ನಾನು. ನಿನಗೆ ಯಾರಾದ್ರೂ ಬೇಕೂಂತ ಅನ್ನಿಸುತ್ತೇನೋ ಬೇಕೂಫ."

"ಕೆಲವು ದಿನಗಳ ಹಿಂದೆ ನಾನು ಒಂದು ಹುಡುಗಿಯನ್ನು ನೋಡಿದೆ. ಆಗಿನಿಂದ ನನ್ನ ಮನಸ್ಸಿನಲ್ಲಿ ಏನೇನೋ ಭಾವನೆಗಳು ಬರುತ್ತವೆ. ಅದು ಸರಿಯೋ ತಪ್ಪೋ ತಿಳಿಯದು. ಆದರೆ ಮನಸ್ಸು ಮಾತ್ರ ಅವಳ ಹಿಂದೆ ಮುಂದೇನೇ ಸುತ್ತುತ್ತೆ. "

"ಯಾರೋ ಆ ರಂಭೆ ? "

"ರಂಭೆ, ಊರ್ವಶಿಯರು ಹೇಗಿದ್ದರೋ ನನಗೆ ತಿಳಿಯದು. ಆದರೆ ಅವಳ ದುಂಡಗಿನ ಕೆನ್ನೆಯನ್ನು ನೋಡಿದರೆ....."

"ಏನೋ... ಕಚ್ಚಬೇಕೂಂತ ಅನ್ನಿಸುತ್ತಾ ...? " ಗೇಲಿಮಾಡಿದ.

''ಥೂ ಹಲ್ಕಾ...ಆ ಹುಡುಗಿ ಬಗ್ಗೆ ನಿನಗ್ಯಾಕೆ ಕೆಟ್ಟ ಬುದ್ಧಿ? '' ಸ್ನೇಹಿತನ ಕಡೆ ಗಂಭೀರವಾಗಿ ನೋಡಿದ.

''ಆ ಕೆನ್ನೆಗಳೇ ಸಾಕು. ಯಾವ ದೇವಲೋಕದ ಅಪ್ಸರೆಯೂ ಅವಳ ಮುಂದೆ ಸುಂದರಿಯರಲ್ಲ...''

''ಅಪ್ರತಿಮ ಸುಂದರಿ ಅನ್ನು ನಿನ್ನ ಗರ್ಲ್‌ಫ್ರೆಂಡ್ .... ಹುಂ''

''ಅವಳಿನ್ನು ಫ್ರೆಂಡ್ ಆಗಿಲ್ಲ. ಅದೇ ಪ್ರಾಬ್ಲಂ...''

''ಪ್ರಾಬ್ಲಂನೆಲ್ಲಾ ಫ್ರೆಂಡ್ ಮಾಡ್ಕೋಬಾರದು ಚಂದ್ರ. ಮೊದಲು ಸೆಟ್ಲ್ ಆಗು. ಆಮೇಲೆ ಮದುವೆಯಾಗು. ಎಲ್ಲಾ ಸರಿಹೋಗುತ್ತೆ.''

''ಇರಬಹುದು. ನಿನಗೆ ಯಾವಾಗ ಮದುವೆ ? ''

''ಸನಗೆ ಇಬ್ಬರು ತಂಗಿಯರಿದಾರೆ. ಅವರಿಬ್ಬರಿಗೂ ಮದುವೆಯಾದ ನಂತರ ನನ್ನ ಮದುವೆ...''

''ನಮ್ಮ ಮನೇಲೂ ಅಷ್ಟೇ. ನನ್ನ ತಂಗಿಗೆ ಮದುವೆಯಾಗಬೇಕು. ಇಲ್ಲೇ ನಮ್ಮ ಚಿಕ್ಕಪ್ಪ ಇದಾರೆ. ಅವರ ಮನೆಗೆ ಹೋದರೆ, ಯಾವುದಾದರೂ ಗಂಡುಗಳನ್ನು ಹೇಳಬಹುದು ಅಂತ ಅಮ್ಮ ಹೇಳಿದ್ಲು. ಅಲ್ಲಿಗೆ ಬೇರೆ ಹೋಗಬೇಕು. ''

''ಹಾಗಾದ್ರೆ ಯಾವಾಗ ಹೋಗ್ತೀಯ ? '' ತಕ್ಷಣವೇ ಕೇಳಿದ.

''ಏನೋ ಹೋಗು ಅಂತ ಸೂಚನೆ ಕೊಡ್ತೀದೀಯ....''

''ಹಾಗೇನಿಲ್ಲ ಚಂದ್ರ. ಪ್ಲೀಸ್ ತಪ್ಪು ತಿಳಕೋಬೇಡ. ನಮ್ಮಮನೆ ಹೇಗಿದೆ ಅಂತ ನೀನೇ ನೋಡಿದೆಯಲ್ಲ. ಇಷ್ಟರಲ್ಲೇ ನಮ್ಮ ಸಂಸಾರ... ನನ್ನ ತಂಗಿಯರೂ ಚಿಕ್ಕವರಲ್ಲ. ಅವರಿಗೂ ಸಂಕೋಚವಾಗುತ್ತೆ... ಎಷ್ಟಾಗಲೀ ನೀನು ಸ್ನೇಹಿತ. ನಿನಗೂ ಮುಜುಗರವಾಗಬಹುದು. ''

''ಆಗ್ಲಿ ಬಿಡಯ್ಯ, ಸೂಚ್ಯವಾಗಿ ಏನನ್ನು ಹೇಳಬೇಕೋ ಅದನ್ನು ಹೇಳಾಯ್ತು. ನಾನು ನಾಳೇನೇ ಏನಾದ್ರೂ ವ್ಯವಸ್ಥೆ ಮಾಡಿಕೊಳ್ತೀನಿ. ಇವತ್ತಿನ ಲಾಡ್ಜಿಂಗ್, ಬೋರ್ಡಿಂಗ್‌ಗೆ ಥ್ಯಾಂಕ್ಯಯೂ....''

'' ಪ್ಲೀಸ್ ಚಂದ್ರಾ.... ಮಿಸ್ಟೇಕ್ ಮಾಡ್ಕೋಬೇಡ... ಮೇಲೆ ಒಂದು ಪ್ರತ್ಯೇಕ ರೂಮು ಇದ್ದಿದ್ರೆ, ಖಂಡಿತಾ ನಿನಗೆ ಇಲ್ಲೇ ಇರುವಂತೆ ಬಲವಂತ ಮಾಡ್ತಿದ್ದೆ ... ''ಆದರೆ ಅವನ ಮಾತಿನ ಮೇಲೆ ಗಮನವಿರಲಿಲ್ಲ. ಸ್ನೇಹಿತ ಸಮಯಕ್ಕೆ ಸರಿಯಾಗಿ ಕೈಕೊಟ್ಟ, ನನಗೆ ನಂಬಿಕೆಯೇ ಹೊರಟು ಹೋಯ್ತು ಎಂದುಕೊಂಡು ಸುಮ್ಮನಾದ. ರಾತ್ರಿಯ ಊಟ ಅವನಿಗೆ ರುಚಿಸಲಿಲ್ಲ. ಸ್ನೇಹಿತನ ತಾಯಿ ಆದರದಿಂದ ಮಾತನಾಡಿಸಿ, ಉಪಚಾರ ಮಾಡಿ ಬಡಿಸಿದರೂ, ಅದರಲ್ಲಿ ಕೃತಕತೆ ಇದೆ ಎನಿಸಿತ್ತು. ತಂಗಿಯರು ಎದುರಿಗೇ ಓಡಾಡಿಕೊಂಡಿದ್ದರೂ, ಅವರುಗಳ ಕಡೆ ನೋಡುವ ಮನಸ್ಸಾಗಲಿಲ್ಲ. ರಾತ್ರಿ ಕಳೆದು, ಬೆಳಿಗ್ಗೆ ಯಾವಾಗ ಆದೀತೆಂದು ಚಡಪಡಿಸಿದ. ಸ್ನೇಹಿತ ರವಿಗೂ ಪಿಚ್ಚೆನಿಸಿತ್ತು.

ಬೆಳಿಗ್ಗೆ ಅವನು ಆಫೀಸಿಗೆ ಹೊರಡುವ ವೇಳೆಗೆ ಇವನೂ ಸಿದ್ಧನಾದ. ಇಬ್ಬರೂ ಒಟ್ಟಿಗೆ ಮನೆಯಿಂದ ಹೊರಟರು. ದಾರಿಯಲ್ಲಿ ರವಿ ಸ್ನೇಹಿತನ ಕೈ ಹಿಡಿದು ಹೇಳಿದ.

''ಸ್ಸಾರಿ ಕಣೋ... ನನ್ನ ಮಾತಿನಿಂದ ನಿನಗೆ ತೊಂದರೆಯಾಗಿರಬಹುದು. ನಾನು ನಿಸ್ಸಹಾಯಕ. ಎರಡು ತಿಂಗಳ ಹಿಂದೆ, ನನ್ನ ಕಲೀಗ್ ಒಬ್ಬ ಕೇವಲ ಎರಡು ದಿನಗಳಿಗೋಸ್ಕರ ನಮ್ಮ ಮನೆಯಲ್ಲಿದ್ದ. ಆ ನಂತರ ನನ್ನತಂಗಿ ಅವನ ಸ್ನೇಹ ಮಾಡಿ, ಅವನ ಮಾತಿಗೆ ಮರುಳಾಗಿ ಅವನೊಂದಿಗೆ ಓಡಿ ಹೊರಟು ಹೋಗಿದ್ದಳು. ಪೋಲೀಸ್ ಕಂಪ್ಲೆಂಟ್ ಕೊಟ್ಟು ಹುಡುಕಿಸಿ ಮನೆಗೆ ವಾಪಸ್ಸು ಕರೆತಂದೆವು. ಈಗ ನನಗೆ ಯಾರ ಮೇಲೂ ವಿಶ್ವಾಸವೇ ಇಲ್ಲ. '' ಅವನ ಕಣ್ಣುಗಳು ನೀರಾಡಿದ್ದವು. ಇವನಿಗೂ ಕೆಡುಕೆನಿಸಿತು ''ನನಗೂ ಹಾಗೇ ನಂಬಿಕೆಯೇ ಹೊರಟು ಹೋಗಿದೆ'' ಎಂದು ಹೇಳಬೇಕೆಂದುಕೊಂಡವನು ಸುಮ್ಮನಾದ. ಸ್ನೇಹಿತನ ಕೈ ಕುಲುಕಿ, ಮತ್ತೊಮ್ಮೆ ಥ್ಯಾಂಕ್ಸ್ ಹೇಳಿ ಬಸ್ ಹತ್ತಿದ. ಮನಸ್ಸು ಕಲಕಿ ಹೋಗಿತ್ತು. ಊರಿಗೆ ವಾಪಸ್ಸು ಹೊರಟು ಹೋಗಲೇ ಎಂದು ಚಿಂತಿಸಿದ. ಚಿಕ್ಕಪ್ಪನ ಮನೆಗೆ ಹೋಗಿ ಮುಖ ತೋರಿಸಿ ಬರುವುದು ಒಳ್ಳೆಯದು ಎಂದುಕೊಂಡ.

ಚಿಕ್ಕಪ್ಪ ಚಿಕ್ಕಮ್ಮ ಅವನನ್ನು ಸಂತೋಷದಿಂದ ಬರಮಾಡಿಕೊಂಡರು. ಇವನಿಗೆ ಆಶ್ಚರ್ಯ. ಅಮ್ಮ ಹೇಳಿದ್ದು ನಿಜ... ಈಗ ದೊಡ್ಡವನಾಗಿದೀನಿ. ಅಲ್ಲದೇ ಇಂಜಿನಿಯರ್ ಆಗಲಿರುವವನು. ಚಿಕ್ಕಪ್ಪನಿಗೂ ಅರಿವಾಗಿರಬೇಕು ಎಂದುಕೊಂಡು ನಗುನಗುತ್ತಾ ಎಲ್ಲರೊಡನೆ ಮಾತನಾಡಿದ. ಮನ ಸ್ವಲ್ಪ ತಿಳಿಯಾಗಿತ್ತು. ಮನೆಯವರೇ ಆಪ್ತರು. ಸ್ನೇಹಿತರು ಹೊರಗಿನವರೇ ಎಂಬ ನಿರ್ಧಾರಕ್ಕೆ ಬಂದ.

ಚಿಕ್ಕಪ್ಪನೊಡನೆ ಮನೆಯ ವಿಷಯಗಳನೆಲ್ಲಾ ಮಾತನಾಡಿ ತಾಯಿ ತಿಳಿಸಿದುದನ್ನು ತಿಳಿಸಿದ.

''ಮೊದಲು ಚಿಂಪಿಯ ಡಿಗ್ರಿ ಮುಗಿಯಲಿ. ಡಿಗ್ರಿ ಆಗಿರೋ ಕೆಲಸದಲ್ಲಿರುವ ಹುಡುಗೀರ ಮದುವೆ ಸುಲಭವಾಗಿ ಆಗುತ್ತೆ... ಇಲ್ಲದಿದ್ರೆ ನಿನಗೊಂದು ಕೆಲಸ ಆದಷ್ಟು ಬೇಗ ಸಿಕ್ಕಿಬಿಟ್ರೆ ನೋಡು... ನಿನ್ನ ತಂಗಿಯ ಮದುವೆ ಸುಲಭವಾಗಿ ನಡೆದು ಹೋಗುತ್ತೆ.''

''ಅದ್ಹೇಗೆ ಚಿಕ್ಕಪ್ಪಾ... ನಾನೇನು ವರದಕ್ಷಿಣೆ ಕೊಡ್ತೀನಾ ? ''

''ವರದಕ್ಷಿಣೆ ಮಾತನ್ನೆಲ್ಲಿ ಹೇಳಿದೆ ನಾನು ? ನೀನು ಒಬ್ಬ ವರ ಇದೀಯಾಂತ ತಿಳಿದ್ರೆ, ಕೊಟ್ಟು ತಂದುಕೊಳ್ಳೋರೂ ಇರ್ತಾರೆ. ಅಂತಹ ಸಂಬಂಧಗಳು ಸಿಕ್ಕರೆ ಸುಲಭದಲ್ಲಿ ಮದುವೆ ಆಗುತ್ತೆ...''

ಸ್ವಲ್ಪ ತಡವಾಗಿ ಚಿಕ್ಕಪ್ಪನ ಇಂಗಿತ ಅರ್ಥವಾಯ್ತು. ಆ ಮಾತುಗಳು ರುಚಿಸಲಿಲ್ಲ. ತಂಗಿಗೋಸ್ಕರ ತಾನೇಕೆ ತ್ಯಾಗ ಮಾಡಬೇಕು ? ನನಗೋಸ್ಕರ ಅವಳೇನು ಮಾಡಿದಾಳೆ ? ನನ್ನ ಮದುವೆಗೆ ಇಂತಹ ನಿಬಂಧನೆಗಳು ಇರಲೇಬಾರದು. ನನಗೆ ಇಷ್ಟವಾದವಳನ್ನು ಮಾತ್ರ ನಾನು ಮದುವೆಯಾಗಬೇಕು. ನನಗೆ ಇಷ್ಟವಾಗುವವಳು ಹೇಗಿರಬೇಕು ? ಧುತ್ತೆಂದು ಅವನ ಮನದ ಪಟಲದ ಬಂದು ನಿಂತಳು ಪೂರ್ಣಿಮಾ.

ಪೂರ್ಣಿಮಾ.... ಮತ್ತೆಂದಾದರೂ ಅವಳು ಸಿಗಬೇಕು. ಹೇಗೆ ? ಸೀದಾ ಅವಳ ಮನೆಗೆ ಹೋಗುವಂತಿಲ್ಲ. ಅವಳು ಬಾಯಿ ಮಾತಿಗಾದರೂ ಬನ್ನಿ ಎಂದು ಕರೆಯದಿದ್ದರೆ, ತಾನಾಗಿಯೇ ಹೋಗುವುದಾದರೂ ಹೇಗೆ ? ಅವಳು ಮತ್ತೆ ಎಂದು ಅಜ್ಜಿ ಮನೆಗೆ ಹೋಗಬಹುದು ? ಅದು ತಿಳಿಯುವುದಾದರೂ ಹೇಗೆ ?

ಒಂದೆರಡು ದಿನಗಳು ಕಳೆದವು. ಬೆಂಗಳೂರು ಬೇಸರವಾಗತೊಡಗಿತು. ಸ್ನೇಹಿತರನ್ನು ಹುಡುಕಿಕೊಂಡು ಹೋಗಿ ಮಾತನಾಡಲು ಬೇಡವೆನಿಸಿತ್ತು. ಚಿಕ್ಕಪ್ಪನ ಮಕ್ಕಳು ಸ್ಕೂಲು ಕಾಲೇಜಿಗೆ ಹೊರಟು ಹೋಗಿರುತ್ತಿದ್ದರು. ಅಲ್ಲದೇ ಇಬ್ಬರೂ ಹುಡುಗಿಯರೇ.

''ನೀನು ಯಾವ ಕಾಲೇಜಿಗೆ ಹೋಗ್ತೀಯ ? '' ಏನಾದರೂ ಕೇಳಬೇಕು ಎಂಬಂತೆ ಕೇಳಿದ್ದ.

''ಬಿ.ಎಂ.ಎಸ್ ಕಾಲೇಜ್...''

''ದೂರ ಅಲ್ವಾ ?....''

''ಎಷ್ಟೆಷ್ಟೋ ದೂರದಿಂದ ಬರ್ತಾರೆ ಗೊತ್ತಾ ?... ಎರಡೆರಡು ಬಸ್ಸು ಹಿಡಿದು ಬರ್ತಾರೆ.''

''ರಾಜಾಜಿನಗರದಿಂದ ಬರ್ತಾರಾ ? ''

''ಬರ್ತಾರೆ... ನಿನ್ನ ಪರಿಚಯದವರು ಯಾರಾದ್ರೂ ಇದಾರಾ ? ...''

''ಸುಮ್ಮನೇ ಕೇಳಿದೆ....''

''ಚಂದ್ರಣ್ಣ ಸುಮ್ಮನೇ ಯಾಕೆ ಕೇಳ್ತೀಯ ? ನಮ್ಮದು ಹುಡುಗಿಯರ ಕಾಲೇಜು... ನಿನ್ನ ಫ್ರೆಂಡು ಹುಡುಗೀನೋ, ಹುಡುಗನೋ ? '' ಛೇಡಿಸಿದ್ದರು.

''ಹುಡುಗನಾದ್ರೆ ನಮ್ಮ ಕಾಲೇಜಿಗೆ ಬರಲ್ಲ, ಹುಡುಗಿಯಾದರೆ, ಯಾವ ಕ್ಲಾಸು, ಸೆಕ್ಷನ್, ಹೆಸರೇನು ? ಹೇಗಿದಾಳೆ ಅಂತ ತಿಳಿದ್ರೆ ಕಂಡುಹಿಡಿಯಬಹುದು.''

''ಹೆಸರು ಪೂರ್ಣಿಮಾ, ನೋಡೋಕೆ ದುಂಡು ದುಂಡಗೆ, ಚೆನ್ನಾಗಿದಾಳೆ ಅಷ್ಟೇ ನನಗೆ ಗೊತ್ತಿರೋದು. ''

''ಪೂರ್ಣಿಮಾ ಅನ್ನೋ ಹೆಸರ್ನೋರು ಎಷ್ಟೋ ಜನ ಹುಡುಗಿಯರು ಇರ್ತಾರೆ. ಪೂರ್ಣಿಮಾ ಅಂತ ಹೆಸರಿಟ್ಟುಕೊಂಡ ಮೇಲೆ ದುಂಡಗೆ ಚೆನ್ನಾಗಿರಲೇ ಬೇಕು ಅಲ್ವಾ? ಇಲ್ಲದಿದ್ರೆ ಚಂದ್ರಂಗೇ ಅವಮಾನ....''

''ನಂಗ್ಯಾಕೆ ಅವಮಾನ ?''

''ಓ.... ನಿಂಗಲ್ಲ ಹೇಳಿದ್ದು, ಆಕಾಶದ ಚಂದ್ರಂಗೆ... '' ಇಬ್ಬರೂ ಕಿಸಕ್ಕನೇ ನಕ್ಕಾಗ, ಇವನಿಗೆ ಅವಮಾನವಾದಂತಾಗಿತ್ತು. ಎಲ್ಲಿ ಮಾತಾಡಿದರೂ ತಾನೇ ಬೇಸ್ತು ಬೀಳ್ತೀನಲ್ಲ. ತನಗೇ ಯಾಕೆ ಹೀಗೆ ? ತಾನೂ ಸುಮ್ಮನೆ ನಕ್ಕಂತೆ ಮಾಡಿದ. ಮತ್ತೆ ಮಾತನಾಡಿಸಿರಲಿಲ್ಲ.

''ಒಂದಿಬ್ಬರು ಬ್ರೋಕರ್‌ಗಳಿಗೆ ಹೇಳಿ, ಜಾತಕ, ಫೋಟೋ ಕೊಟ್ಟರೆ, ಸರಿಯಾದ, ಬೇಕಾದ ಗಂಡು ಹುಡುಕಿ ಕೊಡ್ತಾರೆ....ನೀನು ಊರಿಗೆ ಹೋದ ಕೂಡಲೇ ಜಾತಕ ಫೋಟೋ ಕಳಿಸಿಕೊಡು'' ಚಿಕ್ಕಮ್ಮ ನುಡಿದಾಗ ಅವರನ್ನೇ ನೋಡಿದ ಈ ಚಿಕ್ಕಪ್ಪನ ಮನೆಯಲ್ಲೂ ತಾನು ಹೆಚ್ಚು ದಿನ ಇರುವಂತಿಲ್ಲ. ಆಗಲೇ ಹೋಗುವ ಯೋಚನೆ ಬರುತ್ತಿದೆ ಎಂದುಕೊಂಡ.

  

ಊರಿಗೆ ವಾಪಸ್ಸು ಬಂದು ನಾಲ್ಕಾರು ದಿನಗಳು ಕಳೆದಿದ್ದವು. ರಿಸಲ್ಟ್ ಇನ್ನು ಬಂದಿರಲಿಲ್ಲ. ತಂಗಿಯ ಎರಡನೇ ವರ್ಷದ ಬಿ.ಎ. ಪರೀಕ್ಷೆ ಮುಗಿದಿತ್ತು. ತಾಯಿ ಬೆದಕಿ ಕೆದಕಿ ಕೇಳಿದಾಗ ಮಾತ್ರ ಊರಿನ ವಿಚಾರವನ್ನು ಹೇಳಿದ್ದ. ತಂಗಿ ಹಂಗಿಸಿದ್ದಳು.

''ಅವನ್ನೇನಮ್ಮ ಒತ್ತಿ ಒತ್ತಿ ಕೇಳ್ತೀಯ ? ಒಳ್ಳೆ ಮನೆಗೆ ಬಂದಿರೋ ನೆಂಟನ ಥರ' ಆಡ್ತಾನೆ. ಹೇಳಕ್ಕೆ ಇಷ್ಟವಿಲ್ಲವೋ ಏನೋ, ನೀನ್ಯಾಕೆ ಬಲವಂತ ಮಾಡ್ತೀಯ ?''

''ನೀನು ಸುಮ್ಮನಿರೇ, ತಲೆಯೆಲ್ಲಾ ಮಾತಾಡ್ಬೇಡ. ಬೆಂಗಳೂರಿಗೆ ನಾನು ಹೋದದ್ದು ನನ್ನ ಕೆಲಸ ಹುಡುಕೋಕೆ. ನಿನಗೆ ಗಂಡನ್ನು ಹುಡುಕುವುದಕ್ಕಲ್ಲ.''

''ಕೆಲಸ ಸಿಗ್ತಾ? ಅದನ್ನಾದ್ರೂ ಹೇಳಬಹುದಾಗಿತ್ತಲ್ಲ.''

''ಕೆಲಸ ಸಿಕ್ಕಿದ ಕೂಡಲೇ ಮೊದಲು ನಿನಗೇ ಹೇಳ್ತೀನಿ... ಊರ ತುಂಬಾ ಸಿಹಿ ಹಂಚಿಕೊಂಡು ಬರೂವಂತೆ....''

''ಖಂಡಿತಾ ಹಂಚಿಕೊಂಡು ಬರ್ತೀನಿ. ಎಲ್ಲರಿಗಿಂತ ಹೆಚ್ಚಿನ ಖುಷಿ ಯಾಗೋದು ನನಗೆ. ಯಾಕೆ ಗೊತ್ತಾ? ''

''ಗೊತ್ತು... ನಾನು ಬೇರೆ ಎಲ್ಲಿಗಾದ್ರೂ ಹೋದರೆ ಸಾಕು ಅಂತ ಕಾಯ್ತಾ ಇರ್ತೀಯಾ. ನಾನು ಮನಸ್ಸು ಮಾಡಿದರೆ ಇಲ್ಲೇ ಇರ್ತೀನಿ. ನೀನೇ... ನೀನೇ ಈ ಮನೆಯಿಂದ ಆದಷ್ಟು ಬೇಗ ಹೊರಗೆ ಹೋಗೋಳು...''

''ಚಂದ್ರ ಸಾಕು ಮಾಡೋ... ಅವಳು ನಿನಗಿಂತ ಚಿಕ್ಕೋಳು. ಸುಮ್ಮನಿರ ಬಾರದಾ?''

''ಚಿಕ್ಕೋಳಾದ್ರೆ, ಚಿಕ್ಕೋಳ ತರಹ ಇರಬೇಕು. ದೊಡ್ಡೋರ ಮಾತಿಗೆ ಬಾಯಿ ಹಾಕಿಕೊಂಡು ಬರಬಾರದು. ''

''ಮಹಾ ದೊಡ್ಡೋನು ? ನಿನ್ನ ದೊಡ್ಡತನ ಏನೂಂತ ನನಗೂ ಗೊತ್ತು.''

''ಏನೇ ಗೊತ್ತು ನಿನಗೆ ? '' ಎನ್ನುತ್ತಾ ಅವಳ ಕೆನ್ನೆಗೆ ಹೊಡೆಯಲೆಂದು ಕೈ ಎತ್ತಿದವನನ್ನು ತಾಯಿ ತಡೆದಳು.

''ಏನು ನಿನ್ನ ತಲೆ ಕೆಟ್ಟಿದೆಯಾ ಹೇಗೆ ? ಅವಳು ನಿನ್ನ ತಂಗಿ ಕಣೋ. ಹೆಣ್ಣು ಹುಡುಗೀರ ಮೇಲೆ ಕೈ ಎತ್ತಬಾರದು...ಇನ್ನು ಎಷ್ಟು ದಿನ ಇರ್ತಾಳೆ ಈ ಮನೇಲಿ... ಒಡಹುಟ್ಟಿದವಳ ಜತೆಯೇ ಸರಿ ಹೋಗಲ್ಲ ನಿನಗೆ.... ಇನ್ನು ಕಟ್ಟಿಕೊಂಡವಳನ್ನ ಹೇಗೆ ಬಾಳಿಸ್ತೀಯೋ ... ''

''ಅದು ನನ್ನ ಹಣೆಬರಹ'' ಎಂದು ಸಿಡಿದು ನುಡಿದು ಅಲ್ಲಿಂದ ಎದ್ದು ಹೋಗಿದ್ದ. ತಂಗಿ ಸೊರ ಸೊರ ಅತ್ತಿದ್ದಳು.

''ಅಳಬೇಡ ನಿಲ್ಸೆ ಸಾಕು. ಅವನಿಗೂ ಏನೋ ಬೇಜಾರು. ಅವನ ವಯಸ್ಸೋರೆಲ್ಲ ಕೆಲಸಕ್ಕೆ ಸೇರಿಕೊಂಡು ಎರಡು ವರ್ಷಗಳಾಗಿವೆ. ಅವನಿಗೂ ಕೆಲಸದ್ದೇ ಚಿಂತೆ ಆಗಿರುತ್ತೆ. ನೀನೂ ಮಾತು ಮಾತಿಗೂ ರೇಗಿಸ್ತೀಯ ಅವನನ್ನ.''

''ಸುಮ್ಮನಿರಮ್ಮ ನೀನು... ಅವನ ಓದಿಗೆ, ಕೆಲಸಕ್ಕೆ ನಾನು ಹೊಣೆಯಲ್ಲ, ನನ್ನ

ಸ್ನೇಹಿತೆಯರ ಅಣ್ಣಂದಿರು ಹೀಗಿಲ್ಲಪ್ಪಾ. ಅಕ್ಕ ತಂಗಿಯರನ್ನು ಪ್ರೀತಿಯಿಂದ ಹೇಗೆ ನೋಡಿಕೊಳ್ತಾರೆ ಗೊತ್ತಾ ? ''

''ಹೀಗೆ ಎಷ್ಟು ದಿನ ಜಗಳ ಆಡ್ತೀರಿ ? ನಿನ್ನ ಮದುವೆಯಾಗಿ ಹೋದಮೇಲೆ ನೀನಿಲ್ಲದೇ ಈ ಮನೆ ಅವನಿಗೂ ಬಿಕೋ ಬಿಕೋ ಅಂತ ಅನ್ನಿಸುತ್ತೆ. ದಿನಾ ನಿನ್ನನ್ನು ನೆನಪಿಸಿಕೊಳ್ತಾನೆ ಬಿಡು.''

''ಅವನು ನೆನಪಿಸಿಕೊಂಡರೆಷ್ಟು ಬಿಟ್ಟರೆಷ್ಟು ? ನಾನಂತೂ ಅವನನ್ನು ಖಂಡಿತಾ ನೆನಪಿಸಿಕೊಳ್ಳಲ್ಲ. ಅವನಿಂದ ದೂರ ಹೋದರೆ ಸಾಕು ಎನಿಸಿದೆ.''

''ಈಗ ಹಾಗೆ ಹೇಳ್ತೀಯ ಅಷ್ಟೇ. ಆಮೇಲೆ ಒಂದು ದಿನ ತವರು ಮನೆಗೆ ಬರಬೇಕಾದರೂ, ಅತ್ತೆ ಮನೆಯವರ ಮರ್ಜಿ ಅನುಸರಿಸಬೇಕಾಗುತ್ತೆ. ಅದಕ್ಕೆ ಹೇಳೋದು ಅನೂತನವಾಗಿರಿ, ಸಿಹಿ ನೆನಪುಗಳನ್ನು ಉಳಿಸಿಕೊಳ್ಳಿ ಅಂತ...''

''ಸಿಹಿ ನೆನಪಿಗೆ ಅವಕಾಶ ಎಲ್ಲಿದೆ ಈ ಮನೇಲಿ. ಅವನಂತೂ ಜಗಳಗಂಟ... ನಿನ್ನ ಉಪದೇಶವಂತೂ ಮುಗಿಯೋದೇ ಇಲ್ಲ'' ಗೊಣಗುತ್ತಾ ಚಿಂಪಿ, ಹೊರಬಾಗಿಲಿಗೆ ಬಂದು ನಿಂತಳು.

ತಾಯಿಯ ಮನಸ್ಸು ಕದಡಿ ಹೋಗಿತ್ತು. ಇರೋರು ಇಬ್ಬರು. ಚಿಕ್ಕ ವಯಸ್ಸಿನಲ್ಲಿ ಆಟದ ಸಾಮಾನುಗಳಿಗೆ ಜಗಳ ಕಿತ್ತಾಟ ಮುಗೀತಾನೇ ಇರಲಿಲ್ಲ. ಈಗ ನೋಡಿದರೆ ಹೀಗೆ ಯಾರಿಗೆ ತಿಳುವಳಿಕೆ ಹೇಳಲಿ ! ನನಗೆ ಇಬ್ಬರೂ ಒಂದೇ. ಆದರೆ ಇಬ್ಬರಿಗೂ ಅದು ಅರ್ಥವಾಗುವುದಿಲ್ಲ. ಈ ಮನೆಗೆ ಅಳಿಯನೋ, ಸೊಸೆಯೋ ಆದಷ್ಟು ಬೇಗ ಬರಬೇಕು. ಆಗ ಈಮನೆಯ ವಾತಾವರಣ ಸ್ವಲ್ಪ ಮಟ್ಟಿಗೆ ಬದಲಾಗಬಹುದು.

  

ರಿಸಲ್ಟ್‌ಗಳು ಹೊರಬಿದ್ದಿದ್ದವು. ಚಿಂಪಿ ಎರಡನೇ ವರ್ಷದ ಬಿ.ಎ. ಪಾಸಾಗಿದ್ದಳು. ಚಂದ್ರ ಕಡೇ ವರ್ಷದ ಇಂಜಿನಿಯರಿಂಗ್‌ನಲ್ಲಿ ಸೆಕೆಂಡ್ ಕ್ಲಾಸ್‌ನಲ್ಲಿ ಪಾಸಾಗಿದ್ದ. ಅದು ಅವನಿಗೆ ನಿರಾಸೆಯನ್ನುಂಟು ಮಾಡಿತ್ತು. ಎಲ್ಲಾ ಸಮಿಸ್ಟರ್‌ಗಳಲ್ಲೂ ಫಸ್ಟ್ ಕ್ಲಾಸ್‌ನಲ್ಲಿ ಪಾಸಾಗಿದ್ದ. ಕಡೇ ವರ್ಷದ ರಿಸಲ್ಟ್ ಹೀಗಾಗೋಕೆ ಕಾರಣವೇನು? ಜ್ವರವೇ ? ಪೂರ್ಣಿಮಾಳೆ ? ಬಹುಶಃ ಎರಡೂ ಕಾರಣ. ಮನೆಯವರ್‍ಯಾರಿಗೂ ಈ ವಿಷಯ ತಿಳಿಯಲೇಬಾರದು ತಂಗಿ ಹಂಗಿಸದೇ ಬಿಡುವುದಿಲ್ಲ ಎಂದುಕೊಂಡಿದ್ದ.

ಚಂಪಕ ಪಾಸಾದಳೆಂದು ತಾಯಿ ಸಿಹಿ ಅಡಿಗೆ ಮಾಡಿದ್ದಳು. ಜೊತೆಗೆ ಒಂದು ಸಿಹಿ ಸುದ್ದಿಯನ್ನು ಅರುಹಿದಳು.

''ಪಕ್ಕದ ಮನೆ ಅಜ್ಜಿಯ ಮೊಮ್ಮಗಳು ಪೂರ್ಣಿಮಾ ಅಂತ ಇದೆಯಲ್ಲ... ಆ ಹುಡುಗಿ ಇಲ್ಲಿಯೇ ಕಾಲೇಜಿಗೆ ಸೇರಿಕೊಂಡಿದೆಯಂತೆ.''

''ಷ್, ಮತ್ತೆ ಬಂದಳಾ ಈ ಊರಿಗೆ. ದಿನಾ ಅವಳ ಮುಖವನ್ನು ನೋಡ ಬೇಕಲ್ಲಪ್ಪ...'' ಈ ಸುದ್ದಿ ಚಂದ್ರನಿಗೆ ನಿಜವಾಗಿಯೂ ಸಿಹಿಯಾಗಿತ್ತು. ತಂಗಿಯನ್ನು ರೇಗಿಸಿದ.

''ನೋಡಬೇಡ. ಕಣ್ಣಿಗೆ ಪಟ್ಟಿಯನ್ನು ಕಟ್ಟಿಕೊಂಡು ಓಡಾಡು.''

''ನಿನ್ನನ್ಯಾರು ಕೇಳಿದರು. ಹೋಗೋ.... ''

''ಸರಿ ಏನೇ ಮಾತಾಡಿದ್ರೂ, ನಿಮ್ಮಿಬ್ಬರ ಕಾದಾಟ ಪ್ರಾರಂಭವಾಗುತ್ತೆ. ಹಿಂದಿನ ಜನ್ಮದಲ್ಲಿ ನೀವೇನು ಕೌರವ ಪಾಂಡವರ ಪಕ್ಷಗಳಲ್ಲಿಇದ್ರ ? '' ತಾಯಿ ಮಾತನ್ನು ಬದಲಾಯಿಸುವಂತೆ ಆಡಿದಳು.

''ನಂಗೊತ್ತಿಲ್ಲ. ಇವಳಂತೂ ಗಾಂಧಾರಿ ಆಗಿದ್ದಳು ಅಂತ ಕಾಣುತ್ತೆ''ಅವನು ನಕ್ಕ.

''ನಾನು ಗಾಂಧಾರಿ ಆದರೆ ನೀನು ಶಕುನಿ... ಮೋಸಗಾರ''ಅವಳೂ ತನ್ನ ಪಟ್ಟನ್ನು ಬಿಡಲಿಲ್ಲ.

''ಅಬ್ಬಾ... ನಾನೇನು ತಪ್ಪು ಮಾಡಿದ್ನೋ ... ಶಕುನಿ, ಗಾಂಧಾರಿಯಂತಹ ಮಕ್ಕಳನ್ನು ಹೆತ್ತೆನಲ್ಲಪ್ಪಾ'' ತಾಯಿ ನಗುತ್ತಾ ಅಲವತ್ತುಕ್ಕೊಂಡಳು. ಚಂದ್ರನಿಗೂ ನಗುಬಂತು. ಅವನು ತೆಪ್ಪಗಾದ. ಚಂಪಕ ಮಾತ್ರ ಊಟದ ತಟ್ಟೆಯನ್ನೆತ್ತಿಕೊಂಡು ಎದ್ದು ಹೋದಳು.

''ನೋಡಿದ್ಯಾ ಅರ್ಧ ಊಟಕ್ಕೆ ಎದ್ದು ಹೋದಳು. ಅವಳನ್ಯಾಕೆ ರೇಗಿಸ್ತೀಯಾ ಅಂತ.''

''ನಾನೆಲ್ಲಮ್ಮ ಅವಳನ್ನ ರೇಗಿಸ್ದೇ ? ಅವಳೇ ನನ್ನನ್ನು ರೇಗಿಸಿದ್ದು... ಅವಳು ಸುಮ್ಮನಿದ್ದರೆ ನಾನೂ ಸುಮ್ಮನಿರ್ತೀನಿ. ''

''ಏನಾಗಿದೆ ನಿಮ್ಮಿಬ್ಬರಿಗೂ ಅಂತ ? ನೀನು ಬೆಂಗಳೂರಿಗೆ ಮತ್ತೆ ಯಾವಾಗ ಹೊರಡ್ತೀಯ ? ಕೆಲಸದ್ದು ಏನಾಯ್ತು ? ''

''ನಾನು ಬೇರೆ ಯಾವ ಊರಿಗೂ ಹೋಗಲ್ಲ. ಇಲ್ಲೇ ಯಾವುದಾದರೂ ಕೆಲಸಕ್ಕೆ ಪ್ರಯತ್ನ ಮಾಡ್ತೀನಿ. ಇಲ್ಲದಿದ್ರೆ ಬಿಸಿನೆಸ್ ಮಾಡ್ತೀನಿ. ''

''ಬಿಸಿನೆಸ್ಸಾ ? ಅದೆಲ್ಲಾ ನಮ್ಮಂಥೋರಿಗಲ್ಲ. ನಿಧಾನವಾದರೂ ಪರವಾಗಿಲ್ಲ ಒಂದು ಕಂಪನಿ ಕೆಲಸ ಅಂತ ಇದ್ದರೆ ಅದೇ ಮೇಲು.....'' ನಿನ್ನ ಸ್ನೇಹಿತ ಕೆಲಸ ಕೊಡಿಸ್ತಾನೆ ಅಂತ ಅಂದಿದ್ದೆಯಲ್ಲ? ಏನಾಯ್ತು?

''ಅವನು ಕೊಡಿಸ್ತಾನೆ ಅಂತ ನಾನೆಲ್ಲಿ ಹೇಳ್ದೆ. ಎಲ್ರೂ ಅವರವರ ಲಾಭಾನೇ ಯೋಚಿಸ್ತಾರೆ... ನನಗೆ ಕೆಲಸವೇ ಸಿಗದಿದ್ರೆ ಕೂರಿಸಿ ಅನ್ನ ಹಾಕ್ತಾರಾ ಅಪ್ಪ ?''

''ಛೀ ಹಾಗ್ಯಾಕೆ ಮಾತಾಡ್ತೀಯೋ ... ? ಗಂಡು ಹುಡುಗ ಅಂತಂದ ಮೇಲೆ ವಿದ್ಯಾಭ್ಯಾಸ,ಉದ್ಯೋಗ ಎರಡೂ ಇರಬೇಕು. ತಂದೆ ತಾಯಿಗಳಿಗೆ ಮಕ್ಕಳು ಎಂದೂ ಭಾರವಲ್ಲ. ಆದರೆ ನಿಮ್ಮ ನಿಮ್ಮ ಜವಾಬ್ದಾರಿಯ ಅರಿವು ನಿಮಗೇ ಇರಬೇಕು ತಾನೇ ?''

''ನನಗೂ ಎಲ್ಲಾ ತಿಳಿಯುತ್ತೆ... ಯಾವುದೋ ತಾಪೇದಾರಿ ಕೆಲಸಕ್ಕೆ ಸೇರಿಕೊಂಡು ತಿಂಗಳ ಸಂಬಳದಲ್ಲಿ ಲೆಖ್ಖಾಚಾರವಾಗಿ ಖರ್ಚು ಮಾಡಿ ಉಳಿತಾಯದ ಹಣಾನ ಕೂಡಿ ಹಾಕಿ, ನನ್ನ ಆಸೆಗಳನ್ನೆಲ್ಲಾ ಪೂರೈಸಿಕೊಳ್ಳೋಕೆ ಈ ಜನ್ಮವೆಲ್ಲಾ ದುಡಿದರೂ ಸಾಲದು. ಅದಕ್ಕೇ ಬಿಸಿನೆಸ್ ಮಾಡಿ ಲಕ್ಷಗಟ್ಟಲೆ ಹಣ ಸಂಪಾದಿಸುವ ಮಾರ್ಗವನ್ನು ಹುಡುಕ್ತಿದೀನಿ... ''

''ಇದೆಲ್ಲಾ ನಿನ್ನ ಸ್ನೇಹಿತನ ಚಿತಾವಣೆ ತಾನೇ....?''

''ಅವನೇಕೆ ಚಿತಾವಣೆ ಮಾಡ್ತಾನೆ ? ಅವನೊಂದು ಕ್ಲೂ ಕೊಟ್ಟ ಅಷ್ಟೇ, ಅಪ್ಪ

ಸುಮಾರು ಮೂವತ್ತು ವರ್ಷದಿಂದ ಸಂಪಾದಿಸ್ತಾನೇ ಇದಾರೆ. ಎಷ್ಟು ಸೇವ್ ಮಾಡಿದಾರೆ. ಚಿಂಪಿ ಮದುವೆಗೆ ಅಂತ ಎಷ್ಟು ಇಟ್ಟಿದಾರೆ ಸ್ವಂತ ಮನೆ ಸೈಟು ಯಾವುದಾದ್ರೂ ಇದೆಯಾ?'' ಸವಾಲು ಹಾಕಿದ.

''ಸ್ವಂತ ಮನೆ, ಸೈಟು ಅನ್ನೋ ಆಸೆ ಇದ್ದರೂ, ಲಭ್ಯವಿದ್ದರೆ ಮಾತ್ರ ನಡೆಯುತ್ತೆ. ಚಿಂಪಿ ಮದುವೆ ಮಾಡಲೇಬೇಕು ಅಲ್ವಾ ? ಎಲ್ಲಾದರೂ ಸಾಲ ಸಿಕ್ಕೇ ಸಿಗುತ್ತದೆ. ... ಹಾಗಂತ ಮದುವೆ ಮಾಡದೇ ಎಷ್ಟು ವರ್ಷ ಮನೇಲಿ ಇಟ್ಟುಕೊಳ್ಳೋದು ?''

''ಅದನ್ನಲ್ಲ ನಾನು ಹೇಳಿದ್ದು. ಸಾಲ ತಗೊಂಡ ಮೇಲೆ ತೀರಿಸಬೇಡವೆ ? ರಿಟೈರ್ ಆಗೋವರೆಗೂ ಸಾಲಕ್ಕೆ ಹಣ ವಜಾ ಆಗ್ತಾನೆ ಇರುತ್ತೆ...''

''ಹೇಗೋ ನಡೆಯುತ್ತೆ. ಅದನ್ನೆಲ್ಲ ನಿಮ್ಮಪ್ಪ ನಿಭಾಯಿಸ್ತಾರೆ. ನಿನಗ್ಯಾಕೆ ಚಿಂತೆ...?''

''ನಾನ್ಯಾಕಮ್ಮ ಚಿಂತೆ ಮಾಡಬಾರ್ದು ? ಒಂದು ಆಸ್ತಿ ಇಲ್ಲ ! ಪಾಸ್ತಿ ಇಲ್ಲ. ಜೀವಮಾನವೆಲ್ಲ ದುಡಿದರೂ ಬರೀ ಇಷ್ಟೇ... ನಿನ್ನ ಆಸೆಗಳು ಯಾವು ಯಾವುದು ನೆರವೇರಿದೆ ನೀನೇ ಹೇಳು ...''

''ಆಸೆಗೇನೋ... ಬೆಟ್ಟದಷ್ಟಿರುತ್ತೆ. ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು. ನಮ್ಮ ಆಸೆಗಳಿಗೆ ಒಂದು ಮಿತಿ ಹಾಕಿಕೊಂಡರೆ, ಬರೋದರಲ್ಲೇ ತೃಪ್ತಿ ಪಟ್ಟುಕೋಬಹುದು. ''

''ಈ ಸಿದ್ಧಾಂತಗಳನ್ನು ನಾನು ಒಪ್ಪಲ್ಲಮ್ಮ. ಹತ್ತಾರು ಆಸೆಗಳಲ್ಲಿ ಒಂದಾದ್ರೂಈಡೇರಲೇಬೇಕು. ಅದು ಬಿಟ್ಟು ವೈರಾಗ್ಯ ಹಾಡಿಕೊಂಡು ಇರೋ ಜಾಯಮಾನ ನನ್ನದಲ್ಲ.

''ಸರಿ ಬಿಡಪ್ಪಾ, ಬೆಳೆದು ದೊಡ್ಡೋನಾಗಿದೀಯಾ. ನಿನ್ನ ಅನಿಸಿಕೆಗಳೇ ಬೇರೆ. ಕೆಲಸವೋ ಬಿಸಿನೆಸ್ಸೋ, ಯಾವುದು ಸರಿ ಅನ್ನಿಸುತ್ತೋ ಅದನ್ನೇ ಮಾಡು. ಅದರಿಂದ ನಿನಗೆ ತೃಪ್ತಿ ಸಿಗೋದಾದ್ರೆ ಅದೇ ಆಗಲಿ.''

ಆದರೆ, ಅವನು ಅಂದುಕೊಂಡಂತೆ ಯಾವುದೂ ನಡೆಯಲಿಲ್ಲ. ಬಿಸಿನೆಸ್‌ಗೆ ಯಾವ ಅನುಭವವೂ ಇಲ್ಲ. ಅಂತ ಅನುಭವೀ ಸ್ನೇಹಿತರೂ ಇಲ್ಲ. ಮೊದಲಿಗೇ ಯಾವುದಾದರೂ ಪಾರ್ಟನರ್ಸ್ ಸಿಗಲಿಲ್ಲ. ಒಬ್ಬನೇ ಕೈಹಾಕಲು ತಕ್ಕ ಬಂಡವಾಳವಿಲ್ಲ. ಧೈರ್ಯವೂ ಇಲ್ಲ. ಯಾವುದಾದರೂ ಸಣ್ಣಪುಟ್ಟ ಕೆಲಸಗಳಿಗೆ ಸೇರಿಕೊಳ್ಳಲು ಮನ ಒಪ್ಪುತ್ತಿಲ್ಲ.

ಈ ಮಧ್ಯೆ ಪೂರ್ಣಿಮಾ, ಇಲ್ಲಿಯ ಕಾಲೇಜಿಗೆ ಬಂದು ಸೇರಿಕೊಂಡಿದ್ದು ಅವನಲ್ಲಿ ಏನೋ ಧೈರ್ಯವನ್ನುಂಟು ಮಾಡಿತ್ತು.ಆದಷ್ಟು ಬೇಗ ಅವಳ ಸ್ನೇಹವನ್ನು ಗಳಿಸಬೇಕು. ಅವಳೊಡನೆ ತನ್ನ ಮನದ ಅಳಲನ್ನು ಹೇಳಿಕೊಳ್ಳುವಷ್ಟು ನಮ್ಮ ಸ್ನೇಹ ಬಲವಾಗಬೇಕು ಎಂದೆನಿಸುತ್ತಿತ್ತು. ಅವಳು ತನ್ನ ಕಸಿನ್ಸ್ ಜೊತೆ ಸೇರಿ ಗಲಾಟೆ ಮಾಡಿಕೊಂಡು ಬೀದಿಯಲ್ಲಿ ಆಟವಾಡುತ್ತಿದ್ದರೆ, ಸುಮ್ಮನೆ ಕಿಟಕಿಯ ಬಳಿ ನಿಂತು ಅವಳನ್ನೇ ನೋಡುತ್ತಿದ್ದ. ಒಮ್ಮೊಮ್ಮೆ ಅನ್ನಿಸುತ್ತಿತ್ತು –

ಕಾಲೇಜಿನಲ್ಲೋದುವ ಹುಡುಗಿ... ವಯಸ್ಸಿನ ಪರಿಜ್ಞಾನವಿಲ್ಲದೇ ಚಿಕ್ಕವರನ್ನು ಸೇರಿಸಿಕೊಂಡು ಆಡವಾಡುತ್ತಿದ್ದಾಳಲ್ಲ ಅಂತೆನಿಸಿ, ಬೇರೆ ಯಾರಾದರೂ ಅವಳನ್ನು

ನೋಡುತ್ತಿರಬಹುದುದೇ ಎಂದು ಗಮನಿಸುತ್ತಿದ್ದ. ಬೀದಿಯಲ್ಲಿ ಓಡಾಡುವವರು ಯಾರಾದರೂ, ಅವಳನ್ನೇ ತಿರುಗಿ ನೋಡಿಕೊಂಡು ಹೋದರೆ, ಇವನು ಇರುಸು ಮುರುಸುಗೊಳ್ಳುತ್ತಿದ್ದ. ತಾನು ಹೋಗಿ ಹೇಳಬೇಕು ಎನ್ನಿಸುತ್ತಿತ್ತು. ಆದರೆ ಆ ಸಲುಗೆಯಿಲ್ಲ. ಅವಳ ವಯಸ್ಸಿನವಳೇ ಚಂಪಕ, ಗಂಭೀರವಾಗಿ ಮನೆಯಲ್ಲಿ ಇರುವುದು ಇನ್ನು ಮುಜುಗರವನ್ನುಂಟು ಮಾಡುತ್ತಿತ್ತು.

ಈ ಚಿಂಪಿ ಹೋಗಿ ಅವಳ ಸ್ನೇಹ ಗಳಿಸಿ, ಮನೆಯೊಳಗೆ ಕುಳಿತು ಚೌಕಾಭಾರವನ್ನೋ ಕೇರಂನ್ನೋಆಡುವ ಹಾಗೆ ಯಾಕೆಮಾಡಬಾರದು ಎಂದುಕೊಳ್ಳುತ್ತಿದ್ದ. ಈ ಚಿಂಪಿಗೋ ಅವಳನ್ನು ಕಂಡರೇ ಆಗುವುದಿಲ್ಲ...

''ಚಿಂಪೀ ನೀನ್ಯಾಕೆ ಸಂಗೀತ ಕಲಿಯಬಾರದು !''ಇದ್ದಕ್ಕಿದ್ದಂತೇ ಅವಳನ್ನು ಕೇಳಿದ. ಅವಳು ಕಣ್ಣರಳಿಸಿದಳು.

''ಯಾಕಪ್ಪಾ... ನಾನು ಸುಮ್ಮನೆ ಆರಾಮವಾಗಿರುವುದು ನಿನಗೆ ಸಹಿಸುತ್ತಿಲ್ವಾ?''

''ಹಾಗಲ್ವೇ... ಹುಡುಗೀರು ಸಂಗೀತ ಕಲಿತರೆ ಚೆನ್ನಾಗಿರುತ್ತೆ. ಚಿಕ್ಕಪ್ಪನೂ ಅದ್ನೇ ಹೇಳಿದರು ಗೊತ್ತಾ? ''

''ಅವರು ಯಾವತ್ತೋ ಹೇಳಿದ್ದನ್ನು ನನಗೆ ಈಗ ಹೇಳ್ತಿದೀಯ ? ''

''ಇವತ್ತು ನೆನಪಿಗೆ ಬಂತು... ಯಾರಾದ್ರೂ ಸಂಗೀತ ಹೇಳಿಕೊಡೋರು ಇದಾರಾ ಅಂತ ವಿಚಾರಿಸಿಕೊಂಡು ಬರ್ತೀನಿ.....''

''ವಿಚಾರಿಸಿಕೊಂಡು ಬಾ... ಆದರೆ ಕತ್ತೆ ತರಹ ಕಿರಿಚ್ತೀಯಾ , ಕಾಗೆ ತರಹ ಅರಚ್ತೀಯಾಂತ ಕಾಮೆಂಟ್ಸ್ ಮಾಡಬಾರದು.''

''ನಾನು ಕಾಮೆಂಟ್ಸ್ ಮಾಡಬಾರದು ಅನ್ನೋ ಹಾಗಿದ್ರೆ... ಕೋಗಿಲೆ ತರಹ ಇಂಪಾಗಿ ಹಾಡೋದನ್ನು ಕಲಿಯಬೇಕು...'

''ನನಗೆ ಆ ಪ್ರಯತ್ನವೆಲ್ಲಾ ಬೇಡಪ್ಪಾ... ನೀನು ಬೇಕಾದರೆ ಕಲಿ...''

''ಸರಿ, 'ಶುಭಸ್ಯ ಶೀಘ್ರಂ' ನಾನೇ ಕಲಿತೀನಿ. ವೋಕಲ್ ಕಲೀಲೋ, ಪಿಟೀಲು ಕಲೀಲೋ....''

''ಯಾವುದೋ ಒಂದು.... ಮೊದಲು ಪ್ರಾರಂಭ ಮಾಡು.''

''ಹಾಗಾದ್ರೆ ಇಬ್ಬರೂ ಕಲಿಯೋಣ್ವಾ. ಅಮ್ಮನ್ನ ಕೇಳ್ತೀಯಾ...? ''

''ಅಮ್ಮನ್ನ ಕೇಳ್ತೀನಿ. ಆದರೆ ಹೊರಗೆ ಯಾರದೋ ಮನೆಗೆ ಹೋಗಿ ಕಲಿಯೋಕ್ಕಿಂತ, ನಮ್ಮ ಮನೆಗೇ ಬಂದು ಯಾರಾದ್ರೂ ಹೇಳಿಕೊಟ್ಟರೆ ನಾನು ಕಲಿತೀನಿ...''

''ನಿನಗೆ ಕಂಡೀಷನ್ಸ್ ಬೇರೆ...''

''ಹೂಂ, ಹೌದು ಕಣೋ... ನನ್ನಿಷ್ಟ...''

''ಸರಿಯಮ್ಮ ತಾಯಿ.. ನಿನ್ನನ್ನು ಕೇಳಿದ್ದೇ ತಪ್ಪಾಯ್ತು....''

''ಸರಿ ಬಿಡು... ಸಂಗೀತದ ಟೀಚರನ್ನು ಹುಡುಕಿಕೊಂಡು ಬಾರೋ... ನನಗೂ ಸಂಗೀತ ಕಲಿಬೇಕೂಂತ ಆಸೆ ಇತ್ತು..''

"ಇದೋ...ಈಗಲೇ ಹೊರಟೆ"ಅವನು ಎದ್ದ. ಎಂಟು ಹತ್ತು ದಿನಗಳ ನಂತರ ಕಡೆಗೂ ಒಬ್ಬ ಸಂಗೀತದ ಟೀಚರನ್ನು ಪತ್ತೆ ಹಚ್ಚಿದ. ಮನೆಗೇ ಬಂದು ಪಾಠ ಹೇಳಿಕೊಡುವಂತೆ ಒಪ್ಪಿಸಿದ. ನನ್ನ ತಂಗಿಯ ಜೊತೆಗೆ ನನಗೂ ಕಲಿಯುವ ಆಸೆ. ಮೊದಲಿಗೆ ನಾವಿಬ್ಬರೂ.... ನೋಡ್ತಿರಿ. ಕೆಲವೇ ದಿನಗಳಲ್ಲಿ ಇನ್ನು ನಾಲ್ಕಾರು ವಿದ್ಯಾರ್ಥಿಗಳು ಸಿಗ್ತಾರೆ.

"ಸರಿ, ಬುಧವಾರ ದಿನ ಚೆನ್ನಾಗಿದೆ. ಮೊದಲಿಗೆ ಗಣಪತಿಗೆ, ಸರಸ್ವತಿಗೆ ಪೂಜೆ ಮಾಡಿ ಓಂಕಾರದೊಂದಿಗೆ ಶುರು ಮಾಡ್ತೀನಿ. ಎಲ್ಲಾದಕ್ಕೂ ಸಿದ್ಧ ಮಾಡಿ. ಸಾಯಂಕಾಲ ಐದು ಗಂಟೆ ಹೊತ್ತಿಗೆ ಒಂದು ಬಿಡ್ತೀನಿ. "

ಹೀಗೆ ಪ್ರಾರಂಭವಾಯಿತು ಸಂಗೀತ ಪಾಠ. ಸರಸ್ವತಿ ಪೂಜೆ ಮಾಡಿ, ಸಾ.ಪಾ.ಸಾ. ಕೂಗಿಸಿದರು. ಮಗ ಸುಮ್ಮನೇ ತಮಾಷೆಗೆ ಹೇಳುತ್ತಾನೆಂದು ಗೌರಮ್ಮ ಭಾವಿಸಿದ್ದಳು.ಆದರೆ ಅವನೂ ಶೃತಿಗೆ ಶೃತಿ ಸೇರಿಸಿದಾಗ ಗೌರಮ್ಮನಲ್ಲಿ ನಾನಾ ಆಲೋಚನೆಗಳು ಮೂಡಿದವು. ಕೆಲಸ ಕಾರ್ಯಕ್ಕೆ ಸೇರದೆ ಸಂಗೀತ ಹಾಡಿಕೊಂಡು ಕೂತಿದ್ದರೆ ನಡೆಯುತ್ತದೆಯೇ ? ಇವೆಲ್ಲಾ ಒಂದೆರಡು ದಿನಗಳ ಆಟ. ನಾಲ್ಕು ದಿನ ಕಳೆದಮೇಲೆ ಬಿಟ್ಟು ಹೋಗಬಹುದೆಂದು ಭಾವಿಸಿದಳು.

ಪಕ್ಕದ ಮನೆಯ ಹುಡುಗಿಯರು ಬಂದು ಇಣುಕಿ ನೋಡಿ ಹೋಗಿದ್ದವು. "ಏ ಬನ್ರೇ... ನೀವು ಪಾಠ ಹೇಳಿಸ್ಕೋತಿರೇನೇ ..." ಚಂದ್ರ ಕರೆದು ಕೇಳಿದ.

"ನಮ್ಮ ತಾಯೀನ ಕೇಳಬೇಕು...." ವಿಧೇಯತೆಯಿಂದ ನುಡಿದವು.

"ಸುಮ್ಮನಿರೋ.... ಓದು ಬರಹ ಬಿಟ್ಟು ಸಂಗೀತ ಕಲೀತಾ ಕೂತ್ರೆ ಮುಗೀತು ಗತಿ..."

"ಚಿಕ್ಕವಯಸ್ಸಿನಲ್ಲಿ ಕಲಿತ್ರೇನೇ ಚೆನ್ನ. ಧ್ವನಿ ಚೆನ್ನಾಗಿ ಪಕ್ವವಾಗುತ್ತೆ."

"ಹಾಗಾದ್ರೆ ಈ ವಯಸ್ನಲ್ಲಿ ನೀನೇಕೆ ಕಲಿತಿದೀಯ ?"

"ಚಿಕ್ಕ ವಯಸ್ಸಿನಲ್ಲಿ ನೀನು ಕಲಿತೀಯಾ ಅಂತ ಯಾರೂ ಕೇಳಲೇ ಇಲ್ಲ. ಆದ್ದರಿಂದ,ಈಗಲೂ ಸಮಯ ಮೀರಿಲ್ಲ ಅಂತ ನಾನೇ ತೀರ್ಮಾನ ತಗೊಂಡೆ..." ನನ್ನಿಂದ ನಿನಗೂ ಕಲಿಯುವ ಛಾನ್ಸ್ ಸಿಗ್ತಲ್ಲ.

"ಅದೇನೋ ಸರಿ..... ಇದೊಂದೇ ಕೆಲಸ ನೋಡು, ನನಗೆ ಒಳ್ಳೇದನ್ನ ಮಾಡಿದ್ದು. ಅದರಿಂದ ನಿನಗೂ ಏನೋ ಲಾಭವಿರಬೇಕು ಅಲ್ವಾ ! ಲಾಭ ಇಲ್ಲದೇ ಯಾವ ಕೆಲಸವನ್ನೂ ಮಾಡೋನಲ್ಲ ನೀನು."

"ಹಾಗೆ ಅಂದ್ಕೋ..." ಎನ್ನುತ್ತಾ ಎದ್ದು ಆಚೆ ಗೇಟಿನ ಬಳಿಗೆ ಬಂದು ನಿಂತ.ಆಗಾಗ್ಗೆ ಪಕ್ಕದ ಮನೆಯ ಕಡೆ ಅವನ ಗಮನ ಹರಿಯುತಿತ್ತು. ಆ ಹುಡುಗಿಯರು ಪ್ರಸಾದ ತೆಗೆದುಕೊಂಡು ಹೋಗಿದ್ದರು. ಕೆಲವೇ ನಿಮಿಷಗಳಲ್ಲಿ ಽ ಹುಡುಗಿಯರು ಪೂರ್ಣಿಮಾಳೊಂದಿಗೆ ಮತ್ತೆ ಬಂದರು. ಅವಳು ಅವನನ್ನು ಕಂಡು ಅಲ್ಲೇ ಗೇಟಿನ ಬಳಿ ನಿಂತಳು.

"ಯಾರು ಬೇಕಾಗಿತ್ತು ? " ತಮಾಷೆಯಾಗಿ ಕೇಳಿದ.

''ಸಂಗೀತದ ಟೀಚರ್ರು ಇದಾರೋ ಹೊರಟು ಹೋದ್ರೋ ? ''

''ನಾಳೆ ಮತ್ತೆ ಬರ್ತಾರೆ''

''ನನಗೂ ಪಾಠ ಹೇಳಿಸಿಕೊಳ್ಳುವ ಆಸೆ....''

''ಓ ಅದಕ್ಕೇನಂತೆ ಧಾರಾಳವಾಗಿ ಹೇಳಿಸಿಕೊಳ್ಳಿ''

''ಫೀಸು ಎಷ್ಟು ತಗೋತಾರೋ... ವಾರಕ್ಕೆಎಷ್ಟು ದಿನ ಕ್ಲಾಸು ತಗೊಳ್ಳುತ್ತಾರೋ ಅದನ್ನೆಲ್ಲಾ ಕೇಳಬೇಕಾಗಿತ್ತು...''

''ನಾನು ಕೇಳಿಬಿಟ್ಟು ಹೇಳಲಾ ?''

''ಪರವಾಗಿಲ್ಲ ನಾನೇ ಕೇಳ್ತೀನಿ. ನಾಳೆ ಎಷ್ಟು ಹೊತ್ತಿಗೆ ಬರ್ತಾರೆ ?''

''ಇದೇ ಹೊತ್ತಿಗೆ... ನೀವು ಖಂಡಿತಾ ಬರ್ತಿರಾ ? ''

''ಯಾಕ್ರೀ ? ಅನುಮಾನಾನಾ ? ತಮಾಷೆ ಮಾಡ್ತಿದೀನಿ ಅಂತ ಅಂದ್ಕೊಂಡ್ರಾ?''

''ಹೂಂ ಹಾಗೆ ಅಂದ್ಕೊಂಡೆ... ಪರವಾಗಿಲ್ಲ ಬಿಡಿ ಬೆಂಗಳೂರ್ನಿಂದ ಯಾವಾಗ ಬಂದ್ರಿ ?''

''ಬಂದು ಎರಡು ವಾರದ ಮೇಲಾಯ್ತು. ಇಲ್ಲೇ ಕಾಲೇಜಿಗೆ ಸೇರಿ ಕೊಂಡಿದೀನಿ.''

''ಈ ಹಳ್ಳಿ ಕಾಲೇಜಿಗಾ ? ಯಾಕೆ ಬೆಂಗಳೂರಿನ ಕಾಲೇಜನ್ನೆಲ್ಲಾ ಮುಚ್ಚಿ ಬಿಟ್ಟಿದ್ದಾರೋ ? ಅಥವಾ ನಿಮಗೆ ಸೀಟು ಸಿಗಲಿಲ್ಲವೋ ? '' ನಕ್ಕ.

''ಎರಡೂ ಅಲ್ಲ, ನಮ್ಮಪ್ಪನಿಗೆ ಬೇರೆ ಊರಿಗೆ ವರ್ಗವಾಗಿದೆ. ಅದಕ್ಕೆ ಇಲ್ಲಿ ಅಜ್ಜಿ ಮನೇಲಿದ್ದುಕೊಂಡು ಡಿಗ್ರಿ ಮಾಡ್ತೀನಿ. ''

''ಓ.. ಇನ್ನೂ ಮೂರುವರ್ಷ ಇಲ್ಲಿರ್ತೀರಾ ? '' ತಮಾಷೆಯಾಗಿ ನಕ್ಕ.

''ಮೂರು ವರ್ಷವಾದ್ರೂ ಇರ್ತೀನಿ. ಆರು ವರ್ಷವಾದ್ರೂ ಇರ್ತೀನಿ. ನಿಮಗೇನು ಕಷ್ಟ?'' ಕೆನ್ನೆ ಊದಿಸಿದಳು.

''ನಂಗೇನೂ ಕಷ್ಟವಿಲ್ಲ. ನಿಮಗೇ ಈ ಊರ್ನಿಂದ ಬೇರೆ ಯಾವದಾದ್ರೂ ಊರಿಗೆ ಹೋದ್ರೆ ಸಾಕು ಅಂತ ಅನ್ನಿಸುತ್ತೆ...''

''ನೋಡ್ಕೊಳ್ಳೋಣ. ಏಯ್ ಬನ್ರೇ''ಎನ್ನುತ್ತಾ ಆ ಹುಡುಗಿಯರನ್ನು ಎಳೆದುಕೊಂಡು ತನ್ನ ಮನೆಗೆ ಹೊರಟು ಹೋದಳು. ಇವನು ಅವಳನ್ನೇ ನೋಡುತ್ತಾ ಅಲ್ಲಿಯೇ ನಿಂತ. ಈ ಹುಡುಗಿ ಬಲೇ ಜೋರು. ನನಗೆ ಕೊಡಬೇಕಾದ ದುಡ್ಡಿನ ಬಗ್ಗೆ ಹೇಳುವುದೇ ಇಲ್ಲವಲ್ಲ. ನಾನಾಗಿಯೇ ಕೇಳುವುದು ಹೇಗೆ ? ಗಂಡಸಾಗಿ ನಾನೇ ಕೇಳುವುದೆಂದರೆ ಅದು ಹೀನಾಯವಾದ ಮಾತು. ಮನೆಯವರ್ಯಾರಿಗೂ ಈ ವಿಷಯ ತಿಳಿಯದು. ತಿಳಿದರೆ ಕೆಲಸವಿಲ್ಲ; ಸಂಪಾದನೆಯಿಲ್ಲ. ನೀನಾಗಿಯೇ ನೀನು ಕೊಡಕ್ಕೆ ಯಾಕೆ ಹೋದೆ ? ಅಂತ ಅನ್ನದೇ ಇರುವುದಿಲ್ಲ. ಆದರೆ, ನಾನಂತೂ ವಸೂಲಿ ಮಾಡದೇ ಬಿಡುವುದಿಲ್ಲ.

ಮಾರನೇ ದಿನ, ಸಾಯಂಕಾಲ ಸಂಗೀತದ ಟೀಚರ್ರು ಬರುವ ಸಮಯಕ್ಕೆ ಸರಿಯಾಗಿ, ಪೂರ್ಣಿಮಾ, ತನ್ನ ಕಸಿನ್ಸ್ ಜೊತೆ ಬಂದಳು. ಇವನೇ ಖುದ್ದಾಗಿ ಮೇಡಂಗೆ

ಅವಳ ಪರಿಚಯ ಮಾಡಿಕೊಟ್ಟ. ಪೂರ್ಣಿಮಾ ವಿನಯದಿಂದ ಮೇಡಂಗೆ ನಮಸ್ಕರಿಸಿದಳು. ಚಂಪಕ ಮಾತನಾಡದೇ ಕೂತಿದ್ದಳು.

''ಈ ಮುಂಚೆ ಎಲ್ಲಾದರೂ ಕಲಿತಿದ್ದೀಯೇನಮ್ಮಾ'' ಮೇಡಂ ಪ್ರಶ್ನಿಸಿದಳು.

''ಹೂಂ ಮೇಡಂ. ನನಗೆ ಜೂನಿಯರ್ ಆಗಿದೆ. ಸಿನೀಯರ್ ಪಾಠ ಸಹ ಅರ್ಧಂಬರ್ಧ ಆಗಿದೆ.''

''ಓ... ಒಳ್ಳೇದು.'' ಮೇಡಂ ಸಂತಸವನ್ನು ವ್ಯಕ್ತಪಡಿಸಿದಾಗ ಚಂಪಕ ಅಣ್ಣನ ಕಡೆ ನೋಡಿದಳು. ಅವನು ಆಶ್ಚರ್ಯದಿಂದ ಪೂರ್ಣಿಮಾಳನ್ನೇ ನೋಡುತ್ತಿದ್ದ. ಇದೊಳ್ಳೆ ಎಲೆ ಮರೆಯ ಕಾಯಾಯ್ತಲ್ಲ. ಇನ್ನು ಏನೇನು ಪ್ರತಿಭೆಗಳು ಇವಳಲ್ಲಿ ಅಡಗಿವೆಯೋ ಎಂದುಕೊಂಡು ತನ್ನಲ್ಲೇ ಏನೋ ಲೆಕ್ಕಾಚಾರ ಹಾಕುತ್ತಿದ್ದ.

''ಎಲ್ಲಿ ಯಾವುದಾದರೂ ಒಂದು ದೇವರ ನಾಮವನ್ನು ಹಾಡಮ್ಮ''ಮೇಡಂ ಹೇಳುವುದನ್ನೇ ಕಾಯುತ್ತಿದ್ದವಳಂತೆ ಶೃತಿ ಸರಿಮಾಡಿಕೊಂಡು, ''ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡೆ ಜಗಳ ಲೇಸೋ....'' ಎಂಬ ದಾಸರ ಪದವನ್ನು ಚೆನ್ನಾಗಿಯೇ ಹಾಡಿದಳು. ಚಂಪಕಳ ಮುಖ ಸುಟ್ಟ ಬದನೇಕಾಯಿಯಂತಾಗಿತ್ತು. ಚಂದ್ರ ಬೆಪ್ಪನಾಗಿದ್ದ. ಮೇಡಂ ಶಹಬಾಸ್‌ಗಿರಿ ಕೊಟ್ಟರು.

''ತುಂಬಾ ಚೆನ್ನಾಗಿ ಹಾಡ್ತೀಯಮ್ಮ... ನಿನಗೆ ಸೀನಿಯರ್‌ಪಾಠ ಇಲ್ಲಿ ಆಗಲ್ಲ. ನಮ್ಮ ಮನೆಗೇ ಬರಬೇಕು. ಈಗಾಗಲೇ ಐದಾರು ಜನ ಹುಡುಗಿಯರು ಬರ್ತಾರೆ. ಅವರುಗಳೊಂದಿಗೇ ಕಲಿತರೆ, ಅಭ್ಯಾಸ ಮಾಡಿದರೆ ನಿನಗೇ ಒಳ್ಳೆಯದು.''

''ಫೀಸು.... ?''ಅನುಮಾನ ಸಂಕೋಚದಿಂದ ಕೇಳಿದಳು.

''ನಾಳೆ ನಮ್ಮ ಮನೆಗೆ ಬಾ. ಅಲ್ಲಿಯೇ ಮಾತನಾಡೋಣ...''

ಹೂಂ ಎಂದು ತಲೆಯಾಡಿಸಿ ಅಲ್ಲಿಯೇ ಕುಳಿತಳು. ಅವಳ ಎದುರಿನಲ್ಲಿ ಸಾ..ಪಾ..ಸಾ.. ಕೂಗಲು ಕಷ್ಟವೆನಿಸುತ್ತಿತ್ತು ಚಂದ್ರನಿಗೆ, ಚಂಪಕಳಿಗೆ. ಕಲಿಯುವ ಆಸಕ್ತಿಯೇ ಇಲ್ಲವಾಯಿತು.

ಸರಳೆಯಿಂದ ಮೊದಲ ಪಾಠ ಪ್ರಾರಂಭವಾಯಿತು. ಸರಿಗಮ ಪದನಿಸ ಎಂದು ತಾಳ ಹಾಕಿಕೊಂಡು ಹಾಡುವುದು ಕಷ್ಟವೇ ಆಗಿದ್ದಿತು ಇಬ್ಬರಿಗೂ. ಇವತ್ತಿಗೆ ಇಷ್ಟೇ ಸಾಕು ಎಂದು ಮೇಡಂ ಎದ್ದಾಗ ಇಬ್ಬರಿಗೂ ಹಾಯೆನಿಸಿತ್ತು. ಮೇಡಂ ಅತ್ತ ಹೋದ ಕೂಡಲೇ, ಚಂಪಕ ಗೊಣಗಿದಳು.

''ನನಗೆ ಈ ಸಂಗೀತ, ಹಾಡು, ಗೀಡು ಏನೂ ಬೇಡ. ಸುಮ್ಮನೆ ಸರಿಗಮ ಹೇಳಿ, ತಾಳ ಹಾಕಿ ಹಾಕಿ ಸಾಕಾಯ್ತು.''

ಚಂದ್ರ ನಕ್ಕ. ''ಇಷ್ಟು ಬೇಗ ಆಗುಲ್ಲ ಅಂತ ಸೋಲನ್ನೊಪ್ಪಿಕೊಂಡರೆ ಹೇಗೆ ? ನೋಡು ಆ ಪೂರ್ಣಿಮಾ ಎಷ್ಟು ಚೆನ್ನಾಗಿ ಕಲಿತಿದಾಳೆ.''

''ಪೂರ್ಣಿಮಾ... ಪೂರ್ಣಿಮಾ.. ಎಲ್ಲಾ ವಿಷಯದಲ್ಲೂಅವಳಿಲ್ಲದೇ ಮಾತಿಲ್ಲ. ಅವಳು ಚಿಕ್ಕವಯಸ್ಸಿನಿಂದ ಕಲಿತಿದಾಳೆ... ನಾನು ಈಗ ಈ ವಯಸ್ಸಿನಲ್ಲಿ ಕಲಿಯಬೇಕೂಂತ

ಅಂದ್ರೆ ಕಷ್ಟವೇ....''

''ನೀನೂ ಅವಳ ಜೊತೆ ಕೂತು ಅಭ್ಯಾಸ ಮಾಡು. ಗೊತ್ತಿಲ್ಲದ್ದನ್ನು ಹೇಳಿಸ್ಕೋ... ನಿನಗೂ ಬರುತ್ತೆ... ''

''ಅವಳ ಕೈಲಿ ಮಾತ್ರ ಹೇಳಿಸಿಕೊಳ್ಳಲ್ಲ... ನನಗೆ ಸಂಗೀತ ಬರದಿದ್ರೂ ಪರವಾಗಿಲ್ಲ.''

''ಅವಳ ಮೇಲೆ ಯಾಕೆ ಹಗೆ ಸಾಧಿಸ್ತೀಯಾ ?''

''ನನ್ನಿಷ್ಟ'' ಎಂದು ಅಲ್ಲಿಂದ ಎದ್ದು ಹೋದಳು. ತಂಗಿ ಅವಳ ಜೊತೆ ಕೂತು ಅಭ್ಯಾಸ ಮಾಡಿದರೆ, ಅವಳು ನಮ್ಮ ಮನೆಗೆ ಆಗಾಗ್ಗೆ ಬಂದಂತಾಗುತ್ತದೆ. ತಾನೂ ಕಲಿಯುವ ನೆಪದಲ್ಲಿ ಅವಳ ಎದುರಿಗೇ ಕೂತಿರಬಹುದು ಎನ್ನುವ ಅವನ ಲೆಖ್ಖಾಚಾರಕ್ಕೆ ಕಲ್ಲು ಬಿದ್ದಿತ್ತು.

''ಥೂ... ಈ ಚಿಂಪೀನ ಚಚ್ಚಿ ಹಾಕಬೇಕು ಅನ್ನೋವಷ್ಟು ಕೋಪ ಬರ್ತಿದೆ ಎಂದು ಹಲ್ಲು ಕಡಿದ. ಪೂರ್ಣಿಮಾ ಸಂಗೀತ ಕಲಿತಿದ್ದಾಳೆ. ಚೆನ್ನಾಗಿ ಹಾಡ್ತಾಳೆ. ಅದರಲ್ಲಿ ಸಂಶಯವಿಲ್ಲ. ... ಇನ್ನು ನಾನು ಕಲಿತು ಅವಳ ಸರಿ ಸಮಾನನಾಗಿ ಹಾಡುವುದ ಎಂದಿಗೋ... ಈ ಚಿಂಪಿ, ಚಿಕ್ಕವಯಸ್ಸಿನಲ್ಲೇ ಕಲಿಯಲು ಪ್ರಾರಂಭಿಸಿದ್ದರೆ ನನಗೂ ಚೂರು ಪಾರು ಖಂಡಿತಾ ಬರುತ್ತಿತ್ತೇನೋ. ಇವಳಿಗಂತು ಏನನ್ನೂ ಕಲಿಯಕ್ಕೆ ಆಸೆಯೇ ಇಲ್ಲ. ಛೇ..'' ಲೋಚಗುಟ್ಟಿದ.

''ತಂದೆಗೆ ಈ ವಿಷಯ ತಿಳಿಸಿದಾಗ ಅವರ ಪ್ರತಿಕ್ರಿಯೆಯೂ ಅಷ್ಟೇ.''ಇದ್ದಕ್ಕಿದ್ದ ಹಾಗೆ ಈ ಸಂಗೀತ ಕಲಿಯುವ ಹುಚ್ಚು ಏಕೆ ಬಂತು ? ಇದರ ಬದಲು ಕಂಪ್ಯೂಟರ್ ಕೋರ್ಸಿಗೆ ಸೇರಿಕೊಳ್ಳಲಿ. ಕೆಲಸ ಸುಲಬವಾಗಿ ಸಿಕ್ಕುತ್ತೆ...

''ಕೋರ್ಸಿಗೆ ಎಂಟು ಹತ್ತು ಸಾವಿರದ ಮೇಲೆ ಖರ್ಚಾಗುತ್ತಂತೆ. ಹಣಕ್ಕೆಏನು ಮಾಡೋದು ? ''

''ನಾನೇನು ಕೊಡಲ್ಲ ಅಂತ ಅಂದೆನೇ ? ನನ್ನನ್ನು ಒಂದ್ಮಾತೂ ಕೇಳಲ್ಲ ನಿನ್ನ ಮಗ. ಹುಡುಗೀರ ತರಹ ಮನೇಲೆ ಕೂತು ಸಂಗೀತ ಕಲಿತಾನಂತಾ ? ಕಲಿತು ಏನ್ಮಾಡ್ತಾನಂತೆ ?''

''ಮೆಲ್ಲಗೆ ಮಾತ್ನಾಡಿ. ಏನೋ ನಾಲ್ಕು ದಿನದ ಆಸೆ. ಎಷ್ಟೋ ಜನ ಗಂಡಸರು ಸಂಗೀತಗಾರರಿಲ್ಲವೇ ? ಅವರೆಲ್ಲಾ ಚೆನ್ನಾಗಿ ಹಾಡ್ತಾರೆ ಅಂತ ನೀವೇ ಹೇಳ್ತೀರಿ. ಬೇಡಾಂತಂದ್ರೆ ಎಲ್ಲಿ ಬೇಜಾರು ಮಾಡ್ಕೋತಾನೋ ಅಂತ ಸುಮ್ಮನಾದೆ. 'ಇದರಿಂದ ಚಿಂಪಿನಾದ್ರೂ ನಾಲ್ಕು ದೇವರ ನಾಮಗಳನ್ನು ಕಲಿಯಲಿ. ಅವಳಿಗೇ ಅನುಕೂಲ ವಾಗುತ್ತೆ... ಅವತ್ತು ಹೇಳಿದ್ನಲ್ಲ... ಅದೇ ಬಿಸಿನೆಸ್‌ಗೆ ಸಾಲಾಂತ... ಅದೇನಾಯ್ತು. ಬ್ಯಾಂಕಿನಲ್ಲಿ ವಿಚಾರಿಸಿದ್ರಾ ? ''

''ನಮ್ಮಂಥೋರಿಗೆ ಸಾಲ ಸಿಗುವುದು ಕಷ್ಟವೇ. ಅಡವಿಡುವುದಕ್ಕೆ ನಮ್ಮ ಹತ್ತಿರ ಏನಿದೆ ಹೇಳು . ಮನೆಯೇ, ಸೈಟೇ, ಜಮೀನೇ, ಬೆಲೆಬಾಳುವ ಒಡವೇನೆ... ಈ ಬಿಸಿನೆಸ್ ಆಸೆ ಬಿಟ್ಟು ಸುಮ್ಮನೇ ಕೆಲಸಕ್ಕೆ ಪ್ರಯತ್ನ ಮಾಡೂಂತ ನಿನ್ನ ಮಗನಿಗೆ ಹೇಳು. ಎಷ್ಟು ದಿನಗಳನ್ನು ತಳ್ಳಿದರೂ ಪರವಾಗಿಲ್ಲ. ನಾನು ಅನ್ನ ಹಾಕ್ತೀನಿ. ಕಂಪ್ಯೂಟರ್‌ಗೆ ಸೇರಿಕೊಳ್ಳಲಿ. ಕೆಲವು ಕಡೆ ಕಡಿಮೆ

ಫೀಸು ಇರುತ್ತೆ. ಅದಕ್ಕೆ ವಿಚಾರಿಸಲಿ.''

ಈ ಮಾತುಗಳು ಚಂದ್ರನ ಕಿವಿಗೆ ಬಿತ್ತು. ಮನಸ್ಸು ಮುದುರಿತು. ಸಂಪಾದನೆ ಇಲ್ಲದೇ ಈ ಮನೆಗೆ ಭಾರವಾಗಿದೀನಿ ಅಂತ ಅಪ್ಪ ಸೂಚ್ಯವಾಗಿ ಹೇಳುತ್ತಿರಬಹುದೇ ಎಂದು ಅನುಮಾನಿಸಿದ. ಇದರಲ್ಲಿ ನನ್ನ ತಪ್ಪೇನಿದೆ. ಸಂಪಾದನೆ ಮಾಡಕ್ಕೆ ಶುರು ಮಾಡಿದ ಮೇಲೆ, ಬಡ್ಡೀ ಸಮೇತ ಇವರ ಹಣ ಬಿಸಾಕ್ತೀನಿ. ಆದರೆ ಈ ರೀತಿಯ ಉದಾಸೀನದ ಮಾತುಗಳು ಮಾತ್ರ ಕೆಂಡದಂತಹ ಕೋಪವನ್ನು ಬರಿಸುತ್ತೇ ಅಂತಂದು ಕೊಂಡ.

ತಿಂಗಳು ಕಳೆದರೂ, ಸರಿಗಮ ಪದನಿಸದಿಂದ ಮುಂದೆ ಹೋಗಿರಲಿಲ್ಲ. ಮೂರು ಕಾಲಗಳಲ್ಲೂ ತಾಳಕ್ಕೆ ಸರಿಯಾಗಿ ಸ್ವರಗಳನ್ನು ಹೇಳುವಾಗ ತೊಡರುತ್ತಿತ್ತು. ಅವನಿಗಾಗಲೇ ಬೇಸರವಾಗತೊಡಗಿತ್ತು. ಅಲ್ಲದೇ ಅವನಂದುಕೊಂಡಂತೆ, ಪೂರ್ಣಿಮಾ ಕ್ಲಾಸಿಗೆ ಬರಲಾಗಿರಲಿಲ್ಲ.

ವಾರದ ಬೇರೆ ಎರಡು ದಿನಗಳಲ್ಲಿ ಅವಳು ಟೀಚರ್ ಮನೆಗೇ ಹೋಗಿ ಕಲಿಯುತ್ತಿದ್ದಳು. ತನ್ನಿಂದ ದೂರವಾಗುತ್ತಿದ್ದಾಳೆ ಎಂಬ ಭಾವನೆ ಬೆಳೆಯತೊಡಗಿತು. ಒಂದು ದಿನ ಅವಳು ಕಲಿಯುತ್ತಿದ್ದಲ್ಲಿಗೇ ಹೋಗಿ,ಕಾದಿದ್ದು ಅವಳೊಡನೆ ಮಾತನಾಡಿದ.

''ನಿಮಗೆ ಹಾಡಕ್ಕೆ ಬರುತ್ತೆಅಂತ ನೀವೇಕೆ ಮೊದಲೇ ಹೇಳಲಿಲ್ಲ? ''

''ನೀವು ಕೇಳಲಿಲ್ಲ. ನಾನು ಹೇಳಲಿಲ್ಲ. ಅಲ್ಲದೇ ನಿಮಗೆ ನಾನೇಕೆ ಹೇಳಬೇಕೂಂತ...'' ಕತ್ತು ಕೊಂಕಿಸಿದಳು.

''ಅದೇನೋ ಸರಿ. ಪಕ್ಕದ ಮನೆಯವನು ಸ್ನೇಹಿತ... ನಾನೊಮ್ಮೆ ನಿಮ್ಮ ಜೊತೆ ಬೆಂಗಳೂರಿಗೆ ಬಂದು, ನಿಮ್ಮನ್ನು ನಿಮ್ಮ ಮನೆಗೆ ತಲುಪಿಸಿದ್ದೆ. ನೆನಪಿದೆಯಾ ?''

''ಸಾರಿ ಮಿಸ್ಟರ್... ನಾನೇ ನಿಮ್ಮ ಜೊತೆಯಲ್ಲಿ ಬಂದದ್ದು ಅದೂ ನಮ್ಮ ಮಾವ ಹೇಳಿದ್ರು ಅಂತ.... ನನಗೇನೂ ಭಯವಿರಲಿಲ್ಲ. ನನ್ನ ಟಿಕೆಟ್ ಹಣ ಡ್ಯೂ ಇದೆ ನನಗೂ ಗೊತ್ತು.. ಪದೇ ಪದೇ ನೆನಪಿಸಬೇಡಿ.''

''ಸಾರಿ ಮಿಸ್. ನಾನೆಲ್ಲಿ ಹಣ ಕೇಳಿದೆ ? ಸ್ನೇಹಿತನಾಗಿ ಅಷ್ಟು ಸಣ್ಣ ಬುದ್ಧಿ ಇಲ್ಲ ನನಗೆ. ನನಗೆ ನಿಮ್ಮ ಹಣವೇನು ಬೇಡ. ನನಗೆ ನಿಮ್ಮ ಸ್ನೇಹ ಬೇಕು...''

''ಏನ್ರೀ ಹಾಗಂದ್ರೆ ? ನನ್ನ ಸ್ನೇಹಿತನಾಗುವ ಯಾವ ಅರ್ಹತೆ ನಿಮ್ಮಲ್ಲಿದೆ ಹೇಳಿ... ನನಗೆ ಈ ಸ್ನೇಹ ಬೇಡವೇ ಬೇಡ.'' ತಮಾಷೆಯಿಂದ ನಗುತ್ತಾ ನುಡಿದಳು.

''ಹಾಗನ್ನಬೇಡಿ ಮಿಸ್. ನನಗೆ ನಿಮ್ಮ ಸ್ನೇಹ ಬೇಕಾಗಿದೆ.''

''ಛೀ... ಯಾಕ್ರೀ ಹೀಗೆ ಬೇಡ್ಕೋತೀರಿ. ನಿಮ್ಮ ತಂಗಿ ನೋಡಿದ್ರೆ ಜಂಭ ಆಡ್ತಾಳೆ.''

''ನನಗೂ ಅವಳಿಗೂ ಸದಾ ಜಗಳ. ನಾಯಿ ಬೆಕ್ಕು ತರಹ ಕಚ್ಚಾಡ್ತೀವಿ ಅಂತ ಅಮ್ಮ ಬೈತಾನೇ ಇರ್ತಾಳೆ. ನಾನೊಂದು ತರಹ ಒಂಟಿ. ನನ್ನ ಜೊತೆಯವರೆಲ್ಲಾ ನನಗಿಂತ ತುಂಬಾ ಮುಂದೆ ಮುಂದೆ ಹೊರಟು ಹೋದರು. ನಾನು ಹಿಂದೆ ಉಳಿದುಬಿಟ್ಟೆ.''

''ಅಂದ್ರೆ ... ಫೇಲಾದ್ರಾ ?''

''ಛೀ ಬಿಡ್ತೂನ್ನಿ . ಫೇಲಾಗುವಷ್ಟು ದಡ್ಡ ಅಲ್ಲ ನಾನು. ಹೈ ಫಸ್ಟ್ ಕ್ಲಾಸ್ ಬರಲಿಲ್ಲ

ಅಂತ ವಿತ್‌ಡ್ರಾ ಮಾಡಿಕೊಂಡೆ. ಅದೇ ತಪ್ಪಾದದ್ದು. ತನ್ನ ಹಳೆಯ ವಿಷಯವನ್ನು ಹೇಳಿಕೊಂಡ. ಬಿ.ಎಸ್ಸಿಯನ್ನು ಸಹ ಪೂರೈಸಲಿಲ್ಲ. ಈಗ ಬಿ.ಇ. ಮುಗಿದಿದ್ದೂ ಕೆಲಸ ಸಿಕ್ಕಿಲ್ಲ.''

''ಇದನ್ನೆಲ್ಲ ನನಗ್ಯಾಕೆ ಹೇಳ್ತಿದೀರಿ !''

''ನಿಮಗೆ ಹೇಳಬೇಕೂಂತ ಏನಿರಲಿಲ್ಲ. ಆದರೆ ನಿಮಗೆ ಏನನ್ನಿಸಿತೋ ಗೊತ್ತಿಲ್ಲ. ನಮ್ಮ ಅಪ್ಪ ಅಮ್ಮನ ಉದಾಸೀನತೆ, ನನ್ನ ತಂಗಿಯ ವ್ಯಂಗ್ಯ, ನನ್ನ ಸ್ನೇಹಿತರ ತಮಾಷೆ ಎಲ್ಲಾ ಹುಚ್ಚು ಹಿಡಿಸುತ್ತೆ ಅಂತನ್ನಿಸುತ್ತೆ. ನನ್ನ ಆತ್ಮೀಯರು ಯಾರೂ ಇಲ್ಲ. ನಿಮ್ಮನ್ನು ಕಂಡಾಗಿನಿಂದ ನಿಮ್ಮ ಸ್ನೇಹ ಗಳಿಸಬೇಕೂಂತ ಅನ್ನಿಸ್ತಾನೇ ಇದೆ.''

''ನೋಡಿ, ನಾನು ಒಬ್ಬಳು ಹುಡುಗಿ. ಅದೂ ನಮ್ಮ ಮಾವನ ಮನೇಲಿ ಇದ್ದುಕೊಂಡು ಓದುತ್ತಿರುವವಳು. ಒಬ್ಬ ಗಂಡು ಹುಡುಗನೊಡನೆ ಸ್ನೇಹ ಅಂತಂದ್ರೆ ಎಲ್ಲರೂ ಹುಬ್ಬೇರಿಸುತ್ತಾರೆ. ತಿಳುವಳಿಕೆ ಹೇಳ್ತಾರೆ. ನಮ್ಮಿಬ್ಬರಲ್ಲಿ ಇರೋ ಪರಿಚಯಕ್ಕೂ ಕೆಟ್ಟ ಹೆಸರು ಬರುತ್ತೆ. ಯಾವಾಗ್ಲೂ ಇಂತಹ ವಿಷಯದಲ್ಲಿ ಹುಡುಗೀರು ಎಚ್ಚರದಿಂದಿರಬೇಕು ಅಲ್ವಾ ?''

''ಏನ್ರೀ.... ನನ್ನನ್ನೇನು ಲೋಫರ್ ಅಂತ ತಿಳಿದುಕೊಂಡಿದೀರಾ ! ನನಗೂ ಘನತೆ ಗೌರವ ಎಲ್ಲಾ ಇದೆ. ಅದನ್ನು ಕಂಡೇ ನಿಮ್ಮ ಮಾವ ನನ್ನ ಜೊತೆ ನಿಮ್ಮನ್ನು ಧೈರ್ಯವಾಗಿ ಕಳಿಸಿದ್ದು. ನಾನು ಹಾಗೆಲ್ಲ ಯಾರ್‍ಯಾರ ಜವಾಬ್ದಾರಿಯನ್ನು ಹೊರೋನಲ್ಲ.'' ರಸ್ತೆ ಮಧ್ಯದಲ್ಲಿ ನಿಂತು ಎತ್ತರದ ಧ್ವನಿಯಲ್ಲಿ ನುಡಿದ.

''ಇದು... ರಸ್ತೆ. ಸುಮ್ಮನೇ ಅವರಿವರ ಗಮನಾನ ಯಾಕೆ ಸೆಳೆಯುತ್ತೀರಿ ! ನನ್ನ ಸ್ನೇಹ ತಾನೇ ನಿಮಗೆ ಬೇಕು ಅದು ಸಿಕ್ಕಿತು ಅಂತ ಇಟ್ಕೊಳ್ಳಿ. ಆದರೆ ಒಂದು ಮಿತಿ ಇರಲಿ. ಮುಂದೆ ಕೆಲಸ ಸಿಕ್ಕಿ ನೀವು ಬೇರೆ ಊರಿಗೆ ಹೊರಟು ಹೋಗಬಹುದು.ಆಗ ನಾವು ಒಬ್ಬರನ್ನೊಬ್ಬರು ಬಿಟ್ಟು ಇರುಕ್ಕೆ ಆಗಲಾರದಷ್ಟು ಅತಿ ಸ್ನೇಹಿತರಾಗಬಾರದು'' ಅವಳು ನಗುತ್ತಾ ನುಡಿದಾಗ ಅವನಿಗೆ ಇಷ್ಟವಾಗಲಿಲ್ಲ. ಆದರೂ ಸುಮಾಧಾನದಿಂದ ನುಡಿದ.

''ನನಗೂ ಅತೀ ಸ್ನೇಹ ಬೇಕಿಲ್ಲ. ಪಕ್ಕದ ಮನೆಯಲ್ಲಿದ್ದುಕೊಂಡು ಒಬ್ಬರ ಮುಖ ಕಂಡರೆ ಇನ್ನೊಬ್ಬರು ಮುಖ ತಿರುಗಿಸಿ ಒಳಗೆ ಹೋದರೆ ಏನು ಚೆನ್ನ ಸಲುಗೆಯಿಂದ ನಗುನಗುತ್ತಾ ಮಾತನಾಡಿಸುವಷ್ಟಾದರೂ ಇರಬೇಕು... ಅಲ್ವಾ ?''

''ಹೌದು, ತಪ್ಪೇನಿಲ್ಲ. ಆದರೆ ನಾನು ಹುಡುಗಿ. ನೀವು ಹುಡುಗ. ನಾವು ಏನೇ ಮಾತನ್ನಾಡಿದರೂ ಜನ ಅಪಾರ್ಥ ಕಲ್ಪಿಸುತ್ತಾರೆ. ತಿಳುವಳಿಕೆ ಹೇಳ್ತಾರೆ. ಇದು ಬೇಕು ಅಂತ ಅನ್ನಿಸುತ್ತಾ ?''

ಒಂದು ಗಳಿಗೆ ತಡೆದ ಅವಳು ಹೇಳುವುದು ನಿಜವೇ. ಆದರೆ ಬೇರೆ ಯಾರಿಗೋ ನಾವೇಕೆ ಹೆದರಬೇಕು?

''ನೋಡಿ ಮಿಸ್... ನೀವು ಹೇಳುವುದರಲ್ಲಿ ತಪ್ಪಿಲ್ಲ. ಆದರೆ ನಾನೆಂದೂ ಇಷ್ಟು ಯೋಚಿಸಿಲ್ಲ. ಈಗ ನಾವೂ ಬೆಳೆದುದೊಡ್ಡವರಾಗಿದೀವಿ. ಯಾವುದು ತಪ್ಪು, ಯಾವುದು ಸರಿ ಅಂತ ನಮಗೇ ತಿಳಿಯುವಾಗ, ಬೇರೆಯವರು ಏನಾದ್ರೂ ಅನ್ನಬಹುದು ಅಂತ ನಾವೇಕೆ ಹೆದರಬೇಕು ಅಲ್ವಾ ? ''

''ಓಹೋ.... ನೋಡಿ. ನಿಮ್ಮ ಹತ್ತಿರ ಮಾತಾಡ್ತಾ ಮನೆ ಬಂದಿದ್ದೇ ತಿಳಿಯಲಿಲ್ಲ, ಮತ್ತೆ ಯಾವಾಗ ಸಿಕ್ತೀರಿ ?'' ಹೆ ಹೆ ಹೆ ಎಂದ.

''ಹೀಗೆ ಯಾವತ್ತಾದ್ರೂ... ಆದರೆ ನನಗೋಸ್ಕರ, ನನ್ನ ಮಾತಿಗೋಸ್ಕರ ಅಲ್ಲಿ ಬಂದು ಕಾಯಬೇಡಿ.... ಪ್ಲೀಸ್..''

''ಯಾಕೆ ಅಂತ ಕೇಳಬಹುದಾ ?''

''ನನಗೋಸ್ಕರ ನೀವು ಬಂದು ಕಾಯುವುದು ನನಗೆ ಸರಿ ಹೋಗುಲ್ಲ... ನನಗೆ ಮುಜುಗರವಾಗುತ್ತೆ.''

''ಸ್ಸಾರಿ ... ಮಿಸ್'' ಅವನ ಮುಖ ಕೆಂಪಾಗಿತ್ತು. ಅವಳು 'ಬೈ ಬೈ' ಎಂದುಹೇಳಿದರೂ ತಿರುಗಿ ನೋಡದೇ ತನ್ನ ಮನೆಯೊಳಗೆ ತೂರಿಕೊಂಡ. ಅವಳು ತನ್ನಲ್ಲೇ ನಕ್ಕಳು.

ಹೀಗೆ ಮುಜುಗರದಿಂದ ಪ್ರಾರಂಭವಾದರೂ, ಸ್ನೇಹಿತರಾಗಿದ್ದರು. ಆಗ ಈಗ ಮಾತುಕತೆ ಆಡುತ್ತಿದ್ದರು. ಪೂರ್ಣಿಮಾ ಯಾವ ಸಂಕೋಚವಿಲ್ಲದೇ ಮಾತನಾಡುತ್ತಿದ್ದಳು. ಕೆಲವೊಮ್ಮೆ ಸಂಗೀತದ ಕ್ಲಾಸಿನ ನಂತರ ಇಬ್ಬರೂ ದೂರದ ಕಾಫಿಬಾರ್‌ಗೆ ಹೋಗಿ ಕಾಫಿ ಕುಡಿದು ಬರುತ್ತಿದ್ದರು. ಪ್ರತಿ ಸಲವೂ ಚಂದ್ರನೇ ಬಿಲ್ ಕೊಡುತ್ತಿದ್ದ. ಒಮ್ಮೆಯಾದರೂ ಅವಳು ಕೊಡುತ್ತೇನೆಂದು ಹೇಳಲಿಲ್ಲ. ಇವನು ಅದನ್ನು ಗಮನಿಸಿದರೂ, ಒಂದಲ್ಲ ಒಂದು ದಿನ ಈ ಬಾಕಿ ಹಣವೆಲ್ಲಾ ಸಂದಾಯವಾಗುತ್ತದೆ ಎಂದು ಆ ದಿನಕ್ಕಾಗಿ ಕಾಯುತ್ತಿದ್ದ. ಯಾವು ಯಾವುದೋ ಬೇರೆ ಬೇರೆ ವಿಷಯಗಳನ್ನು ಮಾತನ್ನಾಡಿದರೂ ಪೂರ್ಣಿಮಾ ತನ್ನ ಮನೆಯ ವಿಷಯಗಳನ್ನು ಹೇಳಿಕೊಳ್ಳುತ್ತಿರಲಿಲ್ಲ. ಕೇಳಿದರೆ, ಹೇಳಿಕೊಳ್ಳುವುದಕ್ಕೆ ಹೆಚ್ಚೇನೂ ಇಲ್ಲ ಎಂದು ಮಾತನ್ನು ಅಲ್ಲಿಗೇ ಮುಗಿಸುತ್ತಿದ್ದಳು.

ಪೂರ್ಣಿಮಾಳಿಗೆ ತನ್ನ ಮನೆಯ ವಿಷಯಗಳನ್ನು ಚಂದ್ರನೊಡನೆಯಾಗಲೀ, ಬೇರೆಯವರೊಡನೆಯಾಗಲೀ ಹೇಳಿಕೊಳ್ಳಲು ಇಷ್ಟವಿರಲಿಲ್ಲ. ಸರ್ಕಾರಿ ಕೆಲಸದಲ್ಲಿದ್ದ ಅವಳ ತಂದೆ ದತ್ತಾತ್ರೇಯ ಸಿಡುಕ ಅಂದ್ರೆ ಸಿಡುಕ. ಅದಕ್ಕೆ ಕಾರಣ ಹಣದ ಮುಗ್ಗಟ್ಟು, ಲೆಖ್ಖಾಚಾರವಾಗಿ ಖರ್ಚು ಮಾಡುವ ದಿಕ್ಕಿನಲ್ಲಿ ಅವನು ಜಿಪುಣನೆಂದೇ ಪರಿಗಣಿಸಲ್ಪಟ್ಟಿದ್ದ. ಹೆಂಡತಿ ಶ್ರೀಮತಿಗೆ ಗಂಡನ ಬಗ್ಗೆ ಅಸಮಾಧಾನ. ಮನಸ್ಸಿಗೆ ಬೇಕೆನಿಸಿದ್ದನ್ನು ಕೊಳ್ಳುವ ಆಸೆ ನೆರವೇರದಿದ್ದ ಮೇಲೆ ಈ ಬದುಕಿಗೆ ಅರ್ಥವೇ ಇಲ್ಲ ಅಂತ ಅಂದುಕೊಂಡಿದ್ದಳು.

ಈ ದಂಪತಿಗಳಿಗೆ ಇಬ್ಬರು ಹೆಣ್ಣುಮಕ್ಕಳು. ಮೊದಲನೆಯ ಮಗು ಹೆಣ್ಣು ಹುಟ್ಟಿದಾಗ ದತ್ತಾತ್ರಿ ಹೆಂಡತಿಯನ್ನೇ ದೂಷಿಸಿದ್ದ. ಮದುವೆಯ ಖರ್ಚಿಗೆ ದಾರಿ ಎಂದು ಹಂಗಿಸಿದ್ದ.

''ಯಾಕೆ ಹೀಗಂತೀರಿ ? ಹೆಣ್ಣಾದರೇನು ? ಗಂಡಾದರೇನು ? ಮಗು ನಮ್ಮದೇ ಅಲ್ವೇ ...'' ನೊಂದು ನುಡಿದಿದ್ದಳು ಶ್ರೀಮತಿ.

''ಹೆಣ್ಣು ಮಗು ನಮ್ಮದು ಹೇಗಾಗುತ್ತೆ ? ಹುಟ್ತಾನೆ ಕಂಡೋರ ಮನೆಗೆ ಸೇರುವ ವಸ್ತುವಾಗಿ ನಮ್ಮ ಮನೇಲಿ ಬೆಳೆಯುತ್ತೆ ಅಷ್ಟೇ.. ಖರ್ಚು ಮಾಡಿ ನಾವು ಬೆಳೆಸೋದು... ಮುಂದೆ ಒಂದು ದಿನ ಕಂಡೋರ ಮನೆ ಸೇರೋದು...''

''ಅದೇ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಪದ್ಧತಿ... ನಿಮ್ಮ ಹಾಗೆ ನಮ್ಮ ಅಪ್ಪನೂ ಹೀಗೆ ಅಂದುಕೊಂಡಿದ್ದರೆ, ನಾನು ನಿಮ್ಮ ಮನೆಗೆ ಬರುವ ಮಾತೇ ಇರುತ್ತಿರಲಿಲ್ಲ.''

''ನಿನ್ನನ್ನು ಮದುವೆ ಮಾಡಿಕೊಂಡಿದ್ದರಿಂದ ನನ್ನ ಖರ್ಚು ಹೆಚ್ಚಾಯಿತೇ ವಿನಃ ಕಡಿಮೆಯಾಗಲಿಲ್ಲ. ನಿನ್ನ ಮಗಳನ್ನು ಓದಿಸಿ ಕೆಲಸಕ್ಕೆ ಸೇರಿಸಿ, ಅವಳು ಕಡೇ ಪಕ್ಷ ಐದಾರು ವರ್ಷ ಸಂಪಾದನೆ ಮಾಡಿ ನನಗೆ ಕೊಡಬೇಕು... ಆಮೇಲೇ ಅವಳ ಮದುವೆ.''

''ಯಾಕೆ ? ಜೀವಮಾನವೆಲ್ಲಾ ನಿಮ್ಮ ಮನೇಲೇ ಇಟ್ಟುಕೊಳ್ಳಿ. ಜೀವಮಾನವೆಲ್ಲಾ ನಮ್ಮನ್ನು ನೋಡಿಕೊಳ್ಳುತ್ತಾಳೆ.''

''ರೇಗಿಸಬೇಡ ನನ್ನನ್ನ. ಯಾಕೆ ಎಲ್ಲರೂ ನನ್ನನ್ನು ಕರೆದು ಬುದ್ಧಿ ಹೇಳ ಬೇಕೂಂತಾನಾ? ''

''ನಿಮ್ಮನ್ನ ಈ ಜನ್ಮದಲ್ಲಿ ಬದಲಾಯಿಸುಕ್ಕಾಗಲ್ಲ...'' ತನ್ನಲ್ಲೇ ಹೇಳಿಕೊಂಡು ಸುಮ್ಮನಾದಳು. ಗಂಡನ ಅನಾದರಣೆಗೆ ಮೊದಲ ಮಗುವೇ ಒಳಗಾದರೆ, ಇನ್ನು ಮತ್ತೆ ಮಕ್ಕಳಾದರೇನು ಗತಿ ಎಂದು ಹೆದರಿದ್ದಳು. ಆರು ತಿಂಗಳ ಬಾಣಂತನ ಮುಗಿಸಿಕೊಂಡು ಗಂಡನ ಮನೆಗೆ ಬಂದರೂ, ಯಾವ ಖುಷಿಯೂ ಇರಲಿಲ್ಲ. ಮಗುವಿನ ಆಟಪಾಠ ಅವನ ಗಮನವನ್ನು ಸೆಳೆದಿತ್ತು. ಮಗುವನ್ನು ನಗುನಗುತ್ತಾ ಮಾತನಾಡಿಸಿ, ಆಟವಾಡಿಸಿದರೂ ಅವಳು ಅವನಾಡಿದ ಮಾತುಗಳನ್ನು ಮರೆತಿರಲಿಲ್ಲ.

''ಇಂಥ ತಂದೆ ಎಲ್ಲಾದರೂ ಇರ್ತಾರಾ ? ಮಕ್ಕಳು ನಮ್ಮೋವ್ರು ಅನ್ನೋ ಪ್ರೀತಿ ಇಲ್ಲದಿದ್ದರೆ, ಮುಂದೆ ಈ ಮಗುವಿನ ಭವಿಷ್ಯ ? ಈ ಭಯದಲ್ಲೇ ಮತ್ತೆ ಗರ್ಭಿಣಿಯಾದಳು. ಗಂಡನಿಗೆ ತಿಳಿಯದಂತೆ, ಲೇಡಿ ಡಾಕ್ಟರನ್ನು ಕಂಡು ಅಬಾರ್ಷನ್‌ಗೆ ಪ್ರಯತ್ನಿಸಿದಳು. ಆದರೆ ಸಫಲವಾಗಲಿಲ್ಲ. ಅವಳ ಭಯವನ್ನು ಕಂಡು, ಡಾಕ್ಟರು ದತ್ತಾತ್ರಿಯೊಡನೆ ಮಾತನಾಡಿ, ಈಗ ನಿಮ್ಮ ಪತ್ನಿಗೆ ನಿಮ್ಮ ಅಗತ್ಯ ಹೆಚ್ಚಿದೆ... ಈ ಭಯದಿಂದ ಅವರ ಆರೋಗ್ಯ ಕೆಡಬಹುದು.... ಈ ಹೆರಿಗೆ ನಿರಾತಂಕವಾಗಿ ಆಗಲಿ, ಮುಂದೆ ಮಕ್ಕಳಾಗದಂತೆ ಪ್ಲಾನ್ ಮಾಡಿದರಾಯ್ತು.''

ಡಾಕ್ಟರ ಈ ಸಲಹೆ ಅವನಿಗೆ ಹಿಡಿಸಲಿಲ್ಲ. ಹೆಂಡತಿಗೆ ಹಿಡಿ ಹಿಡಿ ಶಾಪ ಹಾಕುವಷ್ಟು ಕೋಪ ಬಂದಿತ್ತು. ಈಗಾಗಲೇ ಅಬಾಷನ್‌ಗೆ ಪ್ರಯತ್ನಿಸಿದ್ದಾಳೆ. ನಾನೇನಾದರೂ ಆಡಿದರೆ ಆತ್ಮಹತ್ಯೆಗೆ ಪ್ರಯತ್ನ ಪಟ್ಟರೆ ನನಗೇ ತೊಂದರೆ... ಕೇಸು ಗೀಸು ಅಂತ ಆಗಿ, ನೌಕರಿಯನ್ನು ಕಳೆದುಕೊಂಡರೆ ಮುಂದೇನು ಗತಿ ಎಂದು ಚಿಂತಿಸಿದ್ದ. ಆದರೂ ಈ ಗೊಂದಲಗಳಿಂದ ಅವನ ಮನದಲ್ಲಿ ತುಂಬಿಕೊಂಡಿದ್ದು ಕಹಿಯೇ. ಮೇಲು ನೋಟಕ್ಕೆ ಎಲ್ಲಾ ಸರಿಯಾಗಿದೆ ಅಂತೆನ್ನಿಸಿದ್ದರೂ, ಗಂಡನ ಸ್ವಭಾವವನ್ನು ತಿಳಿದ ಶ್ರೀಮತಿ ಒಳಗೊಳಗೇ ಹೆದರಿದ್ದಳು. ಅವಳ ಭಯಕ್ಕೆ ಪುಷ್ಟಿ ಕೊಡುವಂತೆ, ಅವಳು ಈ ಬಾರಿಯೂ ಹೆಣ್ಣು ಮಗುವನ್ನೇ ಹೆತ್ತಳು. ಗಂಡ ಮಗುವನ್ನು ನೋಡುಕ್ಕೆ ಬಂದಿರಲಿಲ್ಲ. ಯಾರು ಹೇಳಿ ಕಳಿಸಿದರೂ ಬಂದಿರಲಿಲ್ಲ. ಭಾವವನ್ನು ಕರೆಯಲು ಹೋದ ಕೇಶವನೊಡನೆ ಸರಿಯಾಗಿ ಮಾತನಾಡಿರಲಿಲ್ಲ. ಆದರೆ ಹೊರಡುವ ಮೊದಲು ಹೇಳಿದ್ದ.

''ಕಟ್ಟಿಕೊಂಡ ತಪ್ಪಿಗೆ, ಹೆಂಡತಿಯನ್ನು ಅವಳ ಮಕ್ಕಳನ್ನು ನೋಡಿಕೊಳ್ಳುವುದು ನನ್ನ ಕರ್ಮ... ಆದರೆ ಸಧ್ಯಕ್ಕೆ ನನಗೆ ರಜವಿಲ್ಲ. ಅವಳ ಬಾಣಂತನ ಮುಗಿದ ಮೇಲೆ ದಯವಿಟ್ಟು

ಕರೆತಂದು ಬಿಟ್ಟುಬಿಡಿ.... '' ಎಂಬ ಆದೇಶ ಕೊಟ್ಟಿದ್ದ.

ಎರಡು ಹೆಣ್ಣು ಮಕ್ಕಳು. ಹುಟ್ಟಿದ್ದು ತನ್ನ ತಪ್ಪಲ್ಲವೆಂದು ತಿಳಿದಿದ್ದರೂ, ಶ್ರೀಮತಿ ಗಂಡನೊಡನೆ ವಾದ ಮಾಡಲು ಇಷ್ಟಪಡಲಿಲ್ಲ, ಅದು ಪ್ರಯೋಜನವಿವಲ್ಲದ್ದು ಎಂದು ತಿಳಿದಿದ್ದಳು. ಆದರೂ ಗಂಡ ಯಾವಾಗ ಏನು ಮಾತನಾಡಿ ಬಿಡುವನೋ ಎಂದು ಅಂಜಿಕೊಂಡೇ ಇರುತ್ತಿದ್ದಳು. ದಿನೇ ದಿನೇ ಮಕ್ಕಳು ಬೆಳೆದು ದೊಡ್ಡವರಾಗುತ್ತಿದ್ದಂತೇ ಏನೋ ದಿಗಿಲು.

ಸ್ಕೂಲಿಗೆ ಸೇರಿಸುವಾಗಲೇ 'ಪೂರ್ಣಿಮಾ' ಎಂದು ಮಗಳಿಗೆ ಹೆಸರಿಟ್ಟಿದ್ದು. ಅದೂ ಹುಣ್ಣಿಮೆಯ ದಿನ ಹುಟ್ಟಿದವಳು ಎಂದು. ಮಗಳನ್ನು ಹತ್ತಿರದ ಸರಕಾರಿ ಪ್ರೈಮರಿ ಸ್ಕೂಲಿಗೆ ಸೇರಿಸಿದಾಗಲೂ ಅವಳು ಏನನ್ನೂ ಆಡಲಿಲ್ಲ. ಕೇಳಿದವರಿಗೆ ನಮಗೆ ಬೇರೆ ಬೇರೆ ಊರಿಗೆ ವರ್ಗವಾಗುತ್ತಲ್ಲ... ಖಾಸಗಿ ಶಾಲೆ ಆದರೆ ಕಷ್ಟವಾಗುತ್ತೆ. ಯಾವುದೋ ಒಂದು ಕನ್ನಡ ಮೀಡಿಯಂ ಆದರೇನು , ಇಂಗ್ಲೀಷು ಮೀಡಿಯಂ ಆದರೇನು ? ವಿದ್ಯಾಭ್ಯಾಸ ಮುಖ್ಯ ಎಂದು ಎತ್ತಲೋ ನೋಡುತ್ತ ಹೇಳುತ್ತಿದ್ದಳು. ಅಕ್ಕಪಕ್ಕದವರು ತಮ್ಮ ಸರೀಕರು ತಮ್ಮ ಮಕ್ಕಳನ್ನು ಖಾಸಗಿ ಶಾಲೆಗಳಿಗೆ, ಆಟೋಗಳಲ್ಲಿ ವ್ಯಾನುಗಳಲ್ಲಿ ಕಳಿಸುವುದನ್ನು ಕಂಡಾಗ ಅಲ್ಲೋಲ ಕಲ್ಲೋಲವಾಗುತ್ತಿದ್ದುದು ನಿಜ. ಆದರೆ ಮರೆತೂ ತನ್ನ ಆಸೆಯನ್ನು ವ್ಯಕ್ತಗೊಳಿಸುತ್ತಿರಲಿಲ್ಲ.

ಪೂರ್ಣಿಮಗಳಿಗೆ ಚೆನ್ನಾಗಿ ತಿಳುವಳಿಕೆ ಬರುವಷ್ಟರಲ್ಲಿ ಅವಳಾಗಲೇ ಮೂರನೇ ತರಗತಿಯಲ್ಲಿದ್ದಳು. ತಂಗಿಯನ್ನು ಒಂದನೇ ಕ್ಲಾಸಿಗೆ ಸೇರಿಸಲಾಗಿತ್ತು. ತಂಗಿಗೆ 'ನಿರ್ಮಲಾ' ಎಂದು ಹೆಸರನ್ನು ಸೂಚಿಸಿದವಳು ಅವಳೇ. ವಯಸ್ಸಿಗೆ ತಕ್ಕಂತೆ ಅನೇಕ ಸಂದೇಹಗಳು ಮೂಡುತ್ತಿದ್ದವು. ತಾಯಿಯನ್ನು ಆ ಬಗ್ಗೆ ಕೇಳಿದರೆ 'ನಿಮ್ಮಪ್ಪನಿಗೆ ಅದೆಲ್ಲ ಇಷ್ಟವಿಲ್ಲ' ಎಂದು ಮೊಟಕು ಉತ್ತರವನ್ನು ಕೊಡುತ್ತಿದ್ದಳು. ನಮ್ಮ ಫೀಸು, ಬಟ್ಟೆಗಾಗಿ ಖರ್ಚು ಮಾಡಲು ಅಪ್ಪನ ಬಳಿ ಹಣವಿಲ್ಲವೆಂದೇ ತಿಳಿದಿದ್ದಳು. ಪ್ರತಿಯೊಂದಕ್ಕೂ ಅಮ್ಮ ಬಹಳ ಲೆಖ್ಖಾಚಾರವಾಗಿ ಖರ್ಚು ಮಾಡುವುದನ್ನು ಕಂಡಿದ್ದಳು. ಕೇಳಿದರೆ, 'ನಿಮ್ಮಪ್ಪ ಇಷ್ಟೇ ಕೊಟ್ಟಿರೋದು' ಎನ್ನುತ್ತಿದ್ದಳು. ಹೈಸ್ಕೂಲಿಗೆ ಬಂದರೂ, ಅಪ್ಪನ ಎದುರು ನಿಂತು ಅದು ಬೇಕು ಇದು ಬೇಕು ಎಂದು ಕೇಳುವ ಆಸೆಯನ್ನು ಬೆಳೆಸಿಕೊಳ್ಳಲಿಲ್ಲ. ಆ ಧೈರ್ಯವೂ ಬರಲಿಲ್ಲ. ಪಕ್ಕದ ಮನೆಯಲ್ಲಿಯೇ ಒಬ್ಬರು ಸಂಗೀತ ಟೀಚರ್ ಇದ್ದರು. ಅವರ ಪ್ರೋತ್ಸಾಹದಿಂದ, ಸಹಾಯದಿಂದ ಇವಳು ಸಂಗೀತವನ್ನು ಕಲಿತಳು. ಗಂಡ ಫೀಸು ಕೊಟ್ಟು ಸಂಗೀತ ಕಲಿಸುವುದಿಲ್ಲವೆನ್ನುವುದನ್ನು ಶ್ರೀಮತಿ ನಿಸ್ಸಂಕೋಚವಾಗಿ ಹೇಳಿದ್ದಳು.

''ಹುಡುಗಿಯ ಕಂಠ ತುಂಬಾ ಚೆನ್ನಾಗಿದೆ. ನೀವು ಕಲಿಸಿಕೊಟ್ಟ ದೇವರ ನಾಮಗಳನ್ನೇ ಇಷ್ಟು ಚೆನ್ನಾಗಿ ಹಾಡ್ತಾಳೆ. ಬಹುಮಾನಗಳನ್ನು ಪಡೆದಿದ್ದಾಳೆ ಎಂದಮೇಲೆ ಇಂಥ ಹುಡುಗಿಗೆ ನಾವುಗಳು ಪ್ರೋತ್ಸಾಹವನ್ನು ಕೊಡಲೇಬೇಕು. ನಾನೇ ಸಂಗೀತವನ್ನು ಕಲಿಸಿಕೊಟ್ಟು ಪರೀಕ್ಷೆಗೂ ಕಟ್ಟಿಸುತ್ತೇನೆ. ನೀವು ಆ ಬಗ್ಗೆ ಚಿಂತಿಸಲೇ ಬೇಡಿ ಎಂದು ಆಶ್ವಾಸನೆ ನೀಡಿದ್ದಳು. ಆಕೆಯ ಪರಿಶ್ರಮದಿಂದ, ಇವಳು ಶ್ರದ್ಧೆಯಿಂದ ಕಲಿತು, ಜೂನಿಯರ್ ಪರೀಕ್ಷೆಯಲ್ಲಿ ಫಸ್ಟ್ ಕ್ಲಾಸ್‌ನಲ್ಲಿ ಪಾಸಾದಳು. ಈ ಸಂತೋಷದ ಸುದ್ದಿಯನ್ನು ಗಂಡನಿಗೆ

ತಿಳಿಸಬೇಕೆಂದುಕೊಂಡರೂ, ವಿಚಿತ್ರಮನುಷ್ಯ, ಏನು ಆಡಿ ಬಿಡುತ್ತಾನೋ ಎಂದುಕೊಂಡು ಸುಮ್ಮನಾಗಿದ್ದಳು. ಸೀನಿಯರ್ ತರಗತಿಯ ಪಾಠಗಳನ್ನು ಪ್ರಾರಂಭ ಮಾಡಿದ್ದರು. ಅದೇ ವೇಳೆಗೆ ಬೇರೆ ಊರಿಗೆ ವರ್ಗವಾಯಿತು. ಪಾಠಗಳು ಅಷ್ಟಕ್ಕೇ ನಿಂತು ಹೋಯಿತು.''

ಆನಂತರ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಫಸ್ಟ್‌ಕ್ಲಾಸ್‌ನಲ್ಲಿ ಪಾಸಾದಾಗ, ಶ್ರೀಮತಿ ಮಗಳನ್ನು ತಬ್ಬಿಕೊಂಡು ಅತ್ತಿದ್ದಳು. ''ಅಂತೂ ನನ್ನ ಮಾನವನ್ನು ಉಳಿಸಿದೆ ಪೂರ್ಣಿಮಾ. ಹಾಗೆ ಸರಕಾರಿ ಶಾಲೆಗೆ ಗೌರವವನ್ನು ತಂದಿದೀಯೆ. ಹೀಗೆ ಕಾಲೇಜು ಪರೀಕ್ಷೆಗಳಲ್ಲೂ ಚೆನ್ನಾಗಿ ಪಾಸುಮಾಡಿ, ಒಳ್ಳೆಯ ಕೆಲಸವನ್ನು ಸಂಪಾದಿಸಿ, ನಿನ್ನ ಕಾಲ ಮೇಲೆ ನೀನು ನಿಲ್ಲುವಂತಾದರೆ ಸಾಕು. ನಿನ್ನ ಅಪ್ಪನನ್ನು ಮಾತ್ರ ನೀನು ಯಾವುದಕ್ಕೂ ಅವಲಂಬಿಸಬಾರದು.''

''ಅಪ್ಪಂಗೆ ಈಗ ಖುಷಿಯೂ ಆಗಿರಬಹುದು ನೆಮ್ಮದಿಯೂ ಸಿಕ್ಕಿರಬಹುದು ಅಲ್ವಾ?''

''ಖುಷಿ ಆಗದೆ ಇರುತ್ತಾ ? ನಿನ್ನ ಹಾಗೆ ನಿರ್ಮಲಳೂ ಅವಳ ಜವಾಬ್ದಾರಿಯನ್ನು ಅವಳು ತಿಳಿದುಕೊಂಡು ಮುಂದೆ ಬಂದರೆ ಸಾಕು. ಹೆಣ್ಣು ಮಕ್ಕಳನ್ನು ಹೆತ್ತು ನಾನೇನೋ ತಪ್ಪು ಮಾಡಿದೆ ಅನ್ನೋ ಭಾವ ಇಳಿಯುತ್ತೆ.'' ಶ್ರೀಮತಿಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು.

''ಅವಳು ಇನ್ನು ಓದಿದ್ದು ಸಾಕು. ಕಾಲೇಜು ಅಂದ್ರೆ ಫೀಸು, ಪುಸ್ತಕ ಅಂತ ಸಿಕ್ಕಾಪಟ್ಟೆ ಖರ್ಚಾಗುತ್ತೆ'' ದತ್ತಾತ್ರಿ ಗುಡುಗಿದಾಗ ಪೂರ್ಣಿಮಾ ನಡುಗಿ ಹೋಗಿದ್ದಳು. ಶ್ರೀಮತಿ ಮಗಳ ಪರವಹಿಸಿ ಮಾತನಾಡಿದಳು.

ಎಸ್.ಎಸ್.ಎಲ್.ಸಿ.ಗೆ ಈ ಕಾಲದಲ್ಲಿ ಏನು ಬೆಲೆ ಇದೆ. ಬಿ.ಕಾಂನ್ನಾದರೂ ಮಾಡಿಕೊಂಡರೆ ಬ್ಯಾಂಕ್‌ನಲ್ಲಿ ಕೆಲಸ ಸಿಗುತ್ತೆ. ಇದುವರೆಗೂ ಎಂದಾದರೂ ನಿಮಗೆ ಹೆಚ್ಚು ಖರ್ಚಾಗಿದೆಯಾ ? ಹಾಗೇ ಮುಂದೇನೂ ಆಗುತ್ತೆ. ದೇವರಿದಾನೆ. ದಯವಿಟ್ಟು ಓದನ್ನು ಮಾತ್ರ ನಿಲ್ಲಿಸಬೇಡಿ.

''ಏನು ಬೇಕಾದ್ರೂ ಮಾಡಿಕೊಳ್ಳಿ. ನನ್ನನ್ನ ಮಾತ್ರ ಖರ್ಚಿಗೆ ಎಳೆಯಬಾರದು. ಕೇಳಿ ಕೇಳಿದಷ್ಟು ಕೊಟ್ಟು ಬಿಡೋಕೆ ನಾನೇನು ಹಣದ ಮರವನ್ನು ಬೆಳೆಸಿಲ್ಲ.''

''ನನಗೂ ಗೊತ್ತು. ನಮ್ಮ ಮನೇಲಿ ಹಣದ ಮರವಿಲ್ಲ ಅಂತ. ಯಾವ ಖಜಾನೆಯೂ ಇಲ್ಲಾಂತಲೂ ಗೊತ್ತು. ನನ್ನ ಮಕ್ಕಳ ಓದಿಗಾಗಿ ನಿಮ್ಮ ಹತ್ತಿರ ಅನಾವಶ್ಯಕ ಖರ್ಚು ಮಾಡಿಸುವ ಆಸೆ ನನಗಿಲ್ಲ ತಿಳೀತೇ ?''

ಏನು ? ಮಗಳು ಕಾಲೇಜು ಮೆಟ್ಟಿಲನ್ನು ಇನ್ನು ಹತ್ತಿಲ್ಲ. ನಿನ್ನ ಪೊಗರು ಜಾಸ್ತಿಯಾಗಿ ಹೋಗಿದೆ. ಹುಶಾರ್ ನೀನು, ನಿನ್ನ ಮಕ್ಕಳು ಒಂದು, ನಾನೇ ಒಂದು ಅನ್ನೋ ತರಹ ಮಾತಾಡ್ತೀಯಲ್ಲ. ನಿಮ್ಮಣ್ಣ ನನಗೆ ವರದಕ್ಷಿಣೆಯನ್ನೇನೂ ಕೊಟ್ಟಿಲ್ಲ. ಇದೆಲ್ಲಾ ನನ್ನ ಸ್ವಂತ ಸಂಪಾದನೆ. ಖರ್ಚು ಮಾಡ್ತೀನೋ ಬಿಡ್ತೀನೋ ಅದು ನನ್ನ ವಿಷಯ. ನಿನ್ನ ಮಗಳು ಇನ್ನು ಮೆಜಾರಿಟಿಗೆ ಬಂದಿಲ್ಲ. ಅವಳು ನಾನು ಹೇಳಿದ ಹಾಗೆ ಕೇಳಿದರೆ ಸರಿ , ಇಲ್ಲದಿದ್ದರೆ ಮನೆಯಿಂದಾಚೆಗೆ ದಬ್ಬಿಬಿಡ್ತೀನಿ.''

''ಹೋಗಲಿ ಬಿಡಮ್ಮ. ನನಗೋಸ್ಕರ ನೀವುಗಳ್ಯಾಕೆ ಕಾದಾಡ್ತೀರಿ ? ನಿಮ್ಮ ಈ

ಜಗಳದಿಂದ ಓದೋ ಆಸೆಯೇ ಹೊರಟು ಹೋಯ್ತು.''

''ನೋಡಿದ್ಯಾ ! ನೋಡಿದ್ಯಾ ? ಹೇಗೆ ತಯಾರು ಮಾಡಿದೀಯ ನಿನ್ನ ಮಗಳನ್ನ... ನಾಳೆ ನಮ್ಮಪ್ಪ ಓದಿಸಲಿಲ್ಲ ಅನ್ನೋ ಪುಕಾರನ್ನು ಊರತುಂಬಾ ಹರಡೋದು. ಮೊದಲೇ ನಾನು ಜಿಪುಣಾಗ್ರೇಸರ. ನನಗೇನೇನು ಆಸೆಗಳಿದ್ದವು ಅಂತ ನಿಮಗ್ಯಾರಿಗಾದ್ರೂ ಗೊತ್ತಾ? '' ತಾಯಿ ಮಗಳು ಮುಖ ಮುಖ ನೋಡಿಕೊಂಡರು. ಶ್ರೀಮತಿಗೆ ಅವನ ಆಸೆ ಏನು ಎನ್ನುವುದು ತಿಳಿದಿತ್ತು. ಅದನ್ನು ಮಗಳ ಎದುರಿಗೆ ಗಂಡ ಆಡದಿರಲಿ ಎಂದುಕೊಂಡಳು. ನೀನು ಹೋಗು ಎನ್ನುವಂತೆ ಮಗಳಿಗೆ ಸಂಜ್ಞೆಯನ್ನು ಮಾಡಿ ಇನ್ನೊಬ್ಬ ಮಗಳನ್ನು ಕರೆದಳು.

''ಏ ನಿಮ್ಮೀ... ಬಾರೇ ಸ್ನಾನ ಮಾಡು ಬಾ. ಸ್ಕೂಲಿಗೆ ಹೊತ್ತಾಗುತ್ತೆ''ಎಂದು ಹೇಳಿ, ಗಂಡನ ಬಳಿ ಬಂದು ಕೈ ಮುಗಿದಳು.

''ದಯವಿಟ್ಟು ಹಳೇ ಮಾತುಗಳನ್ನು ಮಕ್ಕಳ ಎದುರಿಗೆ ಆಡಬೇಡಿ. ಪೂರ್ಣಿಮಾ ಮದುವೆ ವಯಸ್ಸಿಗೆ ಬಂದಿರುವ ಹುಡುಗಿ... ಅವಳನ್ನು ಗಂಡು ಹುಡುಗನಂತೆ ಓದಿಸಿದರೆ ಕೆಲಸಕ್ಕೆ ಸೇರಿ ಸಂಪಾದಿಸುತ್ತಾಳೆ. ನನಗೆ ಆ ನಂಬಿಕೆ ಇದೆ..''

''ನಿನ್ನ ನಂಬಿಕೆ ಮನೆ ಮುಂಡಾ ಮೋಚ್ತು. ಕೆಲಸಕ್ಕೆ ಸೇರಿ ಸಂಪಾದಿಸಿದರೂ, ಮದುವೆ ಮಾಡಬೇಡವೇ ? ಮದುವೆಗೆ ಅಂತ ದುಡ್ಡು ಕೂಡಿಡ್ತಾ ಇದೀನಿ. ನಾನು ಜಿಪುಣನಾಗಿರಬಹುದು, ಕೆಟ್ಟವನಿರಬಹುದು, ಆದರೆ ಹೆಣ್ಣು ಮಕ್ಕಳ ಸಂಪಾದನೆಯಲ್ಲಿ ಜೀವನ ನಡೆಸಬೇಕು ಅನ್ನೋ ಆಸೆ ನನಗಿಲ್ಲ. ಕೆಲಸ ಸಿಗದಿದ್ದರೆ, ಓದಿದ್ದು ದಂಡವಾಗುತ್ತೆ. ಅದಕ್ಕೇ ನಾನು ಓದಿದ್ದು ಸಾಕು ಅಂತ ಅಂದಿದ್ದು.''

''ಮದುವೆಗೆ ಅವಾಂತರವೇನಿಲ್ಲ. ಈ ಕಾಲದಲ್ಲಿ ಒಂದು ಡಿಗ್ರಿಯಾಗಿದ್ದರೆ ಸುಲಭವಾಗಿ ಗಂಡು ಸಿಗೋದು. ಕೆಲಸಕ್ಕೆ ಸೇರಿ ಒಂದಿಷ್ಟು ಒಡವೆ ವಸ್ತ್ರಗಳನ್ನು ತೆಗೆದುಕೊಳ್ಳಲಿ ಅಂತ ಆಸೆ.''

''ಅಂದ್ರೇನು ? ಒಡವೆ ವಸ್ತ್ರಗಳನ್ನು ನಾನು ಕೊಡಿಸ್ತಿಲ್ಲ ಅಂತ ಹಂಗಿಸ್ತಿದೀಯ... ''

''ಎಲ್ಲಾದಕ್ಕೂ ತಪ್ಪರ್ಥ ಕಲ್ಪಿಸ್ತೀರಿ. ಹಾಗೆಲ್ಲಿ ಅಂದೆ ನಾನು ? ನಿಮಗೆ ತೊಂದರೆ ಯಾಗದೆ ಇರಲಿ ಅಂತ ನಾನಾಗಲೀ, ನನ್ನ ಮಕ್ಕಳಾಗಲೀ ಏನನ್ನೂ ಕೇಳುಲ್ಲ. ಇದುವರೆಗೂ, ನಮ್ಮ ಪ್ಪನ ಮನೇಲಿ ಕೊಟ್ಟಿದ್ದರಲ್ಲೇ ಕಾಲ ಹಾಕಿದ್ದಾಯ್ತು...''

''ಸರಿ ಸರಿ ಇದೊಂದು ಬಾಕಿ ಇತ್ತು. ನಮ್ಮ ಮನೆ ಖರ್ಚು ವೆಚ್ಚವನ್ನೆಲ್ಲಾ ನಿಮ್ಮ ಅಪ್ಪನ ಮನೆಯವರೇ ನೋಡಿಕೊಳ್ತಿದಾರಲ್ಲ... ನಂದೇನಿದೆ ! ಏನಾದ್ರೂ ಮಾಡಿಕೊಳ್ಳಿ. ನೀನುಂಟು, ನಿನ್ನ ಮಕ್ಕಳುಂಟು. ಓದಿಸು.. ಕೆಲಸಕ್ಕೆ ಸೇರಿಸು... ಮದುವೆ ಮಾಡು, ಮಾಡದೆ ಇರು, ನಾನು ಇನ್ನು ಮೇಲೆ ನಿಮ್ಮಗಳ ಮಾತಿಗೇ ಬರುಲ್ಲ...'' ಅವನು ಅವಡುಗಚ್ಚಿ ಚಪ್ಪಲಿ ಮೆಟ್ಟಿ ಮನೆಯಿಂದಾಚೆ ಹೊರಟು ಹೋದ. ಶ್ರೀಮತಿ ಬೇಸರಿಸಿದರೂ ಹೆದರಿರಲಿಲ್ಲ. ಇದೇನು ಹೊಸದಲ್ಲ.

ಪೂರ್ಣಿಮಾ ಪಿ.ಯು.ಸಿ. ಪರೀಕ್ಷೆಯ ನಂತರ ಅಜ್ಜಿಯ ಮನೆಗೆ ಬಂದಿದ್ದಳು. ಆಗ ಮತ್ತೆ ಅವಳ ವಿದ್ಯಾಭ್ಯಾಸದ ಬಗ್ಗೆ ಚರ್ಚೆ ಎದ್ದಿತು. ಕೇಶವ ತಕ್ಷಣವೇ ಉತ್ತರಿಸಿದ್ದ.

'ಪೂರ್ಣಿಮಾ ನಮ್ಮ ಮನೆಯಲ್ಲಿದ್ದುಕೊಂಡು ಓದಲಿ. ಅವಳ ವಿದ್ಯಾಭ್ಯಾಸದ ಖರ್ಚು ನನಗಿರಲಿ.'

''ನಿಮ್ಮ ಭಾವ ಏನಂತಾರೋ.... ಮೊದಲೇ ಏನೇನೋ ಮಾತನಾಡ್ತಾರೆ.'' ಶ್ರೀಮತಿ ಅನುಮಾನ ವ್ಯಕ್ತಪಡಿಸಿದ್ದಳು.

''ನಾನು ಭಾವನ ಹತ್ತಿರ ಮಾತಾಡ್ತೀನಿ'' ಎಂದಿದ್ದ. ತಾಯಿಯ ಕನಕಾಭಿಷೇಕದ ಸಮಯದಲ್ಲಿ ಒಂದು ದಿನದ ಮಟ್ಟಿಗೆ ಬಂದಿದ್ದ. ಭಾವನೊಡನೆ, ಸಮಯ ನೋಡಿ, ಈ ವಿಷಯವನ್ನು ಪ್ರಸ್ತಾಪಿಸಿದ್ದ. ಮೊದಲಿಗೆ ಅನಾವಶ್ಯಕ ಗೊಣಗಾಡಿದರೂ, ನಂತರ ತನ್ನ ಒಪ್ಪಿಗೆಯನ್ನು ಕೊಟ್ಟಿದ್ದ. ಹೀಗೆ ಪೂರ್ಣಿಮಾ ಇಲ್ಲಿಯ ಕಾಲೇಜೊಂದರಲ್ಲಿ ಬಿ.ಕಾಂ. ಕೋರ್ಸಿಗೆ ಸೇರಿಕೊಂಡಿದ್ದಳು. ಈಗ ಸಂಗೀತದ ಕ್ಲಾಸು ಪ್ರಾರಂಭವಾಗಿತ್ತು. ಅವಳು ಸಂಗೀತಾಭ್ಯಾಸಕ್ಕೆ ಕುಳಿತರೆ ಮನೆಯವರೆಲ್ಲಾ ಆಲಿಸುತ್ತಿದ್ದರು. ಚಂದ್ರ ತಂಗಿಯನ್ನು ಹೀಯಾಳಿಸುತ್ತಿದ್ದ.

''ನೀನೂ ಇದೀಯ. ಸರಿಗಮ ಕೂಡಾ ಸರಿಯಾಗಿ ಹೇಳುಕ್ಕೆ ಬರುಲ್ಲ''

''ಎಲ್ಲಿ ಹೇಳು... ನಿಂಗೆ ಬರುತ್ತಾ ಹೇಳಿ ತೋರಿಸು....'' ತಾನೂ ಸವಾಲೆಸೆಯುತ್ತಿದ್ದಳು.

''ನಾನೂ ಅವಳ ತರಹ ಅಭ್ಯಾಸ ಮಾಡಿದರೆ, ನಾಲ್ಕು ದಿನಗಳಲ್ಲಿ ಕಲಿತು ಬಿಡ್ತೀನಿ. ಆದರೆ ನನಗೆ ಒಬ್ಬನಿಗೇ ಅಭ್ಯಾಸ ಮಾಡುಕ್ಕೆ ಕಷ್ಟವಾಗುತ್ತೆ. ಅವಳ ಜೊತೆ ಕೂತು ಅಭ್ಯಾಸ ಮಾಡಿದರೆ .... ನೀನೂ ಬರ್ತೀಯಾ ?''

''ನಾನಂತೂ ಬರುಲ್ಲಪ್ಪ.. ಅವಳನ್ನೇನು ಕೇಳೋದು ?'' ಹುಂ.... ಎನ್ನುತ್ತಾ ಬೆನ್ನು ತಿರುಗಿಸಿ ನಡೆದಿದ್ದಳು. ಒಂದೆರಡು ದಿನಗಳ ನಂತರ ಇದೇ ವಿಷಯವಾಗಿ ಪೂರ್ಣಿಮಾಳೊಡನೆ ಮಾತನಾಡಿದ್ದ.

''ನೀವೂ ನಮ್ಮ ಮನೆಗೇ ಬಂದು ಕುಳಿತು ಅಭ್ಯಾಸ ಮಾಡಿದರೆ ಚಂಪಿಗೂ ಅಭ್ಯಾಸವಾಗುತ್ತೆ... ಹಾಗೇ ನನಗೂ... ಬರುಕ್ಕಾಗುತ್ತಾ ?''

''ನಮ್ಮ ಅಜ್ಜೀನ ಕೇಳಿ ಹೇಳ್ತೀನಿ. ಅವರು ಹುಂ... ಅಂದ್ರೆ ಖಂಡಿತಾ ಬರ್ತೀನಿ. ಆದರೆ... ನಿಮ್ಮ ತಾಯಿ.... ? ''

''ನಮ್ಮ ತಾಯಿಗೆ ಏನೂ ಗೊತ್ತಾಗುಲ್ಲ ಬಿಡಿ. ಆದರೆ ಚಂಪಿ ಒಪ್ಪಬೇಕು. ಅವಳದ್ದೇ ತಕರಾರು.''

''ಅವಳಿಗೆ ನಿಮ್ಮ ಮೇಲೆ ಅಸೂಯೆ. ನೀವು ಇಷ್ಟು ಚೆನ್ನಾಗಿ ಹಾಡ್ತೀರಲ್ಲ ಅದಕ್ಕೆ...'' ಪೂರ್ಣಿಮಾ ಮುಕ್ತವಾಗಿ ನಕ್ಕಳು.

ಹೊಸದರಲ್ಲಿ ನನಗೂ ಹೀಗೆ ಅನ್ನಿಸುತ್ತಿತ್ತು... ನಾನು ಚಂಪಕಳ ಹತ್ತಿರ ಮಾತನ್ನಾಡ್ತೀನಿ.

''ಥ್ಯಾಂಕ್ಸ್'' ಎಂದು ಹೇಳಿ ಸುಮ್ಮನೇ ನಕ್ಕು ನುಡಿದ. ''ಈಚೆಗೆ ನೀವು ಕುಂಟೆಬಿಲ್ಲೇ ಆಟವನ್ನೇ ಆಡುತ್ತಿಲ್ಲ... ಯಾಕೆ ? ''

''ಯಾಕೆ ಅಂದ್ರೆ ! ಆಗ ರಜವಿತ್ತು ಆಡಿದೆ, ಈಗ ಬೇಕಾದಷ್ಟು ಓದೋದಿರುತ್ತೆ. ಕುಂಟೆಬಿಲ್ಲೇ ಆಡಿದ್ರೆ ಅಜ್ಜಿ ಮಾವ ಸುಮ್ಮನಿರ್ತಾರಾ ? ''

''ಹಾಗಾದ್ರೆ ಮತ್ತೆ ರಜ ಬಂದರೆ ಆಡ್ತೀರಾ ?''

''ಈಗ ಡಿಗ್ರೀಲಿ ಓದ್ತಾ ಇರೋಳು ನಾನು... ಹಾಗೆಲ್ಲ ಆಟ ಆಡಿದ್ರೆ ಅಜ್ಜಿ ಖಂಡಿತಾ ಬೈತಾರೆ. ...''

''ಆದ್ರೂ ಒಂಥರ, ನಿಮ್ಮ ಆಟ ನೋಡ್ತಾ ಇದ್ದರೆ... ಒಂಥರಾ ಚೆನ್ನಾಗಿರ್ತಿತ್ತು'' ಪೂರ್ಣಮಾಳ ಮುಖ ನಾಚಿಕೆಯಿಂದ ಕೆಂಪಾಗಿತ್ತು.

'' ಅಂದ್ರೇ ಕದ್ದು ಮುಚ್ಚಿ ಹುಡುಗಿಯರ ಆಟಾನ ನೋಡ್ತೀರಾ''

''ನಾನೊಬ್ನೇ ಅಲ್ಲ... ರಸ್ತೆಯೋರೆಲ್ಲಾ ನೋಡಿದಾರಲ್ಲ...''

''ಸುಮ್ಮನೆ... ಟೈ ಪಾಸ್ ಮಾಡೋಕೆ ಆಡಿದೆ... ''

''ಏನೋ ಅಂತೂ , ಆಟ ನೋಡೋಕೆ ಮಾತ್ರ ಮಜವಾಗಿರ್ತಿತ್ತು. ಚಿಕ್ಕ ಹುಡುಗಿಯ ತರಹ ಕಾಣ್ತಿದ್ರಿ...'' ಅವನು ಮೆಚ್ಚುಗೆಯ ಮಾತುಗಳನ್ನಾಡಿದ. ಅವಳಿಗೆ ಖುಷಿಯಾಗಿತ್ತು... ಒಂದು ಗಳಿಗೆ ಸುಮ್ಮನಿದ್ದು ಕೇಳಿದಳು.

''ನಿಮ್ಮ ತಂಗಿ ಯಾವ ಆಟವನ್ನು ಆಡುಲ್ವ ?...''

''ಆಡ್ತಾಳೆ...ಆಡ್ತಾಳೆ. ಅಟಕ್ಕೆ ಮೊದಲು ಜಗಳ ಆಡ್ತಾಳೆ. ಬರೀ ಮುಂಗೋಪಿ... ನಿಮ್ಮ ಹಾಗೆ ನಗು ನಗುತಾ ಇರೋದೇ ಕಮ್ಮಿ...''

''ತಮಾಷೆ ಮಾಡ್ತಿದೀರಾ? ...''

''ನಾನ್ಯಾಕೆ ತಮಾಷೆ ಮಾಡಲಿ ? ನಿಮ್ಮನ್ನು ಕಂಡ ದಿನದಿಂದ, ನಿಮ್ಮ ನಗು ಮುಖವೇ ನನ್ನ ಕಣ್ಣೆದುರಿಗೆ ಬರುತ್ತೆ...''

''ಮಿಸ್ಟರ್ ಚಂದ್ರ ಏನೇನೋ ಆಡ್ತಿದೀರಿ... ನೀವ್ಯಾಕೆ ಸದಾ ನನ್ನ ಬಗ್ಗೆ ಯೋಚಿಸಬೇಕು ?''

''ಅರೇ... ಇದೊಳ್ಳೆ ಚೆನ್ನಾಯ್ತಲ್ಲ ... ಯಾವುದಾದರೂ ಚೆನ್ನಾಗಿರೋ ವಸ್ತು ಬಗ್ಗೆ ಯೋಚಿಸಿದರೆ ಅದು ತಪ್ಪಾ...?''

''ಯಾವುದ್ರೀ ಅದು ವಸ್ತು ? ನಾನು ವಸ್ತು ತರಹ ಕಾಣ್ತೀನಾ. ನಿಮಗೆ? '' ಹುಸಿಕೋಪದಿಂದ ಪ್ರಶ್ನಿಸಿದಳು.

''ನೀವು ಹುಡುಗಿ... ನನಗೂ ಗೊತ್ತು. ನಿಮ್ಮ ಮುಖ ಸುಂದರವಾಗಿದೆ. ಅದನ್ನೇ ಹಾಗೆ ಹೇಳಿದೆ... ಕೋಪ ಬಂತೇನ್ರಿ.''

''ಹುಂ. ಸ್ವಲ್ಪ ಕೋಪ ಬಂತು.. ನನ್ನ ಪರ್ಮಿಷನ್ ಇಲ್ಲದೇ ನನ್ನ ಬಗ್ಗೆ ನೀವೇಕೆ ಯೋಚಿಸಬೇಕು ...?''

''ಸರಿಯಪ್ಪಾ... ಈಗ ಪರ್ಮಿಷನ್ ಕೇಳ್ತೀನಿ ಕೊಡ್ತೀರಾ ?''

''ಖಂಡಿತಾ ಇಲ್ಲ... ನಿಮಗೆ ದಂಡ ವಿಧಿಸಲೇ ಬೇಕು. ನಾನು ನಿಮಗಾಗಲೀ, ನಿಮ್ಮ ತಂಗಿಗಾಗಲೀ ಸಂಗೀತಾಭ್ಯಾಸ ಮಾಡಿಸುಲ್ಲ.'' ಅವಳು ಗಂಭೀರವನ್ನು ನಟಿಸುತ್ತಾ

ನುಡಿದಾಗ ಅವನು ಕೋಪವನ್ನು ನಟಿಸಿದ.

''ಯಾರಿಗೆ ಬೇಕಾಗಿದೆ ಹೋಗ್ರೀ... ನಮ್ಮ ಚಿಂಪೀ ಹೇಳೋದು ನಿಜ. ನಿಮಗೆ ಸಿಕ್ಕಾಪಟ್ಟೆ ಜಂಭ... ನಿಮ್ಮ ಜಂಭಾನ ನೀವೇ ಇಟ್ಟುಕೊಳ್ಳಿ... ಬೈ ಬೈ...''ಎನ್ನುತ್ತಾ ಅವಳಿಗಿಂತ ಮುಂದೆ ಮುಂದೆ ನಡೆದ. ಅವಳು ಹಿಂದಿನಿಂದ ಕಿಲಕಿಲನೆ ನಕ್ಕು 'ಬೈ ಬೈ' ಎಂದು ಹೇಳಿ, 'ಕೋಪ ಇಳಿದ್ಮೇಲೆ ಬನ್ನಿ... ಮಾತನಾಡ್ಕೋಣ' ಅವಳ ಮಾತುಗಳು ಕೇಳಿಸಿದರೂ ಕೇಳಿಸದವನಂತೆ ಮುಂದೆ ಮುಂದೆ ನಡೆದ.

ಮೂರು ನಾಲ್ಕು ದಿನಗಳು ಕಳೆದಿದ್ದವು. ಒಂದು ವಾರ ರಜವಿದ್ದುದರಿಂದ ಪೂರ್ಣಿಮಾ, ತಂದೆ ತಾಯಿಯರನ್ನು ನೋಡಿಕೊಂಡು ಬರಲು ಹೋಗಿದ್ದಳು. ಅವಳು ವಾಪಸ್ಸು ಬರುವುದನ್ನೇ ಚಂದ್ರ ಕಾತುರದಿಂದ ಕಾಯುತ್ತಿದ್ದ. ಆಗಾಗ್ಗೆ ಪಕ್ಕದ ಮನೆಯ ಕಡೆ ಗಮನ ಹರಿಸುತ್ತಿದ್ದುದನ್ನು ಚಿಂಪಿ ಕಂಡಳು. ಅಣ್ಣನನ್ನು ರೇಗಿಸುವ ಮನಸ್ಸಾಗಲಿಲ್ಲ. ಪೂರ್ಣಿಮಾ ಊರಲ್ಲಿಲ್ಲವೆನ್ನುವುದನ್ನು ತಿಳಿಸಿದ್ದಳು. ಈ ಚಂದ್ರನಿಗೇಕೆ ಅವಳ ಮೇಲೆ ಕಣ್ಣು? ಅವಳಿಗಿಂತ ಚೆನ್ನಾಗಿರುವವರು ಎಷ್ಟೋ ಮಂದಿ ಇದಾರೆ. ಮಹಾ ತ್ರಿಪುರ ಸುಂದರಿ ಅನ್ನೋ ತರಹ ಆಡ್ತಾನೆ ಎಂದುಕೊಂಡಳು. ಒಂದಲ್ಲ ಒಂದು ದಿನ ಅಣ್ಣನ ಈ ರಹಸ್ಯವನ್ನು ತಾಯಿಗೆ ಹೇಳಿ ಛೀಮಾರಿ ಹಾಕಿಸುತ್ತೇನೆ ಅಂತಂದುಕೊಂಡಳು.

ಸ್ನೇಹಿತನೊಬ್ಬನ ನೆರವಿನಿಂದ, ಚಂದ್ರನಿಗೆ ಬೆಂಗಳೂರಿನಲ್ಲಿ ಕೆಲಸದ ಇಂಟರ್‌ವ್ಯೂಗೆ ಕರೆ ಬಂದಿತು. ತಾನು ಬೆಂಗಳೂರಿಗೆ ಹೊರಡುವ ಮೊದಲು, ಪೂರ್ಣಿಮಾಳೊಡನೆ ಮಾತನಾಡಿದ್ದರೆ ಚೆನ್ನ ಎಂದೆನಿಸಿತ್ತು. ಇವನು ಊರಿಗೆ ಹೊರಟ ದಿನವೇ, ಅವಳು ವಾಪಸ್ಸು ಬಂದಳು.

ಇಂಟರ್‌ವ್ಯೂ ಮುಗಿಸಿಕೊಂಡು ಬಂದವನಿಗೆ ಯಾಕೋ ಖುಷಿಯೇ ಇಲ್ಲ. ಹೊರಡುವ ಮೊದಲು, ಒಂದ್ಮಾತು ಪೂರ್ಣಿಮಾಳೊಡನೆ ಮಾತನಾಡಿದ್ದರೆ ಏನೋ ಚೆನ್ನಾಗಿರುತ್ತದೆಂದೆನಿಸಿತ್ತು. ಮೂರನೇ ದಿನ ಅವಳು ಕಾಲೇಜಿಗೆ ಹೊರಡುವ ಸಮಯವನ್ನೇ ಕಾದಿದ್ದು ಅವಳ ಹಿಂದೆ ಹಿಂದೆಯೇ ಬಂದ. ಪೂರ್ಣಿಮಾಳಿಗೆ ಅದು ಇಷ್ಟವಾಗಲಿಲ್ಲ.

''ನನ್ನ ಸ್ನೇಹಿತೆಯರಿಗೆ ಗೊತ್ತಾದ್ರೆ ಚುಡಾಯಿಸ್ತಾರೆ. ನೀವ್ಯಾಕೆ ಇಲ್ಲಿಗೆ ಬಂದ್ರಿ?'' ರೇಗಿದ್ದಳು.

''ಎಷ್ಟೊಂದು ದಿನವಾಗಿ ಹೋಯ್ತಲ್ಲ ಮಾತನಾಡಿ. ನಾನೊಂದು ಮುಖ್ಯವಾದ ವಿಷಯವನ್ನು ತಿಳಿಸಬೇಕಾಗಿತ್ತು. ''

''ಇಲ್ಲಿಗೆ ಬರಬಾರದಾಗಿತ್ತು. ಸಂಗೀತದ ಟೀಚರ್ ಮನೆ ಹತ್ತಿರ ಬರಬಹುದಿತ್ತಲ್ಲ...''

''ನಾನು ಬೆಂಗಳೂರಿಗೆ ಹೋಗಿದ್ದೆ ಪೂರ್ಣಿಮಾ. ನೀವೂ ಊರಿನಲ್ಲಿರಲಿಲ್ಲ. ... ನಾನು ಹೊರಡುವ ಮೊದಲು ನಿಮ್ಮೊಡನೆ ಮಾತನಾಡಲಾಗಲಿಲ್ಲ. ನನಗೆ ಅದೇ ಬೇಜಾರು... ''

''ಅಂಥದ್ದೇನು ನಡೀತು ?''ಮುಗುಳ್ನಗುತ್ತಾ ಕೇಳಿದಳು.

''ನಾನು ಕೆಲಸದ ಇಂಟರ್‌ವ್ಯೂಗೆ ಹೋಗಲೇ ಬೇಕಾಯ್ತು... ಅದಕ್ಕೆ ಮೊದಲು ನಿಮ್ಮ ಸಲಹೆಯನ್ನು ಕೇಳಬೇಕಾಗಿತ್ತು.''

''ನನ್ನ ಸಲಹೇನಾ ?.... ನನಗೆ ಇಂಟರವ್ಯೂಗಳ ಬಗ್ಗೆ ಯಾವ ಅನುಭವವೂ ಇಲ್ಲವಲ್ಲ.''

''ಅದು ಗೊತ್ತು. ನನಗೆ ಇಂಟರ್‌ವ್ಯೂಗೆ ಹೋಗುಕ್ಕೆ ಇಷ್ಟವಿರಲಿಲ್ಲ. ಹೋಗಲೋ ಬೇಡವೋ ಅಂತ ಅನುಮಾನಿಸ್ತಾನೇ ಇದ್ದೆ. ಆದರೆ ಅಪ್ಪ ಅಮ್ಮನಿಗೆ ತಿಳಿದ ಮೇಲೆ ಹೋಗಲೇ ಬೇಕಾಯ್ತು. ...''

''ಒಳ್ಳೆದಾಯ್ತು ಬಿಡಿ.. ಇಂಟರ್‌ವ್ಯೂ ಹೇಗಾಯ್ತು.. ? ಕೆಲಸ ಸಿಗುವ ಛಾನ್ಸ್ ಇದೆ ತಾನೇ... ?''

''ಕೆಲಸ ಸಿಕ್ಕರೂ ನಾನು ಹೋಗಬಾರದು ಅಂತ ಅಂದುಕೊಂಡಿದಿನಿ...''

''ಯಾಕೆ ಏನು ತೊಂದರೆ ...''

''ತೊಂದರೆ ಬೇಕಾದಷ್ಟು ಇದೆ... ನನಗೆ ಈ ಊರನ್ನು ಬಿಟ್ಟು ಹೋಗುಕ್ಕೆ ಇಷ್ಟವಿಲ್ಲ...''

''ಅಂಥಾದ್ದೇನಿದೆ ಈ ಊರ್‍ನಲ್ಲಿ? ಸಿಗುವ ಕೆಲಸವನ್ನು ಬಿಟ್ಟು ಈ ಊರಿನಲ್ಲಿ ಇರುವ ಆಸೆ ಯಾಕೆ ? ಇಲ್ಲೇ ಎಲ್ಲಾದರೂ ಕೆಲಸ ಸಿಗುವ ಸಂಭವ ಇದೆಯಾ ?''

''ನಂಗೊತ್ತಿಲ್ಲ ಪೂರ್ಣಿಮಾ. ನನಗಾ ಕೋ ಹೋಗಲು ಮೂಡೇ ಇಲ್ಲ....''

''ಯಾಕ್ರೀ ಅಪ್ಪ ಅಮ್ಮನ್ನ ತಂಗೀನ ಬಿಟ್ಟು ಇರೋಕೆ ಆಗುಲ್ವಾ ?'' ನಗುತ್ತಾ ಪ್ರಶ್ನಿಸಿದಳು. ಅವನು ತಲೆಯಾಡಿಸಿದ.

''ಅದಲ್ಲ, ನಾನು ಕಾರಣ ಹೇಳಿದ್ರೆ ನೀವು ನಗಬಾರದು...''

''ಇಲ್ಲ.... ಹೇಳಿ...''

''ನೀವು ಇಲ್ಲಿದೀರಲ್ಲ... ಅದಕ್ಕೇ ... ನನಗೂ ಇದೇ ಊರ್‍ನಲ್ಲಿರಬೇಕೂಂತ ಅನ್ನಿಸ್ತಿದೆ.''

''ಅಯ್ಯೋ ರಾಮಾ....'' ಪಕಪಕನೆ ನಕ್ಕಳು.

''ನಗುಲ್ಲ ಅಂತ ನಗ್ತಿದೀರ .... ?''

''ಸಾರಿ... ನಿಮ್ಮ ಮಾತ್ನಿಂದ ನಗೂನ ತಡೆಯೋಕೆ ಆಗ್ಲಿಲ್ಲ.... ಅಲ್ಲಾರಿ... ನನಗೋಸ್ಕರ ನಿಮ್ಮ ಕೆರಿಯರ್‌ನ ಹಾಳು ಮಾಡಿಕೊಳ್ಳುತ್ತಿದ್ದೀರಲ್ಲ. ಅಷ್ಟಕ್ಕೂ ನಾನ್ಯಾರು? ಪಕ್ಕದ ಮನೆಯವಳು. ... ಸ್ನೇಹಿತೆ... ನನ್ನ ಓದು ಮುಗಿದ್ಮೇಲೆ ನಾನೂ ಇಲ್ಲಿಂದ ಹೋಗುವವಳೇ... ನಾನಂತೂ ಇಲ್ಲಿ ಸದಾ ಇರುವವಳಲ್ಲ. ಅಲ್ಲದೇ ನಾನು ಯಾವ ರೀತಿಯಲ್ಲೂ ನಿಮ್ಮೊಡನೆ ಹಾಗೆ ಮಾತಾಡಿದ ನೆನಪಿಲ್ಲ ನನಗೆ.''

''ನೀವು ತುಂಬಾ ಒಳ್ಳೆಯವರು ಪೂರ್ಣಿಮಾ... ಮೊದಲು ನನಗೆ ಈ ಊರು ಅಂದ್ರೆ ಬೇಸರವಾಗುತ್ತಿತ್ತು. ನೀವು ಬಂದಮೇಲೆ, ಈಗ ಈ ಊರು ಇಷ್ಟವಾಗ್ತಿದೆ...''

''ಯಾರಾದ್ರೂ ಕೇಳಿಸ್ಕೊಂಡ್ರೆ ನಗ್ತಾರೆ ಅಷ್ಟೇ... ನಿಮ್ಮ ಮನೆಯವರಿಗೆ ತಿಳಿದರೆ

ಏನಂದುಕೊಳ್ತಾರೆ ?''

''ಏನು ಬೇಕಾದ್ರೂ ಅಂದ್ಕೊಳ್ಳಲಿ.... ನಾನು ಹೇಳ್ತಿರೋದು ಮಾತ್ರ ನಿಜ. ನನ್ನ ಮಾತ್ನಲ್ಲಿ ನಂಬಿಕೆ ಬರುಲ್ವಾ ?''

''ನಂಬಿಕೆ ಪ್ರಶ್ನೆ ಅಲ್ಲ ಚಂದ್ರ... ಇದೆಲ್ಲ ವಿಚಿತ್ರವಾಗಿ ಕಾಣುತ್ತೆ. ಕೇವಲ ಕೆಲವೇ ತಿಂಗಳ ಕೆಳಗೆ ನಮ್ಮಿಬ್ಬರ ಪರಿಚಯವಾಯಿತು. ನಾವಿಬ್ರೂ ಸ್ನೇಹಿತರು ಅಷ್ಟೆ.....''

''ಇಲ್ಲ ಪೂರ್ಣಿಮಾ...ನನಗೇನೋ ಹಾಗನ್ನಿಸುಲ್ಲ. ಸ್ನೇಹ ಮಾತ್ರವಲ್ಲ, ಅದನ್ನು ಮೀರಿದ ಒಂದು ಭಾವನೆ ಇದೆ.'' ಪೂರ್ಣಿಮ ಇದಕ್ಕಿದ್ದಂತೆ ಗಂಭೀರಳಾದಳು. ಅವಳು ಅಲ್ಲಿಂದ ಹೊರಟೇ ಬಿಡುತ್ತಾಳೇನೋ ಎಂದೆನಿಸಿ ಅವಳ ಕೈ ಹಿಡಿದ. ಅವಳು ಬಲವಾಗಿ ಕೊಡವಿಕೊಂಡಳು.

''ಪ್ಲೀಸ್ ಚಂದ್ರ, ಏನೇನೋ ಮಾತನಾಡ್ಬೇಡಿ. ... ನನಗೆ ನಿಮ್ಮ ಬಗ್ಗೆ ಬೇರೆ ಯಾವ ಭಾವನೆಯೂ ಇಲ್ಲ. ನಿಮಗೆ ಏನೇನೋ ಅನ್ನಿಸುವ ತರಹ ನಾನೆಂದೂ ವರ್ತಿಸಿಲ್ಲ... ನೀವು ಸುಮ್ಮನೇ ಹೋಗಿ. ನನ್ನನ್ನು ಪೀಡಿಸಬೇಡಿ''ಅವಳು ಕಟುವಾಗಿ ನುಡಿದಾಗ, ಅವನು ಪೆದ್ದನಂತೆ ಸುಮ್ಮನೆ ನೋಡಿದ. ಅವಳು ಅವನ ಉತ್ತರಕ್ಕೆ ಕಾಯದೇ ಮುಂದೆ ನಡೆದಳು. ಅವನು ನಿಂತಲ್ಲಿಯೇ ನಿಂತು ಅವಳನ್ನೇ ನೋಡಿದ.

ಅವನ ಮಾತುಗಳಿಂದ ಅವಳ ಮನಸ್ಸು ಕದಡಿ ಹೋಯಿತು. ಇದ್ದಕ್ಕಿದ್ದಂತೆ ಅವನು ಹೀಗೇಕೆ ಮಾತನಾಡಿದ ಎಂದು ಚಿಂತಿಸಲು ಪ್ರಾರಂಭಿಸಿದಳು. ಹೀಗೆಲ್ಲಾ ಅವನ ಮನಸ್ಸಿನಲ್ಲಿ ಏನೇನೋ ವಿಚಾರಗಳಿವೆ ಅಂತ ಮೊದಲೇ ತಿಳಿದಿದ್ದರೆ, ತಾನು ಸ್ನೇಹದಿಂದ ಮಾತನಾಡುತ್ತಲೇ ಇರಲಿಲ್ಲವೆಂದುಕೊಂಡಳು. ಆದರೂ, ಪಾಠಗಳಲ್ಲಿ ಅವಳ ಗಮನ ಇಲ್ಲವಾಯಿತು. ತಲೆನೋಯುತ್ತಿದೆಯೆಂದು ಹೇಳಿ, ಮನೆಗೆ ಹೊರಟಳು. ಕಾಲೇಜಿನ ಕಾಂಪೌಂಡ್ ಬಳಿ ಬಸ್‌ಸ್ಟಾಪಿಗೆ ಬಂದು ನಿಂತಳು. ಪಕ್ಕದಲ್ಲಿ ಯಾರೋ ಬಂದು ನಿಂತಂತಾಯಿತು. ತಿರುಗಿ ನೋಡಿದಳು ಚಂದ್ರ. ಅವಳ ಮುಖದ ಕಳೆಯೇ ಇಳಿದು ಹೋಯಿತು.

''ನೀವು.... ನೀವು ಇನ್ನು ಇಲ್ಲೇ ಇದೀರಾ ?''

''ನಾನು ಹೋಗಬೇಕೋ ಬೇಡವೋ ಅಂತ ತಿಳೀಲಿಲ್ಲ. ... ಅದಕ್ಕೇ ನಿಮಗೋಸ್ಕರಾನೇ ಕಾಯ್ತಾ ನಿಂತಿದ್ದೆ.''

''ಇದು ಅತಿಯಾಯ್ತು ಚಂದ್ರ. ನನ್ನ ಹಿಂದೇಕೆ ಬಿದ್ದಿದೀರಿ ? ''

''ನನಗೆ ನಿಮ್ಮ ಸಲಹೆ ಬೇಕೇಬೇಕು ಪೂರ್ಣಿಮಾ... ನಾನು ನೀವು ಹೇಳಿದ್ದನ್ನು ಖಂಡಿತಾ ಕೇಳ್ತೀನಿ.''

''ನಾನು ಈಗ ಮನೆಗೆ ಹೋಗ್ತಿದೀನಿ. ನನಗೆ ತಲೆ ನೋಯುತ್ತಿದೆ. ಮಾತನಾಡುವ ಮೂಡ್ ಇಲ್ಲ. ಇನ್ನೆಂದಾದರೂ ಮಾತನಾಡೋಣ.''

''ಅದಕ್ಕೆ ಸಮಯವೇ ಇಲ್ಲ. ಇನ್ನೊಂದೆರಡು ದಿನಗಳಲ್ಲಿ ನಾನು, ಬೆಂಗಳೂರಿಗೆ ಹೋಗಬೇಕೋ ಬೇಡವೋ ಅನ್ನೋದು ನಿರ್ಧಾರವಾಗಬೇಕು.''

"ನಿಮ್ಮ ಯಾವ ವಿಚಾರದಲ್ಲಿಯೂ ನನಗೆ ಆಸಕ್ತಿ ಇಲ್ಲ. ಹಾಗೇ ಯಾವ ಹಕ್ಕೂ ಇಲ್ಲ. ಆದರೂ ನೀನು ಕೇಳ್ತಿದೀರಲ್ಲ ಅಂತ ಹೇಳ್ತೀದೀನಿ... ಕೆಲಸ ಸಿಕ್ಕಿರುವಾಗ, ನೀವು ಸೇರಿಕೊಳ್ಳುವುದು ಸರಿ. ಅದನ್ನು ಬಿಟ್ಟು ಬಿಡುವುದು ಮೂರ್ಖತನ. ಮೊದಲು ಒಂದು ತೀರ್ಮಾನ ತಗೊಳ್ಳುವುದು ಅತಿ ಮುಖ್ಯ. ಈ ವಿಷಯದಲ್ಲಿ ನನ್ನ ಸಲಹೆಗಿಂತ, ನಿಮ್ಮ ಸ್ವಂತ ತೀರ್ಮಾನ ಮುಖ್ಯ. ನೀವು ಕೆಲಸಕ್ಕೆ ಸೇರಿಕೊಳ್ಳುವುದರಿಂದ ನಿಮ್ಮ ಮನೆಯವರಿಗೆಲ್ಲ ಖುಷಿಯಾಗುವುದಾರೆ, ನನಗೂ ಖುಷಿಯೇ. ಕೇವಲ ನನಗೋಸ್ಕರ, ನೀವು ಸುಮ್ಮನೆ ಯಾವ ಉದ್ಯೋಗವೂ ಇಲ್ಲದೇ ಕಾಲಹರಣ ಮಾಡುವುದಂತೂ ನನಗೆ ಖಂಡಿತಾ ಇಷ್ಟವಿಲ್ಲ."

ಅವಳ ಮಾತಿನಿಂದ ಅವನಿಗೆ ಖುಷಿಯಾಗಲಿಲ್ಲ. ಸೂಚ್ಯವಾಗಿ, ತಾನು ಇಲ್ಲಿಯೇ ಇರುವುದು ಬೇಡ ಎಂದು ತಿಳಿಸುತ್ತಿದ್ದಾಳೆ. ಆಗಲಿ, ಇವಳ ಮನಸ್ಸಿನಲ್ಲಿ ಏನಿದೆ ಅಂತ ತಿಳೀತಲ್ಲ. ಇವಳಿಗೆ ನಾನು ಬೇಡವಾದರೆ, ನಾನೇಕೆ ಮತ್ತೆ ಮತ್ತೆ ಅದನ್ನೇ ಆಡಬೇಕು.... ? ಉದ್ಯೋಗವಿಲ್ಲದೇ ಕಾಲ ಹರಣ ಮಾಡುತ್ತೀನಿ ಎಂದು ವ್ಯಂಗ್ಯವಾಗಿ ನುಡಿದಳಲ್ಲವೇ ? ನಾನು ಇಲ್ಲದಿರುವಾಗ ನನ್ನ ಬೆಲೆ ತಿಳಿಯುತ್ತದೆ. ಸ್ನೇಹಿತೆ ಅಂತ ನಾನು ಸ್ವಲ್ಪ ಹೆಚ್ಚಿಗೆ ಮಾತನಾಡುತ್ತಿದ್ದೆ. ಆಮೇಲೆ ದಿನಾ ನನ್ನನ್ನು ನೆನಪಿಸಿಕೊಳ್ಳಬೇಕು... ನಾನು ಯಾವಾಗ ಬಂದೆನೋ ಅಂತ ನನಗಾಗಿ ಕಾಯಬೇಕು.. ಆಗಲೇ ಇವಳಿಗೆ ನನ್ನ ಬೆಲೆ ಅರಿವಾಗುವುದು... ಅಂತ ಅಂದುಕೊಂಡ. ಅವನ ಮುಖದ ಕಳೆ ಕಂದಿತ್ತು. ಅವಳ ಕಡೆ ವಿಚಿತ್ರವಾಗಿ ನೋಡಿ, ಅವಳಿಗೆ ಏನನ್ನು ಹೇಳದೆ, ಅಲ್ಲಿಂದ ನಡೆದ. ತಾನು ಹೇಳಿದುದರಲ್ಲಿ ತಪ್ಪು ಏನಿಲ್ಲವೆಂದು ಅವಳು ತಿಳಿದಿದ್ದಳಾದ್ದರಿಂದ ಅವಳು ಅವನನ್ನು ತಡೆಯಲಿಲ್ಲ.

ಆ ದಿನವೆಲ್ಲಾ ಅವನಾಡಿದ ಮಾತುಗಳನ್ನೇ ಮೆಲಕು ಹಾಕಿದಳು. ತಾನು ಕೊಟ್ಟ ಉತ್ತರ ಸರಿಯಾಗಿತ್ತೋ ಇಲ್ಲವೋ, ತನ್ನ ಬಗ್ಗೆ ಏನೆಂದುಕೊಂಡನೋ ಅಂತ ಯೋಚಿಸಿದಾಗ ಆತಂಕವಾಗುತ್ತಿತ್ತು. ಕಷ್ಟವೂ ಆಗುತ್ತಿತ್ತು. ಈ ಚಂದ್ರನಿಗೆ ನನ್ನ ಸಲಹೆಯ ಅಗತ್ಯವೇನಿತ್ತು ? ಅವನು ನಿಜ ಹೇಳುತ್ತಿರಬಹುದೇ ಅಥವಾ ತಮಾಷೆ ಮಾಡಿ, ನನ್ನ ಮನಸ್ಸಿನಲ್ಲಿ ಏನಿದೆ ಅಂದ ತಿಳಿದುಕೊಳ್ಳುವ ಜಾಣತನವೇ ? ಏನಾದರಾಗಲಿ... ನಾನು ಹೇಳಿದ್ದನ್ನು ಅವನು ಅನುಮೋದಿಸಿ ಕೆಲಸಕ್ಕೆ ಸೇರಿಕೊಂಡರೆ, ಅದರಿಂದ ಅವನಿಗೆ ಒಳ್ಳೆಯದೇ.... ತಾನೇಕೆ ವರಿ ಮಾಡಿಕೊಳ್ಳಬೇಕು ?

ಈ ತೊಳಲಾಟದಲ್ಲೇ ಆ ದಿನ ಕಳೆದುಹೋಯಿತು. ಮಾರನೇ ದಿನ ಅವನು ಮತ್ತೆ ಸಿಗಬಹುದೇನೋ ಎಂದು ಕಾದಳು. ಅವನು ಬರಲಿಲ್ಲ. ಮನಸ್ಸು ಕುಗ್ಗಿತ್ತು. ಅವನು ಹೇಳಿದ್ದೆಲ್ಲಾ ನಿಜವಾದರೆ, ನಾಳೆ ನಾಡಿದ್ದರಲ್ಲಿ ಊರಿಗೆ ಹೊರಟು ಬಿಡ್ತಾನೆ. ಅದಕ್ಕೆ ಮುಂಚೆ ತಾನೊಮ್ಮೆ ಅವನನ್ನು ಕಂಡು ಅವನಿಗೆ ಶುಭವನ್ನು ಹಾರೈಸಬೇಕೆಂದು ಕೊಂಡಳು.

ಸಂಗೀತದ ಟೀಚರ್ ಅವರ ಮನೆಗೆ ಬರುವ ಸಮಯವನ್ನೇ ಕಾದಿದ್ದು, ಅವರ ಮನೆಗೆ ಬಂದಳು. ಚಂಪಕ ಒಬ್ಬಳೇ ಕೂತಿದ್ದಳು. ಸಂಗೀತದ ಮೇಡಂಗೆ ವಂದಿಸಿ, ಚಂಪಕಳನ್ನು ಪ್ರಶ್ನಿಸಿದಳು.

''ನೀವೊಬ್ರೆ ಇದೀರಿ... ನಿಮ್ಮ ಅಣ್ಣ ಇಲ್ವಾ ? ''

''ಅವನು ನಾಳೆ ಬೆಂಗಳೂರಿಗೆ ಹೊರಟಿದಾನೆ... ಅವನಿಗೆ ಕೆಲಸ ಸಿಕ್ಕಿದೆ'' ಅವಳು ಯಾವ ಭಾವವನ್ನು ತೋರದೆ ನಿರ್ವಿಕಾರವಾಗಿ ಹೇಳಿದಾಗ ಇವಳಿಗೆ ಕೆಡುಕೆನಿಸಿತು. ಅಣ್ಣನಿಗೆ ಕೆಲಸ ಸಿಕ್ಕಿರುವುದು ಇವಳಿಗೆ ಸಂತಸವಿಲ್ಲವೇ ? ಅಥವಾ ಅವನು ಊರಿಗೆ ಹೋಗ್ತಾ ಇದಾನೆ ಅಂತ ಯಾವ ಬೇಸರವೂ ಇಲ್ಲವೇ ?

''ಓ... ಹೌದಾ ? ಯಾವ ಕಂಪನಿ ?''

''ಏನೋ ನನಗೊಂದೂ ಗೊತ್ತಿಲ್ಲ. ನನಗೇನನ್ನು ಹೇಳಿಲ್ಲ...'' ಅವಳ ಮಾತಿನಲ್ಲಿ ಅಸಮಾಧಾನದ ಜೊತೆಗೆ ವ್ಯಂಗ್ಯವೂ ಇತ್ತು. ಮೇಡಂ ನುಡಿದಳು.

''ಹೌದಾ ? ನನಗೇನೂ ಹೇಳಲೇ ಇಲ್ಲವಲ್ಲ.... ಆಸೆಯಿಂದ ಸಂಗೀತ ಪಾಠಕ್ಕೆ ಪ್ರಾರಂಭಿಸಿದರು.. ಇನ್ನು ಮೇಲೆ ಹಾಗಾದ್ರೆ ನೀನೊಬ್ಬಳೇ... ನೀನ್ಯಾಕೆ ಇವಳ ಜೊತೆಯಲ್ಲಿ ನಮ್ಮ ಮನೆಗೆ ಬರಬಾರದು ?'' ಪೂರ್ಣಿಮಾ, ಚಂಪಕಳ ಕಡೆ ನೋಡಿದಳು. ಆದರೆ ಅವಳು ಅದು ತನಗಿಷ್ಟವಿಲ್ಲದ ಮಾತು ಎನ್ನುವಂತೆ ಮುಖ ಮಾಡಿದಳು.

''ಬರ್ತೀನಿ ಮೇಡಂ.... ಬರ್ಲಾ ಚಂಪಕ'' ಎನ್ನುತ್ತಾ ಪೂರ್ಣಿಮಾ ಎದ್ದಳು. ಅವಳು ಎದ್ದು ಹೊರಬಾಗಿಲಿನ ಬಳಿಗೆ ಬರುವುದಕ್ಕೂ ಚಂದ್ರ ಗೇಟು ತೆಗೆದು ಒಳಗೆ ಕಾಲಿಡುವುದಕ್ಕೂ ಸರಿಹೋಯಿತು. ತನ್ನ ಎದುರಿಗೆ ಬಂದವಳನ್ನೇ ಚಂದ್ರ ನೇರವಾಗಿ ನೋಡಿದ. ಮುಖದ ಮೇಲೆ ಅಸಮಾಧನಾದ ಕಳೆಯನ್ನು ಗುರುತಿಸಿ, ಮೆಲುವಾಗಿ ನಕ್ಕಳು. ಅವನು ನಗಲಿಲ್ಲ. ''ನನ್ನ ಮೇಲೆ ಕೋಪಾನಾ ? '' ಕೆಳದನಿಯಲ್ಲಿ ಕೇಳಿದಳು.

ಅವನು ಉತ್ತರಿಸಲಿಲ್ಲ. ಅವಳು ಮತ್ತೆ ನಕ್ಕು ನುಡಿದಳು.

''ನನಗೋಸ್ಕರ ನೀವು ಇಲ್ಲೇ ಇರ್ತೀರಿ ಅನ್ನೋದಾದ್ರೆ... ಇರಬಹುದು. ಅದರಿಂದ ನನಗೆ ತೊಂದರೆ ಏನಿಲ್ಲ.... ಆದರೆ ನೀವು ಕೆಲಸಕ್ಕೆ ಸೇರಿಕೊಂಡು ಸೆಟ್ಲ್ ಆಗುವುದಾದರೆ, ಅದರಿಂದ ನಿಮಗೇ ಲಾಭ... ಹಾಗೆ ನನಗೂ ಕೂಡಾ.. ನನ್ನ ಮಾತಿನಲ್ಲಿ ಯಾವ ಕೆಟ್ಟ ಭಾವನೆಯೂ ಇಲ್ಲ... ನಾನು ಒಬ್ಬ ಒಳ್ಳೆಯ ಸ್ನೇಹಿತೆಯಾಗಿ ನಿಮಗೆ ಉತ್ತಮ ಸಲಹೆಯನ್ನು ನೀಡುತ್ತಿದ್ದೀನಿ.... ''

''ನನಗೆ ನಿಮ್ಮ ಸಲಹೆಯ ಅಗತ್ಯವಿಲ್ಲ.''

''ಓ... ಇಷ್ಟು ಕೋಪ...? ಆಲ್ ದಿ ಬೆಸ್ಟ್ ಚಂದ್ರ... ಊರಿಗೆ ಹೋಗಿ ನನ್ನನ್ನು ಮರೆತು ಬಿಡಬೇಡಿ... ನಾನು ಇನ್ನು ಎರಡು ಎರಡೂವರೆ ವರ್ಷ ಇಲ್ಲಿಯೇ ಇರೋಳು. ನೀವು ಆಗಾಗ್ಗೆ ಊರಿಗೆ ಬರ್ತಿರ್ತೀರಲ್ಲ. ... ಆಗ ಅಲ್ಲಿಯ ವಿಚಾರಗಳನ್ನೆಲ್ಲಾ ಹೇಳೋರಂತೆ...'' ಅವಳ ಮಾತುಗಳಿಂದ ಅವನು ಭಾವುಕನಾದ. ಗಂಟಲಿನಿಂದ ಧ್ವನಿ ಹೊರಡಲಿಲ್ಲ.

''ಗುಡ್‌ಲಕ್.... ಹೋಗಿ ಬನ್ನಿ... ನಾನು ನಿಮಗೋಸ್ಕರ ಕಾಯ್ತಿರ್ತೀನಿ...'' ಎಂದು ಅವಳು ಮತ್ತೆ ನುಡಿದಾಗ ಅವನು ಅವಳ ಕೈ ಹಿಡಿದ. ಅವಳು ಅತ್ತಿತ್ತ ನೋಡಿ ಕೈ ಕೊಸರಿಕೊಂಡಳು.

''ಥ್ಯಾಂಕ್ಸ್.... ಥ್ಯಾಂಕ್‌ಯೂ ವೆರಿಮಚ್...'' ಹೋದ ನಂತರ ನಾನು ನಿಮಗೆ ಲೆಟರ್ ಬರೀತೀನಿ. ನೀವೂ ಬರೀಬೇಕು... ತಪ್ಪಿಸಬಾರದು. ಮನೆ ಅಡ್ರೆಸ್ಸಿಗೆ ಬರಿಲೋ... ಕಾಲೇಜಿನ ಅಡ್ರೆಸ್ಸಿಗೆ ಬರೀಲೋ?

''ಮನೆಗೇ ಬರೀರಿ... ಪರವಾಗಿಲ್ಲ. ಯಾರೂ ಓದುಲ್ಲ... ಆದರೆ ಹಾಗಂತ ದಿನಕ್ಕೊಂದು ಪತ್ರ ಬರಿಬೇಡಿ. ಖಂಡಿತಾ ಎಲ್ಲರಿಗೂ ಅನುಮಾನ ಬರುತ್ತೆ. ಪೋಸ್ಟ್‌ಮ್ಯಾನ್‌ಗೆ ಸಹ ಬರುತ್ತೆ'' ಅವಳು ನಕ್ಕಾಗ, ಅವನೂ ನಕ್ಕಂತೆ ಮಾಡಿದ.

''ಸಂಗೀತ ಟೀಚರ್ ಬಂದಿದಾರೆ. ಪಾಠ ಹೇಳಿಸಿಕೊಳ್ಳೋಲ್ವಾ ?''

''ನಿಜ ಹೇಳಲಾ ಪೂರ್ಣಿಮಾ. ಈ ಪಾಠವನ್ನು ನಾನು ನಿಮಗೋಸ್ಕರವೇ ಶುರು ಮಾಡಿದ್ದು. ನೀವು ಮಾತ್ರ ತಪ್ಪಿಸಬೇಡಿ. ಹೇಳಿಸ್ಕೊಳ್ಳಿ...'' ಅವಳ ಕೈ ಹಿಡಿದು ಅದುಮಿದ.

''ಬಿಡುವಾಗಿದ್ರೆ ಬರ್ತೀರಾ ? ರಾಕ್ ರೆಸ್ಟೋರೆಂಟಿಗೆ ಹೋಗೋಣ. ''

''ಓ ಬರ್ತೀನಿ. ಮನೇಲಿ ಹೇಳಿ ಬಂದುಬಿಡ್ತೀನಿ. ಆದರೆ ಇಬ್ಬರೂ ಒಟ್ಟಿಗೆ ಹೋಗೋದು ಬೇಡ.. ನೀವು ಮುಂದೆ ಹೋಗಿ. ಆಟೋರಿಕ್ಷಾ ಸ್ಟಾಂಡ್ ಬಳಿ ಇರಿ. ನಾನು ಬೇಗ ಬಂದು ಬಿಡ್ತೀನಿ.''ಅವಳು ಚಿಗರೆಯಂತೆ ತನ್ನ ಮನೆಯ ಕಡೆ ಓಡಿದಳು.

ಚಂಪಕ ಸರಿಗಮ ಪದನಿಸ ಹಾಡುತ್ತಲೇ ಇದ್ದಳು. ಸಂಗೀತದ ಮೇಡಂ ತಿದ್ದುತ್ತಲೇ ಇದ್ದರು. ಚಂದ್ರ ಮನೆಯ ಒಳಗೆ ಬರದೇ, ಮತ್ತೆ ಗೇಟಿನಾಚೆ ಬಂದು ರಸ್ತೆಗಿಳಿದ.

ಆಟೋದಲ್ಲಿ ಪಕ್ಕ ಪಕ್ಕದಲ್ಲಿ ಕುಳಿತಾಗಲೂ, ರೆಸ್ಟೋರೆಂಟ್‌ನಲ್ಲಿ ಎದುರು ಬದುರು ಕುಳಿತಾಗಲೂ, ಮಾತನಾಡಲು ಏನೂ ವಿಷಯವೇ ಇಲ್ಲವೆಂಬಂತೆ ಮೌನವಾಗಿದ್ದರು. ಮಸಾಲೆ ದೋಸೆ ತಿಂದು, ಕಾಫಿ ಕುಡಿದರು. ಅಲ್ಲಿಂದ ಹೊರಟಾಗಲೂ ಏನೂ ಮಾತುಗಳಿರಲಿಲ್ಲ. ರಸ್ತೆಯ ತಿರುವಿನಲ್ಲಿ ಆಟೋದಿಂದ ಇಳಿಯುವಾಗ, ಚಂದ್ರ ಮತ್ತೆ ಅವಳ ಕೈ ಹಿಡಿದ.

''ಐ ಮಿಸ್ ಯೂ ಪೂರ್ಣಿಮಾ... ಈಗಲೂ ನೀವು ಬೇಡಾಂತ ಹೇಳಿದ್ರೆ ನಾನು ಹೋಗುವುದಿಲ್ಲ.''

''ಛೀ .... ಹಾಗೆ ಮಾತ್ರ ಮಾಡಬೇಡಿ. ಗಂಡಸಿಗೆ ವಿದ್ಯೆ ಎಷ್ಟು ಮುಖ್ಯವೋ ಉದ್ಯೋಗವೂ ಅಷ್ಟೇ ಮುಖ್ಯ. ಕೆಲಸ ಸಿಕ್ಕಾಗ, ಅದನ್ನು ಅವಿವೇಕದಿಂದ ಬಿಡ ಬಾರದು. ನೀವು ಸ್ವತಂತ್ರವಾಗಿ, ನಿಮ್ಮ ಸಂಪಾದನೆಯಲ್ಲಿ ನಿಮಗೆ ಹೇಗೆ ಬೇಕೋ ಹಾಗೆ ಜೀವನ ನಡೆಸುವುದನ್ನು ನಾನು ನೋಡಬೇಕು. ಅದೇ ನನ್ನ ಆಸೆ. ನನ್ನ ಶುಭ ಹಾರೈಕೆಗಳು. ಸದಾ ನಿಮ್ಮ ಜೊತೆ ಇರುತ್ತದೆ... '' ಎಂದು ಅವನ ಕೈಗಳನ್ನು ಮೃದುವಾಗಿ ಅದುಮಿದಳು ಅವನು ಅವಳ ಕೈಗಳನ್ನು ತನ್ನ ತುಟಿಗಳತ್ತ ಒಯ್ಯುವಷ್ಟರಲ್ಲಿ ಅವಳು ಕೈಗಳನ್ನೆಳೆದುಕೊಂಡು ಅಲ್ಲಿಂದ ಓಡಿದ್ದಳು. ರಿಕ್ಷಾದವನು ಸಾರ್... ಎಂದು ಕರೆದಾಗಲೇ,ಅವನಿಗೆ ಎಚ್ಚರ. ಅವನಿಗೆ ಕೊಡಬೇಕಾದ ಹಣವನ್ನು ಕೊಟ್ಟು ತಾನು ತನ್ನ ಮನೆಯ ಕಡೆ ನಡೆದ.

ಆ ರಾತ್ರಿ ಅವನಿಗಂತೂ ನಿದ್ದೆ ಇಲ್ಲ. ಏನೋ ಒಂದು ರೀತಿಯ ಉದ್ವೇಗ, ಆತಂಕ.... ಜೊತೆ ಜೊತೆಗೆ ಅವಳಾಡಿದ ಮಾತುಗಳು. ಅವಳು ಎಷ್ಟು ಅನುಭವಿಯಂತೆ ಮಾತನಾಡಿದಳು.

ನಾನೇ ನನ್ನ ದುರ್ಬಲತೆಯನ್ನು ಪ್ರಕಟ ಗೊಳಿಸಿದೆನೇನೋ ಅಂತಂದುಕೊಂಡಾಗ ಕಷ್ಟವಾಗಿತ್ತು. ಆದರೂ ಅವಳ ಅಭಿಪ್ರಾಯವನ್ನು ತಿಳಿದು ಕೊಂಡಂತಾಗಿತ್ತು. ಅದೇ ಸಮಾಧಾನಕರ.

ಮಗನಿಗೆ ಕೆಲಸ ಸಿಕ್ಕಿತೆಂಬ ಸಂತೋಷದಲ್ಲಿ ವೈಲಾರಯ್ಯ ದಂಪತಿಗಳು ದೇವಸ್ಥಾನದಲ್ಲಿ ಅಭಿಷೇಕಕ್ಕೆ ಕೊಟ್ಟಿದ್ದರು. ಪಕ್ಕದ ಮನೆಯವರನ್ನು ಆಹ್ವಾನಿಸಿದ್ದರು. ಪೂರ್ಣಿಮಾಳನ್ನು ಅವರುಗಳ ಮಧ್ಯದಲ್ಲಿಕಂಡು ಚಂದ್ರ ಹಿಗ್ಗಿದ. ಕಣ್ಣಿನಲ್ಲೇ ಸಂತಸವನ್ನುತುಳುಕಿಸಿದ. ಮಹಾ ಮಂಗಳಾರತಿಯ ಸಮಯದಲ್ಲಿ ಪೂರ್ಣಿಮಾ ಒಂದೆರಡು ದೇವರ ನಾಮಗಳನ್ನು ಹಾಡಿ ಎಲ್ಲರ ಮೆಚ್ಚುಗೆಯನ್ನು ಗಳಿಸಿದಳು. ಚಂಪಕ ಮಾತ್ರ ಮುನಿಸಿಕೊಂಡವಳಂತೆ ಗುಂ ಎಂದೇ ಇದ್ದಳು. ಚಂದ್ರ ಪೂರ್ಣಿಮ ಕಣ್ಣಿನ ನೋಟದಲ್ಲೇ ಮಾತಿನ ವಿನಿಮಯ ಮಾಡಿಕೊಂಡರು.

ರಾತ್ರಿಯ ಬಸ್ಸಿನಲ್ಲಿ ತಂದೆ ಮಗ ಇಬ್ಬರೂ ಹೊರಟರು. ಅಪ್ಪನ ಜೊತೆ ಚಂದ್ರನಿಗೆ ಬೇಕಿರಲಿಲ್ಲ. ಆದರೆ ಬೇಡವೆಂದೂ ಹೇಳಲಿಲ್ಲ. ತಾಯಿಗೆ ನಮಸ್ಕರಿಸಿ, ಆಶೀರ್ವಾದವನ್ನು ಪಡೆದು, 'ಬರ್ತೀನಿ ಚಿಂಪಿ ನನ್ನ ಕಾಟವಿಲ್ಲದೇ ಹಾಯಾಗಿರು' ಎಂದು ಕೀಟಲೆಯ ಧ್ವನಿಯಲ್ಲಿ ಹೇಳಿ ಹೊರಬಂದ. ಗೇಟಿನ ಬಳಿ ನಿಂತಿದ್ದ ಪೂರ್ಣಿಮಾಳಿಗೆ ಕೈಯಾಡಿಸಿ ರಿಕ್ಷಾ ಹತ್ತಿದ.

ಚಿಕ್ಕಪ್ಪನ ಮನೆಯಲ್ಲಿ ಅವನಿಗೆ ಯಾವ ತೊಂದರೆಯೂ ಇರಲಿಲ್ಲ. ಆದರೆ ಯಾಕೋ ಅವನಿಗೆ ಅಲ್ಲಿಯೇ ಇರಲು ಇಷ್ಟವಿಲ್ಲ. ಆದರೂ ತಂದೆಯ ಮಾತಿಗೆ ಇಲ್ಲವೆನ್ನಲಾಗದೇ ಅಲ್ಲಿಯೇ ಇರತೊಡಗಿದ. ಕೆಲಸಕ್ಕೆ ರಿಪೋರ್ಟ್ ಮಾಡಿಕೊಂಡು, ತಂದೆ ಊರಿಗೆ ವಾಪಸ್ಸು ಹೊರಟು ಹೋದ ಮೇಲೆ , ಅವನು ಮೊದಲು ಮಾಡಿದ ಕೆಲಸವೆಂದರೆ ಪೂರ್ಣಿಮಾಳಿಗೆ ಪತ್ರ ಬರೆದದ್ದು. ತಾನು ಮೆಚ್ಚಿರುವ ಹುಡುಗಿಗೆ ಬರೆಯುತ್ತಿರುವ ಮೊದಲ ಪ್ರೇಮಪತ್ರ. .. ಏನೋ ಉದ್ವೇಗ, ಏನೋ ಆನಂದ... ಒಕ್ಕಣೆಯಾಗಿ ಪತ್ರವನ್ನು ಬರೆದು ಡಬ್ಬಕ್ಕೆ ಹಾಕಿದ. ಎಂದಿಗೆ ಅವಳಿಗೆ ಈ ಪತ್ರ ತಲುಪುತ್ತದೆಯೋ, ಅವಳು ತಕ್ಷಣವೇ ಉತ್ತರ ಬರೆಯುತ್ತಾಳೋ ಇಲ್ಲವೋ ಅನುಮಾನ ಆತಂಕಗಳು ಕಾಡಿದವು.

ಆ ವಾರದ ಕಡೆಯಲ್ಲಿ ಅಂತೂ ಅವಳಿಂದ ಮರು ಪತ್ರ ಬಂದಾಗ ಅವನಿಗೆ ಸ್ವರ್ಗ ಮೂರೇ ಗೇಣು. ಆತುರಾತುರವಾಗಿ ಕವರನ್ನು ಬಿಡಿಸಿ ಓದಿದ. ಬರೆದಿದ್ದ ನಾಲ್ಕೇ ಸಾಲುಗಳನ್ನು ಓದಿ ನಿರಾಸೆಯಾಯಿತು. ತಾನೇನೂ ಮತ್ತೆ ಮತ್ತೆ ಅವಳ ನೆನಪುಗಳೇ ಕಾಡುತ್ತವೆ ಎಂದು ಬರೆದಿದ್ದ. ಆದರೆ ಅವಳಾದರೋ ಕೇವಲ ಶುಭ ಹಾರೈಕೆ ತಿಳಿಸಿ ತನ್ನ ಸಂತಸವನ್ನು ವ್ಯಕ್ತಗೊಳಿಸಿದ್ದಳು.

ಆ ದಿನವೇ ಮತ್ತೆ ಅವಳಿಗೆ ಪತ್ರ ಬರೆದ. ''ನಿಮ್ಮಿಂದ ಈ ತರಹ ನೀರಸವಾದ ಪತ್ರವನ್ನು ನಾನು ನಿರೀಕ್ಷಿಸಿರಲಿಲ್ಲ. ನನ್ನ ಬಗ್ಗೆ ನಿಮಗೆ ಏನು ಅನ್ನಿಸುವುದಿಲ್ಲವೇ ? ನಿಮಗೆ ಬೇಸರವೆನಿಸುವುದಿಲ್ಲವೇ ?'' ಅಂತೆಲ್ಲಾ ಕೇಳಿದ್ದ

ಅವಳಾದರೋ ಪಾಠ ಪ್ರವಚನ, ಸಂಗೀತಾಭ್ಯಾಸಗಳ ನಡುವೆ ನನಗೆ ಬೇಸರ ಪಡಲು ಸಮಯವೇ ಇಲ್ಲವೆಂದು ಬರೆದಿದ್ದಳು. ಆದರೂ ಇವನು ತಾನು ವಾರಕ್ಕೆರಡು ಪತ್ರಗಳನ್ನು ಬರೆದು ತನ್ನ ಅನಿಸಿಕೆ ಬೇಗುದಿಗಳನ್ನು ತಿಳಿಸುತ್ತಿದ್ದ. ಅವಳು ಹದಿನೈದು

ದಿನಗಳಿಗೊಮ್ಮೆ ಉತ್ತರ ಬರೆದು, ಅವನ ಬೇಸರವನ್ನು ಕಳೆಯಲು ಪ್ರಯತ್ನಿಸುತ್ತಿದ್ದಳು. ಹೀಗೆ ಸಾಗಿತು ಅವರ ಪ್ರೇಮ ಪತ್ರ ವ್ಯವಹಾರ. ಆರು ತಿಂಗಳು ಕಳೆಯುವಷ್ಟರಲ್ಲಿ ಅವನಿಗೆ ಸಾಕು ಸಾಕೆನಿಸಿತ್ತು. ಕೆಲವು ದಿನಗಳ ರಜೆ ತೆಗೆದುಕೊಂಡು ಊರಿಗೆ ಹೋಗಿ ಬರಲೇಬೇಕೆಂದು ಬಯಸಿದ.

ಊರಿಗೆ ಬಂದರೂ ಪೂರ್ಣಿಮಾಳ ದರ್ಶನವಾಗಲಿಲ್ಲ. ಪರೀಕ್ಷೆ ಮುಗಿದಿದ್ದರಿಂದ ಅವಳು ತನ್ನೂರಿಗೆ ಹೊರಟು ಹೋಗಿದ್ದಳು. ಅವಳು ಬೇಕೆಂತಲೇ ಹೀಗೆ ಮಾಡಿದ್ದಾಳೆಂದು ಭಾವಿಸಿ, ಕೋಪಗೊಂಡ. ಅಪರೂಪಕ್ಕೆ ಮಗ ಊರಿಗೆ ಬಂದಿದಾನೆಂದು ತಾಯಿ ರುಚಿ ರುಚಿಯಾದ ಅಡಿಗೆ ಮಾಡಿ ಬಡಿಸಿದರೂ ಅವನಿಗೆ ರುಚಿಸಿರಲಿಲ್ಲ. ಜೊತೆಗೆ ಚಿಂಪಿಯ ಕುಹಕದ ಮಾತುಗಳು ರೇಗಿಸುತ್ತಿದ್ದವು.

''ಸಿಕ್ಕಾ ಬಿಟ್ಟೆ ಜಂಭ ಬಂದು ಬಿಟ್ಟಿದೆ... ತಲೇನೇ ನಿಲ್ಲುಲ್ಲ.''

''ನನ್ನ ತಲೆ ನಿಲ್ಲುಲ್ಲ, ನಿನ್ನ ಬಾಯಿಏನೂ ನಿಂತಿಲ್ಲ ... ನಿನ್ನತ್ರ ಮಾತಾಡ್ತಿಲ್ಲ ನಾನು''

''ನಂಗೊತ್ತು.... ನೀನು ಯಾರನ್ನ ಮಾತನಾಡಿಸಬೇಕೂಂತ ಇದೀಯೋ ಅವಳು ಸಿಗಲಿಲ್ಲ, ಅದಕ್ಕೇ ಉರಿದು ಹೋಗ್ತಿದೀಯ....''

''ಅದೆಲ್ಲಾ ನಿನಗ್ಯಾಕೆ ? ತಲೆಹರಟೆ. ನಿನ್ನ ಕೆಲಸ ನೀನು ನೋಡ್ಕೋ ಹೋಗು...'' ಅವನು ಒರಟಾಗಿ ನುಡಿದಾಗ, ಚಂಪಕ ಸೊರಸೊರ ಅಳತೊಡಗಿದಳು. ಇವನು ಆ ಜಾಗದಿಂದ ಕದಲಿದ. ತಾಯಿ ಮಗ ಇದ್ದೆಡೆಗೆ ಬಂದಳು.

''ಚಿಂಪಿಗೆ ಒಂದೆರಡು ವರಗಳು ಬಂದಿವೆ. ಆದಷ್ಟು ಬೇಗ ಅವಳ ಮದುವೆ ಮಾಡಿ ಬಿಡಬೇಕು.....''

''ಮದುವೆ ಮಾಡಿ ಸಾಗಹಾಕು. ಸಾಕಾಗಿದೆ. ಅವಳ ಸಹವಾಸ... '' ಕನಲಿ ನುಡಿದ.

''ಛೇ..... ಯಾಕೆ ಹಾಗಂತಿಯೋ ? ಅವಳು ನಿನ್ನ ತಂಗಿ. ಮದುವೆಯಾಗಿ ಹೋದ್ಮೇಲೆ, ಬಾ ಅಂತ ಕರೆದ್ರು ಸುಲಭವಾಗಿ ಬಂದು ಬಿಡ್ತಾಳೆ ಅಂತ ಅಂದ್ಕೊಂಡ್ಯಾ?''

''ನಾನೇಕೆ ಕರೆಯಲಿ ! ನಾನು ಕರೆಯೋದೂ ಇಲ್ಲ, ಅವಳು ಬರೋದು ಬೇಡ''

''ಬಿಡಪ್ಪಾ... ಆರು ತಿಂಗಳು ಮನೆಯಿಂದ ಹೊರಗಿದ್ರೂ ನೀನು ಬದಲಾಗಿಲ್ಲ. ಏನೋ ಚಿಕ್ಕವಯಸ್ಸಿನಲ್ಲಿ ಕಾದಾಡ್ತಿದ್ರಿ ಅಂತಂದ್ರೆ..... ಈಗಲಾದ್ರೂ ಅಣ್ಣ ತಂಗಿ ಅಂದ್ರೆ ಪ್ರೀತಿ ಇರಬೇಡ್ವೆ !''

''ಅಣ್ಣ ಅಂದ್ರೆ ಪ್ರೀತಿ ಗೌರವ ಏನಾದ್ರೂ ಇದೆಯಾ ಅವಳನ್ನು ಕೇಳು..'' ತಾಯಿ ಅವನ ಮಾತಿಗೆ ಉತ್ತರಿಸದೇ ಹೊರಟು ಹೋದಳು. ಎರಡು ದಿನಗಳಿಗೆ ಬೇಸರವಾಗಿ ವಾಪಸ್ಸುಊರಿಗೆ ಹೊರಟು ಬಿಟ್ಟ. ವಾಪಸ್ಸು ಬರುತ್ತಿದ್ದಂತೇ ಅವನಿಗೆ ಪೂರ್ಣಿಮಾಳ ಪತ್ರ ಸಿಕ್ಕಿತು. ಅವಳು ತನ್ನ ಊರಿಗೆ ಹೊರಡುವ ಮೊದಲು ಬರೆದ ಪತ್ರ.

ಚಂದ್ರನ ಪ್ರೊಬೇಷನರಿ ಮುಗಿದು, ಕೆಲಸ ಖಾಯಂ ಆದುದಕ್ಕೆ ಸಂತಸವನ್ನು ವ್ಯಕ್ತಪಡಿಸಿ ಶುಭ ಹಾರೈಕೆಗಳೊಂದಿಗೆ ಪ್ರೀತಿಯನ್ನು ತಿಳಿಸಿ ಬರೆದಿದ್ದಳು. ಸುಮ್ಮನೇ ತನ್ನಲ್ಲೇ ನಕ್ಕೊಂಡ. ಈಗ ಹೇಗೂ ಕೆಲಸ ಖಾಯಂ ಆಗಿದೆ, ತಾನೇಕೆ ಮದುವೆಯಾಗ ಬಾರದು ?

ಎಂಬ ಆಲೋಚನೆ ಧುತ್ತನೆ ಮನದಲ್ಲಿ ಎದ್ದು ನಿಂತಿತು. ಆಗ ಚಂಪಿಯ ಮದುವೆಯ ಮಾತನ್ನು ತಾಯಿ ಆಡಿದ್ದು ನೆನಪಿಗೆ ಬಂತು. ಯಾವಾಗ ಅವಳ ಮದುವೆ ಸೆಟ್ಲ್ ಆಗುತ್ತೋ, ಇನ್ನೂ ಯಾವ ವರವನ್ನೂ ಗೊತ್ತು ಮಾಡಿಲ್ಲ. ನಾನಾದರೆ, ನನ್ನ ಹುಡುಗಿಯನ್ನಾ ನಾನೇ ಗೊತ್ತು ಮಾಡಿಕೊಂಡಿದ್ದೇನೆ. ನಾನೇಕೆ ಕಾಯಬೇಕು ? ಪೂರ್ಣಿಮಾಳ ಒಪ್ಪಿಗೆ ಒಂದು ಸಿಕ್ಕಿಬಿಟ್ಟರೆ ಸಾಕು, ಆ ಕ್ಷಣದಲ್ಲಿ ಅವಳನ್ನು ನಾನು ಮದುವೆಯಾಗಲು ಸಿದ್ಧ.... ಎದುಕೊಂಡು ಪೂರ್ಣಿಮಾಳಿಗೆ ತಕ್ಷಣವೇ ಪತ್ರವನ್ನು ಬರೆದು ಹಾಕಿದ ಹಾಗೂ ತಾನೂ ಅವಳಿಗಾಗಿಯೇ ಊರಿಗೆ ಬಂದರೂ, ಅವಳು ಸಿಗದೇ ಇದ್ದುದು ನಿರಾಸೆಯನ್ನುಂಟು ಮಾಡಿತೆಂದು, ಆದಷ್ಟು ಬೇಗ ಒಪ್ಪಿಗೆಯನ್ನು ತಿಳಿಸಬೇಕೆಂದು ಕೇಳಿಕೊಂಡಿದ್ದ.

ತನ್ನ ಡಿಗ್ರಿ ಮುಗಿಯದೇ ತಾನೀಗಲೇ ಮದುವೆಯ ಆಲೋಚನೆ ಮಾಡುವುದಿಲ್ಲವೆಂದು ಪೂರ್ಣಿಮಾ ಬರೆದಾಗ ಸಿಡಿಮಿಡಿಗೊಂಡ. ಅದರ ಜೊತೆಗೆ, ಚಂಪಕ ನನಗಿಂತ ದೊಡ್ಡವಳು, ಮೊದಲು ಅವಳ ಮದುವೆ ಬಗ್ಗೆ ಯೋಚನೆ ಮಾಡಿ ಎಂದು ಉಪದೇಶ ಬೇರೆ ಮಾಡಿದ್ದಳು.

ನನಗೆ ಇಲ್ಲದ ಚಂಪಕಳ ಚಿಂತೆ ಇವಳಿಗೇಕೆ ಎಂದು ಅಸಹನೆಗೊಂಡಿದ್ದ. ಇನ್ನು ಎರಡು ವರ್ಷ ? ಡಿಗ್ರಿ ಮುಗಿಯುವುದಕ್ಕೇ ಮೊದಲೇ ಮದುವೆಯಾದರೆ ಇವಳ ಗಂಟೇನು ಹೋಗುತ್ತದೆ ? ಎಂದು ಶಪಿಸಿದ. ಆದರೆ ಸುಮ್ಮನಿರಲಿಲ್ಲ.

ಚಂಪಕಳ ಮದುವೆಗೂ, ನಮ್ಮಿಬ್ಬರ ಮದುವೆಗೂ ಕಾಯಬೇಕಾಗಿಲ್ಲ. ಮದುವೆಯ ನಂತರವೂ ನೀನು ಡಿಗ್ರಿ ಮಾಡಿಕೊಳ್ಳಬಹುದು . ನಿನ್ನ ತೀರ್ಮಾನ ಏನೂಂತ ತಿಳಿಸು ನನಗೆ ಅಷ್ಟು ಸಾಕು ಎಂದು ಖಾರವಾಗಿ ಬರೆದಿದ್ದ.

ಅದಕ್ಕೆ ಮಾರುತ್ತರವಾಗಿ ಅವಳು ದೊಡ್ಡ ಪತ್ರವನ್ನೇ ಬರೆದಿದ್ದಳು. ತಾನು ಡಿಗ್ರಿಯನ್ನು ಮುಗಿಸದಿದ್ದರೆ, ಅಪ್ಪನ ಕೋಪಕ್ಕೆ ಕಾರಣವಾಗುತ್ತೀನಿ. ತಾಯಿಯ ಆಸೆಗೆ ಭಂಗ ಬರುತ್ತದೆ. ಮಾವನ ಸಹಾಯಕ್ಕೆ ಸಹಕಾರಕ್ಕೆ ವಂಚನೆ ಮಾಡಿದಂತಾಗುತ್ತದೆ. ನಿಮಗೆ ಬೇರೆ ಯಾರು ಬೇಕಾದರೂ ಸಿಗಬಹುದು, ಆದರೆ, ನನ್ನನ್ನೇ ಮದುವೆಯಾಗುವ ಇಚ್ಛೆ ಇದ್ದರೆ, ನನಗೋಸ್ಕರ ಎರಡುವರ್ಷ ಕಾಯಲೇಬೇಕು. ಅಲ್ಲದೇ ನಾನು ನಾನಾಗಿಯೇ ನನ್ನ ಮದುವೆಯ ಬಗ್ಗೆ ನನ್ನ ತಂದೆ ತಾಯಿಗಳ ಹತ್ತಿರ ಮಾತಾಡಲಾರೆ. ನನ್ನ ಬಗ್ಗೆ ನನ್ನ ತಂದೆಯ ಅಸಮಾಧಾನ ಇನ್ನು ಹೆಚ್ಚಾಗುತ್ತದೆ. ನಮ್ಮ ಮಾವನಿಗೂ ಅಪವಾದ ಬರುತ್ತದೆ. ದಯವಿಟ್ಟು ಇದಕ್ಕೆಲ್ಲ ಅವಕಾಶ ಕೊಡಬೇಡಿ ಎಂದ ಕೇಳಿ ಕೊಂಡಿದ್ದಳು.

ಇದಾದ ನಂತರ ಇದ್ದಕ್ಕಿದ್ದಂತೆ ಅವಳಿಗೆ ಕಾಗದಗಳನ್ನು ಬರೆಯುವುದನ್ನು ನಿಲ್ಲಿಸಿಬಿಟ್ಟ, ಅವಳು ಕಾಗದ ಬರೆದರೂ, ಅದನ್ನು ಓದುವ ಗೋಜಿಗೆ ಹೋಗಲಿಲ್ಲ.

ತಿಂಗಳುಗಳು ಕಳೆದುಹೋದವು, ಚಿಕ್ಕಪ್ಪ ಹೇಳಿದರು. ಅಣ್ಣನಿಂದ ಕಾಗದ ಬಂದಿದೆ. ''ಚಂಪಕಳಿಗೆ ವರನನ್ನು ಗೊತ್ತು ಮಾಡಿದಾರಂತೆ. ಲಗ್ನ ಪತ್ರಿಕೆಗೆ ನಾವುಗಳೆಲ್ಲರೂ ಬರಬೇಕೆಂದು ಬರೆದಿದಾನೆ.''

''ನೀವು ಹೋಗಿಬನ್ನಿ ಚಿಕ್ಕಪ್ಪ.... ನನಗೆ ರಜವಿಲ್ಲ'' ಅವನು ಯಾವ ಉತ್ಸಾಹವನ್ನೂ ತೋರದೇ ನುಡಿದಾಗ ಚಿಕ್ಕಪ್ಪನಿಗೆ ಆಶ್ಚರ್ಯವಾಗಿತ್ತು.

''ಅಲ್ಲಯ್ಯ ..... ನಿನ್ನ ತಂಗಿಗೆ ಮದುವೆ ಗೊತ್ತಾಗಿದೆ. ಯಾಕೆ ಹೀಗೆ ನಿರುತ್ಸಾಹದಿಂದೀಯ ಏನು ವಿಷಯ ? ''

''ಏನೂ ಇಲ್ಲ..... ''

''ಲೈನ್ ಕ್ಲಿಯರ್ ಆಗುತ್ತಲ್ಲಯ್ಯ.... ಅವಳ ಮದುವೆ ಕಾರ್ಯ ಮುಗೀತಿದ್ದ ಹಾಗೆ ನಿನಗೂ ಹೆಣ್ಣುನೋಡಿ ಗೊತ್ತು ಮಾಡಿದರೆ ಆಯ್ತು.''

''ನಾನೇ ಹುಡುಗೀನ ಗೊತ್ತು ಮಾಡಿಕೊಂಡಿದೀನಿ......''ಉಸುರಿದ.

''ಭಲೇ ಘಾಟಿ ಕಣಯ್ಯಾ ನೀನು... ಅಲ್ಲ ಯಾರಿಗೂ ತಿಳಿಸೇ ಇಲ್ಲ ನೀನು... ಹುಡುಗಿ ಯಾರು ? ''

''ಹೌದು ಚಿಕ್ಕಪ್ಪ... ನಾನು ಯಾರಿಗೂ ತಿಳಿಸಿಲ್ಲ. ನನ್ನನ್ನು ಮದುವೆ ಆಗ್ತಿಯೇನೇ ಅಂತ ಕೇಳಿದ್ರೆ ಅವಳು ಕೂಡಾ ಸರಿಯಾಗಿ ಉತ್ತರ ಕೊಟ್ಟಿಲ್ಲ. '' ಚಿಕ್ಕಪ್ಪ ನಕ್ಕರು.

''ಓನ್ ವೇ ಪ್ರೇಮ ಅನ್ನು.... ಅವಳ ಮನಸ್ನಲ್ಲಿ ಏನಿದೆ ಅಂತ ಮೊದಲು ತಿಳಕೋ ಬೇಡವೇ ? ಯಾರು, ಏನು, ಎತ್ತ ಅಂತ ನನಗೆ ತಿಳಿಸು. ನಾನು ಪ್ರಯತ್ನ ಮಾಡ್ತೀನಿ.''

''ನಾನು ಅವಳನ್ನೇ ಮದುವೆಯಾಗೋದು ಅಂತ ತೀರ್ಮಾನಿಸಿ ಬಿಟ್ಟಿದೀನಿ... ಯಾರು ಏನೇ ಹೇಳಿದರೂ, ನಾನು ಕೇಳೋನಲ್ಲ. ....''

''ಸರಿಯಪ್ಪಾ.... ಅದಕ್ಕೇ ಹೇಳಿದ್ದು ಆ ಹುಡುಗಿಯ ಅಪ್ಪ ಅಮ್ಮನಿಗೆ ವಿಷಯವಾದರೂ ತಿಳಿಯಬೇಡವೆ ? ಅಥವಾ ಅವಳು ತಿಳಿಸಿದ್ದಾಳೋ .... ''

''ಅವಳಿಗೆ ಡಿಗ್ರಿ ಸಿಗೋಕೆ ಇನ್ನು ಎರಡು ವರ್ಷ ಇದೆ... ಅಲ್ಲಿಯವರೆಗೂ ಅವಳು ಯಾರಿಗೂ ತಿಳಿಸುಲ್ಲ. ಅಲ್ಲಿಯ ವರೆಗೂ ಕಾಯುಕ್ಕೆ ನನಗಂತೂ ಸಾಧ್ಯವಿಲ್ಲ.''

''ಹಾಗಂದ್ರೆ ಹೇಗಯ್ಯಾ.... ನೀನು ನೋಡಿದರೆ ಇಂಜಿನಿಯರ‍್ರು... ನಿನ್ನ ಹೆಂಡತಿಗೆ ಒಂದು ಡಿಗ್ರಿಯಾದರೂ ಇರಬೇಡವೇ ?''

''ಮದುವೆಯಾದ ಮೇಲೆ ಓದಲಿ.... ಹಾಗಂತ ಹೇಳಿದ್ರೆ ಅದಕ್ಕೆ ಒಪ್ತಿಲ್ಲ. ... ಅವಳು ಓದಿ ಏನಾಗಬೇಕಾಗಿದೆ ? ನನ್ನ ಹೆಂಡತಿಯಾಗಿದ್ರೆ ಸಾಕು...''

''ಹಾಗೆ ನಿನ್ನ ಹೆಂಡತಿಯೇ ಆಗಿರುಕ್ಕೆ ಯಾರು ಬೇಕಾದರೂ ಸುಲಭವಾಗಿ ಸಿಗ್ತಾರಪ್ಪ.. ನಿನ್ನ ಹೆಂಡತಿಯಾಗಿರುವವಳು ವಿದ್ಯಾವಂತೆಯಾಗಿರಲಿ ಅಂತ ನಿನಗೆ ಅನ್ನಿಸದೇ ಇರುವುದು ವಿಚಿತ್ರವಾಗಿ ಕಾಣುತ್ತೆ... ಸಂಸಾರ ಪ್ರಾರಂಭ ಮಾಡಿದ ಮೇಲೆ ವಿದ್ಯೆಗೆ ಅನೇಕ ವಿಘ್ನಗಳು ಬರುತ್ತವೆ. ಅದು ನಿನಗೆ ಈಗ ಅರ್ಥವಾಗುಲ್ಲ.'' ಚಿಕ್ಕಪ್ಪ ವಿಚಿತ್ರ ಧ್ವನಿಯಲ್ಲಿ ಮಾತಾಡಿದಾಗ, ಅವನು ಅಲ್ಲಿಯೇ ಕುಳಿತಿದ್ದ ಚಿಕ್ಕಮ್ಮನ ಕಡೆ ನೋಡಿದ ಚಿಕ್ಕಮ್ಮ ನಕ್ಕಳು.

''ನಿನ್ನ ಚಿಕ್ಕಪ್ಪನಿಗೆ ನಾನು ಡಿಗ್ರಿ ತಗೊಳ್ಳದೇ ಇರುವುದು ಅತಿಯಾಗಿ ಕಾಣ್ತದೆ. ಆಗಾಗ್ಗೆ ಹೀಗೇ ಮಾತ್ನಲ್ಲಿ ಆಡಿ ಹಂಗಿಸ್ತಾರೆ. ಮೊದ ಮೊದಲು ಬೇಸರವಾಗುತ್ತಿತ್ತು. ಈಗ ಮಾಮೂಲಾಗಿದೆ.'' ಚಿಕ್ಕಪ್ಪ ಏನನ್ನೂ ಆಡದಿದ್ದಾಗ, ಚಂದ್ರನೂ ಸುಮ್ಮನಾದ.

  

ಚಂಪಕಳ ಮದುವೆ ನೆರವೇರಿತು. ಚಂದ್ರ ಒಂದೆರಡು ದಿನಗಳ ಮುಂಚೆ ರಜೆ ತೆಗೆದುಕೊಂಡು ಬಂದಿದ್ದ. ಬಂದಿದ್ದ ಆಹ್ವಾನಿತರು, ನೆಂಟರಿಷ್ಟರ ದೃಷ್ಟಿ ಚಂದ್ರನ ಮೇಲೆ ಇತ್ತು. ''ಹುಡುಗ ಇಂಜನಿಯರ್ರು, ಲಕ್ಷಣವಾಗಿದಾನೆ, ಕೆಲಸದಲ್ಲಿದಾನೆ... ಒಳ್ಳೆಯ ಕುಟುಂಬದವನು. ಒಟ್ಟನಲ್ಲಿ ಮದುವೆಗೆ ಸಿದ್ಧನಾಗಿರುವ ವರ ಎಂಬ ಅಭಿಪ್ರಾಯ. ಇದರ ಬಗ್ಗೆ ಅರಿವಿಲ್ಲದೇ ಚಂದ್ರ ಓಡಾಡಿಕೊಂಡಿದ್ದ. ಪೂರ್ಣಿಮಾ ಳೊಡನೆ ಮನಬಿಚ್ಚಿ ಮಾತನಾಡಲೂ ಅವಕಾಶವಾಗಿರಲಿಲ್ಲ. ಈ ನೆಂಟರಿಷ್ಟರ ನಡುವೆ ತಾನು ಹಾಯಾಗಿ ಮಾತರ್ನಾಡಲು ಆಗುವುದಿಲ್ಲವೆಂದು ತಿಳಿದಿತ್ತು. ಒಂದೆರಡು ಬಾರಿ, ಮದುಮಗಳ ಜೊತೆ ಜೊತೆ ನಗು ನಗುತ್ತಾ ಓಡಾಡುತ್ತಿದ್ದ ಪೂರ್ಣಿಮಾಳ ಬಗ್ಗೆ ವಿಚಾರಿಸಿದವರೂ ಉಂಟು...'' ಈ ವಿಷಯ ಕಿವಿಗೆ ಬಿದ್ದ ಚಂದ್ರ ಪೂರ್ಣಿಮಾಳ ಮೇಲೆಯೇ ರೇಗಿದ್ದ.

''ನೀನು ಎಲ್ಲರ ಎದುರಿಗೂ ಸುಮ್ಮನೇ ಕೆಲಸವಿಲ್ಲದಿದ್ದರೂ ತಿರುಗಾಡಬೇಡ. ಅವರೆಲ್ಲಾ ನಿನ್ನನ್ನೇ ನೋಡಿ ಏನೇನೋ ಆಡ್ತಿದಾರೆ ಅಂತ ಅಂದಾಗ, ಅವಳು ಕೆನ್ನೆ ಉಬ್ಬಿಸಿ ನಕ್ಕಿದ್ದಳು.''

''ಯಾಕೆ ? ಹೊಟ್ಟೆ ಒಳಗೆ ಉರಿತಿರುವ ಹಾಗಿದೆ. ಆಡಲಿ ಬಿಡು ನೋಡಲಿ ಬಿಡು.... ನನಗೇನೂ ದೃಷ್ಟಿ ತಾಗುಲ್ಲ ಇಲ್ಲಿ ದೃಷ್ಟಿ ಬೊಟ್ಟು ಇದೆ ನೋಡು....'' ಗಲ್ಲದಲ್ಲಿದ್ದ ಸಣ್ಣ ಕರಿ ಮಚ್ಚೆಯನ್ನು ತೋರಿಸಿದ್ದಳು. ಇದ್ದಕ್ಕಿದ್ದಂತೆ ಏಕವಚನದಲ್ಲಿ ಮಾತನಾಡಿಸಿದ್ದಳು.

''ನೀನು ನನ್ನ ಹೆಂಡತಿಯಾಗೋಳು.... ಅವರುಗಳು ನೋಡಿದ್ರೆ ಏನಾದ್ರೂ ಮಾತಾಡಿದ್ರೆ ನನಗೆ ಸಹಿಸುಲ್ಲ.''

''ಅತೀ ಆಡಬೇಡ ಚಂದ್ರ..... ನಾನಿನ್ನು ಅದರ ಬಗ್ಗೆ ಏನೂ ತೀರ್ಮಾನ ತಗೊಂಡಿಲ್ಲ.''

''ನೀನು ಬೇಕೂಂತ ನಿಧಾನ ಮಾಡ್ತಿದೀಯ....'' ಮತ್ತೆ ರೇಗಿದ್ದ.

''ನನಗೆ ಸಮಯ ಬೇಕು ಚಂದ್ರ.... ಪ್ಲೀಸ್...'' ಅವನನ್ನು ಸಾಗಿ ಹಾಕಲು ನೋಡಿದಳು.

''ಓ.ಕೇ... ನಾನು ಇನ್ನು ಎರಡು ದಿನ ಈ ಊರಿನಲ್ಲಿರುತ್ತೀನಿ. ಅಷ್ಟರಲ್ಲಿ ನಿನ್ನ ತೀರ್ಮಾನವನ್ನು ತಿಳಿಸಲೇಬೇಕು '' ಅವನು ಅಷ್ಟು ಹೇಳಿದ್ದೇ ಸಾಕು ಎನ್ನುವಂತೆ ಅವನಿಂದ ದೂರ ಓಡಿದ್ದಳು.

ಆರಾತ್ರಿ ಆರತಕ್ಷತೆಯ ಸಮಯದಲ್ಲಿ ಚೆನ್ನಾಗಿ ಅಲಂಕರಿಸಿಕೊಂಡು, ಚಂದ್ರನ ಹೊಟ್ಟೆ ಉರಿಸಬೇಕು, ಅವನು ರೇಗಿದರೆ ತಮಾಷೆಯಾಗಿ ಛೇಡಿಸಬೇಕೆಂದಕೊಂಡಳು. ಎಷ್ಟು ಹೊತ್ತಾದರೂ ಅವನ ಸುಳಿವು ಇಲ್ಲದಾದಾಗ ಅವಳಿಗೂ ಅಲ್ಲಿ ಇರುವ ಮನಸ್ಸಾಗದೇ ತನ್ನ ಸೋದರತ್ತೆಗೆ ಹೇಳಿ, ಅಲ್ಲಿಂದ ಮನೆಗೆ ಹೊರಟಳು.

''ಅತ್ತೆ ಓದೋದು ಬೇಕಾದಷ್ಟಿದೆ. ನಾನು ಹೋಗಿರ್ತೀನಿ. ನೀವು ನಿಧಾನವಾಗಿ ಬನ್ನಿ'' ಎಂದು ಹೇಳಿ ಬೀಗದ ಕೈ ತೆಗೆದುಕೊಂಡಳು. ಚಂದ್ರನ ಕೊಠಡಿಯ ದೀಪ ಉರಿಯುತ್ತಿದ್ದುದನ್ನು ಗಮನಿಸಿ, ಬಹುಶಃ ಅವನು ಮನೆಯಲ್ಲಿಯೇ ಇರ

ಬಹುದೆಂದುಕೊಂಡು ಅವನ ಮನೆಯ ಕಡೆ ನೋಡಿದಳು. ಬಾಲ್ಕನಿಯಲ್ಲಿ ಕತ್ತಲೆಯಲ್ಲಿ ನಿಂತಿದ್ದ ಚಂದ್ರ ಅವಳನ್ನು ಗಮನಿಸಿದ. ಭರ್ಜರಿಯಾಗಿ ಅಲಂಕರಿಸಿಕೊಂಡು ರಿಸೆಪ್ಷನ್‌ಗೆ ಹೊರಟಿದ್ದಾಳೆಂದು ಹಲ್ಲು ಕಡಿದ. ಹೇಗಾದರೂ ಅವಳು ಮದುವೆ ಮನೆಗೆ ಹೋಗದಂತೆ ತಡೆಯಬೇಕೆಂದುಕೊಂಡು, ಅಲ್ಲಿಂದಲೇ ಬಾಗಿ 'ಪೂರ್ಣಿಮಾ ಬಾಯಿಲ್ಲಿ' ಎಂದು ಮೆಲ್ಲಗಿನ ಧ್ವನಿಯಲ್ಲಿ ಕರೆದ.

''ಅರೇ... ಚಂದ್ರ ಮನೇಲಿ ಏನು ಮಾಡ್ತೀದಿಯಾ ? ಛತ್ರಕ್ಕೆ ಹೋಗಲಿಲ್ವಾ?'' ಬಾಲ್ಕನಿಗೆ ಹತ್ತಿ ಬಂದು ಕೇಳಿದಳು.

''ಇಲ್ಲ....'' ಸಣ್ಣಗೆ ತಲೆ ನೋಯುತ್ತಿತ್ತು.

''ಮಾತ್ರೆ ತಗೊಂಡಿದ್ರೆ ಆಗುತ್ತಿತ್ತು. ಕಾಫಿ ಕುಡಿದ್ಯೋ,ಇಲ್ವೋ ? ''

''ಕಾಫೀನೂ ಇಲ್ಲ, ಗೀಫೀನೂ ಇಲ್ಲ....''

''ನಾನು ಕಾಫಿ ತಂದುಕೊಡ್ತೀನಿ. ಮನೇಲಿ ಯಾರೂ ಇಲ್ವಾ !....''

''ಇಲ್ಲ. ಯಾರೂ ಇಲ್ಲ. ನನಗೆ ಕಾಫಿ ತಂದುಕೊಡ್ತೀಯಾ ಹಾಗಾದ್ರೆ... ''ಅವಳ ಅಲಂಕಾರವನ್ನೇ ಗಮನಿಸಿದ್ದ. ಅಸಹನೆ ಇಣುಕಿತ್ತು.

''ಈಗ ಬಂದೆ...''ಎನ್ನುತ್ತಾ ಅವಳು ಕೆಲವೇ ಕ್ಷಣಗಳಲ್ಲಿ ತನ್ನ ಮನೆಯಿಂದ ಕಾಫಿಯನ್ನು ಹಾಗೇ ಒಂದು ಸಾರಿಡಾನ್ ಮಾತ್ರೆಯನ್ನು ತಂದು ಅವನಿಗೆ ಕೊಟ್ಟಳು. ಗಟಗಟನೆ ಕಾಫಿಯನ್ನು ಕುಡಿದ. ಮಾತ್ರೆಯನ್ನು ನುಂಗಿದ... ಅವಳನನೇ ನುಂಗುವಂತೆ ನೋಡಿ ನುಡಿದ.

''ಮೊದಲು ಈ ಅಲಂಕಾರವನ್ನೆಲ್ಲಾ ಅಳಿಸ್ಕೋ.... ನಿನಗೆ ಒಂದು ಚೂರು ಒಪ್ತಿಲ್ಲ'' ಎಂದ. ಅವಳು ಕಿಲಕಿಲನೆ ನಕ್ಕಳು.

''ನಾನು ನಿನಗೋಸ್ಕರ ಮಾಡಿಕೊಳ್ಳಲಿಲ್ಲಪ್ಪಾ... ಬೆಳಿಗ್ಗೆ ಹೇಳಿದ್ದೆಯಲ್ಲ... ಅವರಿವರ ದೃಷ್ಟಿ ನನ್ನ ಮೇಲಿದೆ ಅಂತ... ಅದಕ್ಕೆ ಚೆನ್ನಾಗಿರಲಿ ಅಂತ ಹೀಗೆ ಮೇಕಪ್ ಮಾಡಿಕೊಂಡೆ.''

''ನಿನ್ನ ಅಲಂಕಾರ ಯಾವುದೇ ಇದ್ದರೂ ನನಗೋಸ್ಕರ ಇರಬೇಕು ಪೂರ್ಣಾ ... ಈಗ ಇದನ್ನೆಲ್ಲ ತೆಗೆದು ಹಾಕ್ತಿಯೋ ಅಥವಾ ನಾನೇ ತೆಗೀಲೋ...''

''ಧೈರ್ಯವಿದ್ದರೆ ತೆಗಿ ನೋಡೋಣ...''ಅವಳು ಅವನ ಬಳಿಗೆ ಸರಿದು ನಿಂತಳು. ಅವಳ ಸನಿಹ, ಅವಳ ಕಿಲಕಿಲ ನಗು, ಅವಳ ಸವಾಲು ಅವನಲ್ಲಿ ಹೊಸ ಆಸೆಯನ್ನು ಹುಟ್ಟಿಸಿತು.... ಅವಳನ್ನು ತನ್ನ ಬಳಿಗೆ ಎಳೆದುಕೊಂಡು ತಬ್ಬಿಕೊಂಡ. ''ಅರೇ ಏನ್ಮಾಡ್ತಿದೀಯ'' ಎಂದು ಕೊಸರಿಕೊಳ್ಳಲು ಪ್ರಯತ್ನಿಸಿದವಳನ್ನು ಮತ್ತು ಬಲವಾಗಿ ತಬ್ಬಿಕೊಂಡು ಉಸುರಿದ. ''ಐ ಲವ್ ಯೂ ಪೂರ್ಣಾ.... ''

''ನಂಗೊತ್ತು ಚಂದ್ರ, ಯೂ ಲವ್ ಮೀ ಅಂತ ... ಆದರೆ.... ಹೀಗ್ಯಾಕೆ ಆಡ್ತೀದಿಯಾಂತ....'' ಕೊಸರಿಕೊಳ್ಳುತ್ತಿದ್ದವಳನ್ನು ಮತ್ತು ಬಲವಾಗಿ ಹಿಡಿದ.

''ಪ್ರೀತಿಯ ಮುಂದಿನ ಹೆಜ್ಜೆ... ನೀನಿನ್ನು ಚಿಕ್ಕವಳು. ನಿನಗೆ ಏನೂ ಗೊತ್ತಿಲ್ಲ. ನೀನು

ಸುಮ್ಮನಿರು...''ಎನ್ನುತ್ತಾ ಮುಖದ ಮೇಲೆ ಮುತ್ತಿನ ಮಳೆ ಸುರಿಸಿದ. ತುಟಿಗೆ ತುಟಿ ಸೇರಿಸಿದ.

''ಏಯ್.... ಏಯ್.... ಬಿಡೋ....ಬಿಡೋ... ಎಂದು ಹೇಳುತ್ತಾ ಹೇಳುತ್ತಾ ಪೂರ್ಣಿಮಾ ಅವನ ಆಲಿಂಗನದ ಬಿಸಿಗೆ ಕರಗಿ ಹೋದಳು. ಹೊಸ ಅನುಭವದಲ್ಲಿ ತಮ್ಮನ್ನು ತಾವೇ ಮರೆತರು. ಚಂಪಕಳ ಮದುವೆಯ ಸಮಾರಂಭದ ರಾತ್ರಿ, ಈ ಪ್ರೇಮಿಗಳೂ ಒಂದಾಗಿದ್ದರು.''

ಸಮಯ ಕಳೆದು, ವಾಸ್ತವಕ್ಕೆ ಬಂದಾಗ, ಪೂರ್ಣಿಮಾ ನಾಚಿಕೆಯಿಂದ ಚಂದ್ರನನ್ನು ದೂಷಿಸಿದಳು.

''ಇದೇನಾಯ್ತು ಚಂದ್ರಾ... ಇದು ತಪ್ಪಲ್ವಾ ? ''

''ತಪ್ಪೇನಲ್ಲ ಪೂರ್ಣಾ.... ನೀನು ನನ್ನವಳು ; ನಾನು ನಿನ್ನವನು''

''ಆದರೆ ಮದುವೆಯಿನ್ನೂ ಆಗಿಲ್ಲವಲ್ಲ.''

''ಆಗಿಲ್ಲದಿದ್ದರೆ ಏನಾಯ್ತು ? ನೀನೇ ನನ್ನ ಹೆಂಡತಿ ಅಂತ ತೀರ್ಮಾನಿಸಿ ಯಾಗಿದೆ.''

''ಆದರೂ ಮದುವೆಯಾಗೋವರೆಗೂ ನಾವು ಸಂಯಮದಿಂದ ಇರ ಬೇಕಾಗಿತತ್ತು.''

''ನಾನು ಸಂಯಮದಿಂದಲೇ ಇದ್ದೆ. ನೀನೇ ಕೆರಳಿಸಿದವಳು.... ನನ್ನ ಅಲಂಕಾರ ಕೆಡಿಸು ಧೈರ್ಯವಿದ್ದರೆ ಅಂತ ಹತ್ತಿರ ಬಂದು ನಿಂತವಳು ನೀನೇ ತಾನೇ.... '' ಅವನು ನಕ್ಕ.

''ಪ್ಲೀಸ್ ನಗಬೇಡ ಚಂದ್ರ.... ನಿನ್ನ ತಮಾಷೆ, ನನಗೆ ಇಷ್ಟವಾಗುತ್ತಿಲ್ಲ.''

''ನಾನು ಇಷ್ಟವಾದ ಮೇಲೆ ನನ್ನ ತಮಾಷೆಯೂ ನಿನಗೆ ಇಷ್ಟವಾಗಲೇಬೇಕು.. ಈಗ ಮದುವೆ ಬಗ್ಗೆ ನೀನು ಬೇಗ ತೀರ್ಮಾನ ತಗೊಳ್ಳಲೇ ಬೇಕು ಗೊತ್ತಾಯ್ತಾ ? '' ಈಗ ಪೂರ್ಣಿಮಾ ಗಂಭೀರಳಾದಳು.

''ಅಂದ್ರೆ... ಇದೆಲ್ಲ ಮುಂಚಿತವಾಗಿ ಪ್ಲಾನ್ ಮಾಡಿದ್ಯಾ ? ''

''ಇಲ್ಲ ಪೂರ್ಣಾ.... ಈಗ ನಡೆದದ್ದು ಆಕಸ್ಮಿಕ... ಆದರೆ ನಾವು ಆದಷ್ಟು ಬೇಗ ಮದುವೆಯಾಗಬೇಕು ಅಂತ ಅಂದೆ ಅಷ್ಟೆ ''

ಹೀಗೆ ದಿನಗಳು ಸರಿದು, ತಿಂಗಳುಗಳು ಉರುಳಿದವು. ಈಗ ಪೂರ್ಣಿಮಾ ಕೇ ವರ್ಷದ ಪರೀಕ್ಷೆಗೆ ಕುಳಿತಿದ್ದಳು. ಚಂದ್ರ ನಾಲ್ಕಾರು ಕಂಪನಿಗಳ ಕೆಲಸವನ್ನು ಬಿಟ್ಟು ಹೊಸ ಕಂಪನಿಗೆ ಸೇರಿದ್ದ. ಏನೋ ನಿಸ್ಸಹಾಯಕತೆ ಅವನನ್ನು ಕಾಡುತ್ತಿತ್ತು. ಅದೇನೆಂದು ಅವನಿಗೇ ಅರ್ಥವಾಗಿರಲಿಲ್ಲ. ಒಂದೆರಡು ಬಾರಿ ಹಬ್ಬದ ಸಮಯದ ರಜದಲ್ಲಿ ಊರಿಗೆ ಬಂದಿದ್ದ. ಆಗ ಪೂರ್ಣಿಮಾ ಸಿಗಲಿಲ್ಲ. ಏಕೋ ಏನೋ ಅವಳಿಗಾಗಿ ಅವನು ಚಡಪಡಿಸಲಿಲ್ಲ. ಮತ್ತೊಮ್ಮೆ ಊರಿಗೆ ಬಂದಿದ್ದಾಗ, ಅವಳಾಗಿಯೇ ಅವನನ್ನು ಕಂಡು ಮಾತನಾಡಿಸಿದ್ದಳು. ಯಾವ ದುಗುಡ, ಅಸಹನೆಗಳಲ್ಲಿದೇ ನೇರವಾಗಿ ಹಿಂದಿನಂತೆಯೇ ಮಾತನಾಡಿಸಿದವಳನ್ನು ಕಂಡು ಅವನಿಗೆ ಆಶ್ಚರ್ಯವಾಗಿತ್ತು, ಹಾಗೆ ಏನೋ ಸಂದೇಹ ಕೂಡಾ. ಯಾವ

ಆಕ್ಷೇಪಣೆಯನ್ನು ಮಾಡದೇ ಸಲೀಸಾಗಿದಾಳಲ್ಲ ಏನೋ ಗುಟ್ಟಿದೆಯೆಂದೇ ಎನಿಸಿತ್ತು. ಆದರೆ ಅವಳು ಯಾವ ಸಲುಗೆ, ಸದರವನ್ನು ತೋರದೇ ದೂರ ದೂರವಾಗಿಯೇ ಇದ್ದಾಗ, ಅನುಮಾನ ಬಲವಾಗಿತ್ತು. ಬಹುಶಃ ಇವಳಿಗೆ ತನ್ನ ಸ್ನೇಹ ಪ್ರೀತಿ ಬೇಡವಾಗಿರಬಹುದೆ ? ಮೇಲ್ನೋಟಕ್ಕೆ ನಗುನಗುತ್ತ ಮಾತನಾಡಿ, ತನ್ನನ್ನು ದೂರ ಮಾಡುತ್ತಿರಬಹುದೇ ಎಂಬ ಸಂಶಯ ಕಾಡಿದಾಗ ಅನುಮಾನದೊಂದಿಗೆ ಆಕ್ರೋಶವೂ ಸೇರಿಕೊಂಡಿತ್ತು.

ತಾನು ತನ್ನ ಕೆಲಸ ಕಾರ್ಯಗಳ ತಾಪತ್ರಯದಲ್ಲಿ ಇವಳ ಪತ್ರಗಳಿಗೆ ಉತ್ತರ ಬರೆಯಲಿಲ್ಲ ನಿಜ. ಹಾಗಂತ ಇವಳನ್ನೇನೂ ಮರೆತಿಲ್ಲ. ಇವಳಿಗೆ ಮುಂಚಿನಂತೆ ಪ್ರಾಮುಖ್ಯತೆ ಕೊಟ್ಟಿರಲಿಲ್ಲ. ಆದರೆ ಅದನ್ನೇ ಕಾರಣವಾಗಿಟ್ಟುಕೊಂಡು, ಇವಳು ತನಗೆ ತಿಳಿಯದಂತೆ ಮತ್ತೊಬ್ಬನ ಸ್ನೇಹಗಳಿಸಿರಬಹುದೇ ? ಎಂಬ ಸಂಶಯದ ಹಕ್ಕಿ ಕೊಕ್ಕಿನಿಂದ ಕುಕ್ಕಲಾರಂಭಿಸಿದಾಗ, ಚಡಪಡಿಸಿದ. ಒರಟಾಗಿ ಅವಳನ್ನ ತನ್ನೆಡೆಗೆ ಎಳೆದುಕೊಂಡ. ಅವಳು ಕೊಸರಿಕೊಂಡಳು.

''ಯಾಕೆ ಪೂರ್ಣಾ? ನಾನೀಗ ಬೇಡವಾದ್ನಾ !'' ವ್ಯಂಗ್ಯದಿಂದ ಪ್ರಶ್ನಿಸಿದ. ಅವಳು ನೇರವಾಗಿ ಅವನನ್ನೇ ನೋಡಿದಳು.

''ಇದೇ ಪ್ರಶ್ನೇನ ನಾನು ಕೇಳಬೇಕೂಂತ ಅಂದುಕೊಂಡಿದ್ದೆ ಚಂದ್ರ. ನನ್ನ ಪತ್ರಗಳಿಗೆ ಉತ್ತರ ಬರೆಯಲೂ ಬೇಡವೆನ್ನಿಸ್ತಾ ನಿನಗೆ ? ನಾನು ಏನೂಂತ ತಿಳಕೋಬೇಕು ? ''

''ನಾನು ರಸವತ್ತಾಗಿ ಬರೆದ ಪತ್ರಗಳಿಗೆಲ್ಲಾ ನೀರಸವಾಗಿ ಉತ್ತರ ಬರೆಯುತ್ತಿದ್ದವಳು ನೀನು. ಯಾಕೆ ಈಗ, ಆ ಘಟನೆಯ ನಂತರ ನನ್ನ ರಸಿಕತೆಯ ಪತ್ರಗಳನ್ನು ನಿರೀಕ್ಷಿಸುತ್ತಿದ್ದೆಯಾ? ಅದಕ್ಕೇ ನಾನು ಬೇಕೂಂತ ಬರೀಲಿಲ್ಲ.''

''ಏನು ಅದರ ಅರ್ಥ ?''

''ಏನೂ ಇಲ್ಲ. ನನ್ನ ಮಹತ್ವ ನಿನಗೆ ತಿಳಿಯಲಿ ಅಂತ ಸುಮ್ಮನಿದ್ದೆ. ಆದರೆ ಈಗ ಅನ್ನಿಸುತ್ತೆ.... ನನ್ನ ಬಗ್ಗೆ ನಿನಗೆ ಯಾವ ಭಾವನೆಯೂ ಇಲ್ಲ ಅಂತ.''

''ಅದ್ಹೇಗೆ ಹೇಳ್ತೀಯಾ ? ಅದನ್ನು ಬಾಯಿಬಿಟ್ಟು ಹೇಳಬೇಕಾ ?''

''ಹಾಗಾದರೆ ಕೊಸರಿಕೊಂಡು ದೂರ ಹೋದದ್ದು ಯಾಕೆ ? ''

''ಒಂದು ಬಾರಿ ಅವಿವೇಕ ನಡೆಯಿತು ಚಂದ್ರ... ಅದರಿಂದ ನನ್ನ ಬಾಳಿಗೆ ಕಳಂಕ ಬರುವಂಥದ್ದು ಏನೂ ಬದಲಾವಣೆ ಆಗಲಿಲ್ಲ. ನಾನು ಬದುಕಿದೆ... ಈಗ ಕೇವಲ ಒಂದು ತಿಂಗಳಿನೊಳಗೆ ನನ್ನ ಪರೀಕ್ಷೆ ಮುಗಿಯುತ್ತೆ. ನಂತರ ನಾವು ಮದುವೆ ಯಾಗೋಣ.... ಆಮೇಲೆ ಯಾವ ಭಯವೂ ಇಲ್ಲ....''

''ಹಾಗಾದ್ರೆ ಈಗ ಒಂದೇ ಒಂದು ಸಲ ನನ್ನ ಆಸೆಯನ್ನು ಪೂರೈಸು.... ಈ ಒಂದು ತಿಂಗಳಿನೊಳಗೆ ನಿನ್ನಲ್ಲಿ ಏನು ಬದಲಾವಣೆಯೂ ಆಗುಲ್ಲ. ಆದರೂ ಹೆದರಬೇಕಾಗಿಲ್ಲ'' ಕೆಕ್ಕರಿಸಿ ನೋಡುತ್ತ ನುಡಿದವನನ್ನು ಕಂಡು ಹೆದರಿದಳು. ಇನ್ನು ಇಲ್ಲಿಯೇ ನಿಂತಿದ್ದರೆ ಬಲಾತ್ಕಾರ ಮಾಡುವವನೇ ಎಂದುಕೊಂಡು, ಹಿಂದೆ ಹಿಂದೆ ಸರಿದು ಮೆಟ್ಟಿಲಿಳಿದು ಕೆಳಗೆ ಬಂದಳು. ಅವನು ಜೋರಾಗಿ ಗಹಗಹಿಸಿ ನಕ್ಕಿದ್ದು ಕೇಳಿಸಿತ್ತು. ಪರೀಕ್ಷೆ ಮುಗಿಯುವವರೆಗೂ

ಇವನ ಬಗ್ಗೆ ಯೋಚಿಸಲೇಬಾರದು.... ಎಂದುಕೊಂಡಳು.

ಪರೀಕ್ಷೆ ಮುಗಿಯುತ್ತಿದ್ದಂತೆ ಅವಳು ತನ್ನ ಊರಿಗೆ ಹೊರಟು ಹೋಗಿದ್ದಳು. ಮರೆಯದೇ ಚಂದ್ರನಿಗೆ ಪತ್ರಗಳನ್ನು ಬರೆದಳು. ಅವನಿಂದ ಉತ್ತರ ಬಾರದಿದ್ದಾಗ, ನಿಜಕ್ಕೂ ಬೇಸರವಾಗಿತ್ತು. ಗಾಬರಿಯೂ ಆಗಿತ್ತು. ತಾಯಿಯೊಡನೆ ನಡೆದುದನೆಲ್ಲಾ ಹೇಳಿಬಿಟ್ಟಳು. ಶ್ರೀಮತಿಗೆ ದಿಗಿಲಾಗಿತ್ತು. ಗಂಡನಿಗೆ ಈ ವಿಷಯ ತಿಳಿದರೆ, ತನ್ನ ಅಣ್ಣನ ಮನೆಯವರನ್ನು ಹೀನಾಮಾನ ಅನ್ನದೇ ಬಿಡುವವನಲ್ಲ ಎಂದುಕೊಂಡು, ಅಣ್ಣನಿಗೆ ಬರುವಂತೆ ಕಾಗದ ಬರೆದಳು

ತಂಗಿಯ ಮಾತುಗಳನ್ನು ಕೇಳಿ ಕೇಶವ ತಪ್ಪಿತಸ್ಥನಂತೆ ತಲೆ ತಗ್ಗಿಸಿದ. ಪೂರ್ಣಿಮಾ ತನ್ನ ಜವಾಬ್ದಾರಿಯಾಗಿದ್ದಳು. ಅವಳ ಈ ಚಟುವಟಿಕೆ ತಮ್ಮ ಮನೆಯವರ್‍ಯಾರಿಗೂ ತಿಳಿಯದು. ಆದರೆ ಯಾರಿಗೆ ಈ ವಿಷಯ ತಿಳಿದರೂ, ತಮ್ಮನ್ನೇ ಅನ್ನುವುದು ನಿಜ. ಈಗ ಈ ಧರ್ಮಸಂಕಟದಿಂದ ಹೇಗಾದರೂ ಪಾರಾಗಲೇಬೇಕು. ಈ ವಿಷಯವನ್ನು ಬಯಲು ಮಾಡುವಂತಿಲ್ಲ. ಚಂದ್ರ ಕೂಡಾ ತನ್ನ ತಂದೆತಾಯಿಯರಿಗೆ ಈ ವಿಷಯ ತಿಳಿಸಿಲ್ಲವೆಂದು ಕಾಣುತ್ತೆ. ಈಗ ಅವರುಗಳಿಗೆ ತಿಳಿಸಿದರೆ ಏನಾಗಬಹುದು! ಇವಳನ್ನು ಮದುವೆ ಮಾಡಿಕೊಳ್ಳಲು ಒಪ್ಪಿಗೆ ಕೊಡದಿದ್ದರೆ? .... ಹಾಗಾಗಬಾರದು. ಮೊದಲು ಚಂದ್ರನೊಡನೆ ಮಾತನಾಡಬೇಕು. ಅವನು ಒಪ್ಪಿದ್ದರೆ, ಯಾರೂ ತಕರಾರು ಮಾಡುವಂತಿಲ್ಲ ಎಂದುಕೊಂಡು ಚಂದ್ರನ ಚಿಕ್ಕಪ್ಪನ ವಿಳಾಸವನ್ನು ಪಡೆದು ಬೆಂಗಳೂರಿಗೆ ಹೊರಟ.

ಚಂದ್ರನ ಚಿಕ್ಕಪ್ಪ ಕೇಶವನನ್ನು ನೋಡಿದ್ದರು. ಕ್ಷೇಮ ಸಮಾಚಾರದ ಮಾತುಗಳ ನಂತರ ಕೇಶವ ಮುಖ್ಯವಾದ ಮಾತಿಗೆ ಇಳಿದ.

''ಚಂದ್ರ, ಪೂರ್ಣಿಮಾಳನ್ನು ಪ್ರೀತಿಸುತ್ತಿದಾನೆ ಎನ್ನುವ ವಿಚಾರವನ್ನು ಅವನು ಯಾರಿಗೂ ತಿಳಿಸದೇ ಇರಬಹುದು. ಆದರೆ ಆ ಪ್ರೀತಿ ಎಷ್ಟು ಮುಂದುವರಿದಿದೆ ಎನ್ನುವುದು ಬಹುಶಃ ನಿಮಗ್ಯಾರಿಗೂ ತಿಳಿದಿಲ್ಲ... ಆದ್ದರಿಂದ ಆದಷ್ಟು ಬೇಗ ಇವರಿಬ್ಬರ ವಿವಾಹ ನೆರವೇರಬೇಕು. ಅದಕ್ಕೆ ನಾನು ಚಂದ್ರನನ್ನು ಕಂಡು ಮಾತನಾಡಿ ಹೋಗೋಣ ಅಂತ ಬಂದೆ. ಈ ವಿಷಯ ಅವನ ತಂದೆ ತಾಯಿಗೆ ಸಹ ತಿಳಿದಿಲ್ಲ ಅಂತ ಕಾಣಸುತ್ತೆ.''

ಚಿಕ್ಕಪ್ಪ ಸಮಾಧಾನವಾಗಿ ನುಡಿದ. ''ಹೌದು ಅವನ ಪ್ರೇಮ ಪ್ರಕರಣ ನನ್ನ ಹೊರತು ಬೇರೆ ಯಾರಿಗೂ ತಿಳಿಯದು. ಏನೋ ಹುಡುಗಾಟದ ವಯಸ್ಸು... ಕ್ರಮೇಣ ನಿಂತು ಹೋಗುತ್ತೆ ಅಂತ ನಾನು ಅಂದುಕೊಂಡಿರಲಿಲ್ಲ. ಸಮಯ ಬಂದಾಗ ನಮ್ಮ ಅಣ್ಣ ಅತ್ತಿಗೆಯರ ಹತ್ತಿರ ಮಾತನಾಡಿದರಾಯ್ತು ಅಂತ ಅಂದುಕೊಂಡಿದ್ದೆ. ಈಗ ಯಾವ ಕಾಲವೂ ಮಿಂಚಿಲ್ಲ. ಈಗ ನೀವೇಕೆ ಗಾಬರಿಯಾಗ್ತೀರೋ ನನಗೆ ತಿಳಿಯದು. ಅವಳ ಪರೀಕ್ಷೆ ಮುಗಿಯಿತೆ! ಹೇಗೆ ಮಾಡಿದಾಳೆ? ''

ಅವರ ಮಾತಿನ ವರಸೆ ಕೇಶವನಿಗೆ ಹಿಡಿಸಲಿಲ್ಲ, ರೇಗಿತು. ''ನಾವು ಹೆಣ್ಣು ಹೆತ್ತವರ ಕಡೆಯವರು. ನಮಗೆ ಆತಂಕವಿರದೇ ಇರುತ್ತದೆಯೇ ! ನಾನು ಚಂದ್ರನೊಡನೆ ಮಾತನಾಡಿಯೇ ಇಲ್ಲಿಂದ ಹೋಗುವುದು.''

''ಚಂದ್ರ ಈಗ ಇಲ್ಲಿಲ್ಲ. ಬೇರೆ ಮನೆ ಮಾಡಿಕೊಂಡು ಹೋಗಿದಾನೆ. ನಾನು ಅವನನ್ನು ಕರೆಸ್ತೀನಿ. ಮಾತಾಡೋರಂತೆ''ಎನ್ನುತ್ತಾ ಪೋನಿನಲ್ಲಿ ಮಾತಾಡಿ ಚಂದ್ರನಿಗೆ ಬರುವಂತೆ ಹೇಳಿದ.

''ಚಂದ್ರನಿಗೆ ಈ ಮೊದಲೇ ಬುದ್ಧಿವಾದ ಹೇಳಿದ್ದೆ. ಪೂರ್ಣಿಮಾಳೊಡನೆ ಪತ್ರ ವ್ಯವಹಾರವಿತ್ತು . ಎರಡು ವರ್ಷದ ಕೆಳಗೇ ಅವಳನ್ನು ಮದುವೆಯಾಗುವ ಹಂಬಲದಲ್ಲಿದ್ದವನು. ಆದರೆ ಏನಾಯ್ತೋ, ನಾಲ್ಕಾರು ಕಂಪನಿಗಳ ಕೆಲಸ ಬದಲಾಯಸಿದ ಮೇಲೆ ಅವನು ಮೊದಲಿನಂತಿಲ್ಲ ಅಂತ ಅನ್ನಿಸ್ತು. ಬೇರೆ ಮನೆ ಮಾಡಿಕೊಂಡು ಹೊರಟು ಹೋದ. ಈಗಿನ ಕಾಲದ ಹುಡುಗ್ರು, ಬೇಗ ಉದ್ವೇಗಕ್ಕೆ ಒಳಗಾಗ್ತಾರೆ. ... ಬೇಗ ಕೋಪ ಬರುತ್ತೆ. ಹಿರಿಯರ ಮಾತಿಗೆ ಬೆಲೆ ಕೊಡುಲ್ಲ.... ''

ಈ ಮಾತುಗಳು ಕೇಶವನಿಗೆ ಬೇಡವಾಗಿತ್ತು. ಆದಷ್ಟು ಬೇಗ ಚಂದ್ರನೊಡನೆ ವ್ಯವಹಾರದ ಮಾತುಗಳನ್ನಾಡಿದರೆ ಸಾಕೆಂದು ಚಡಪಡಿಸತ್ತಿದ್ದ. ಚಿಕ್ಕಪ್ಪ ತಂದಿತ್ತ ಕಾಫಿ ತಿಂಡಿಯ ಮೇಲೆ ಅವನ ಗಮನವಿರಲಿಲ್ಲ.

ಚಂದ್ರ ಬಂದವನು ಕೇಶವನನ್ನು ಕಂಡು, ಕಣ್ಣರಳಿಸಿದ. ಯಾವ ಬೇರೆ ಭಾವನೆಯನ್ನು ತುಳುಕಿಸಲಿಲ್ಲ. ಕೈಕುಲುಕಿ, ಸಂತಸವನ್ನು ವ್ಯಕ್ತಪಡಿಸಿದ. ಊರಿನಲ್ಲಿ ಎಲ್ಲಾ ಹೇಗಿದ್ದಾರೆಂದು ವಿಚಾರಿಸಿದ ಕೇಶವನ ಆತಂಕ ಕಡಿಮೆಯಾಗಿತ್ತು. ಅನಗತ್ಯವಾಗಿ ತಾನು ಗಾಬರಿಗೊಂಡನೇನೋ ಎಂದೆನಿಸಿತ್ತು. ಚಿಕ್ಕಪ್ಪನೇ ಮಾತನ್ನು ಪ್ರಾರಂಭಿಸಿದರು.

''ಪೂರ್ಣಿಮಾಳ ಪರೀಕ್ಷೆ ಮುಗೀತಂತೆ... ಮದುವೆ ಯಾವಾಗ ಇಟ್ಟುಕೊಳ್ಳೋಣ ಅಂತ ವಿಚಾರಿಸ್ತಾ ಇದಾರೆ.. ''

''ಓ.... ಹಾಗೇ ಏನಾದ್ರೂ ಇರಬಹುದು ಅಂತ ಅದ್ಕೊಂಡೆ... ನಮ್ಮ ತಂದೆ ತಾಯಿ ಹತ್ತಿರ ಮಾತಾಡಿ ಆಯಿತಾ ಅಂಕಲ್ ? ''

''ಇಲ್ಲ ಚಂದ್ರ.... ಮೊದಲು ನಿನ್ನ ಬಳಿಗೇ ಬಂದಿದೀನಿ. ನಿಮ್ಮಿಬ್ಬರ ಪ್ರೀತಿಯ ವಿಷಯ ಅವರಿಗೆ ತಿಳಿದಿಲ್ಲ ಅಂತ ನನಗೆ ಗೊತ್ತು. ''

''ಆದರೆ ಅವರ ಒಪ್ಪಿಗೆ ಇಲ್ಲದೇ ನಾನು ಮದುವೆಯಾಗುವುದಾದರೂ ಹೇಗೆ? ಮೊದಲು ಅವರ ಹತ್ತಿರ ಮಾತ್ನಾಡಿ.''

''ಇದೇನೋ ಈಗ ಹೀಗೆ ಹೇಳ್ತೀಯ ಚಂದ್ರಾ ? ಅವರನ್ನು ಕೇಳಿ ನೀನು ಅವಳನ್ನೇನೂ ಪ್ರೀತಿಸಲಿಲ್ಲ ಅಲ್ವಾ ? '' ಚಿಕ್ಕಪ್ಪ ನುಡಿದರು.

''ಅಮ್ಮ ಅಪ್ಪ ಒಪ್ಪಿದರೆ ನನ್ನದೇನು ಅಭ್ಯಂತರವಿಲ್ಲ, ... ನಾನು ಪ್ರೀತಿಸಿದ್ದು ನಿಜ. ಆದರೆ ಎರಡು ವರ್ಷಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಪೂರ್ಣಿಮಾ ಈಗಲೂ ನನ್ನನ್ನು ಪ್ರೀತಿಸುತ್ತಿದ್ದಾಳೆ ಅಂತ ನನಗೆ ಗೊತ್ತಿರಲಿಲ್ಲ.''

ಅವನ ಕಪಾಲಕ್ಕೆ ಬಾರಿಸಬೇಕೆಂದೆನಿಸಿತ್ತು ಕೇಶವನಿಗೆ. ಆದರೆ ಕೋಪವನ್ನು ತಡೆದುಕೊಂಡ

''ಹಾಗಾದ್ರೆ ನಾನಿನ್ನು ಬರ್ತೀನಿ. ನಿಮ್ಮ ತಂದೆ ತಾಯಿಗಳ ಹತ್ತಿರ ಮಾತನಾಡಿ

ಮುಹೂರ್ತದ ದಿನವನ್ನು ಗೊತ್ತು ಮಾಡ್ತೀನಿ.'' ಎನ್ನುತ್ತಾ ಎದ್ದ. ಅವರೊಂದಿಗೆ ಬಸ್‌ಸ್ಟಾಪಿನವರೆಗೂ ಚಿಕ್ಕಪ್ಪ ಬಂದರು.

''ನೀವೇನೂ ಯೋಚಿಸಬೇಡಿ, ಅವನ ತಂದೆ ತಾಯಿ ಖಂಡಿತಾ ಒಪ್ಕೋತಾರೆ. ... ಚಂದ್ರ ಏನೇನೋ ಆಡಿದ ಅಂತ ಮನಸ್ಸನ್ನ ಕೆಡಿಸ್ಕೋ ಬೇಡಿ. ನಾನು ಚಂದ್ರನ ಹತ್ತಿರ ಮಾತನಾಡ್ತೀನಿ'' ಅವರು ವಿಶ್ವಾಸದಿಂದ ಆಶ್ವಾಸನೆ ನೀಡುವಂತೆ ಕೈ ಕುಲುಕಿದಾಗ ಕೇಶವ ತಲೆಯಾಡಿಸಿದ.

ಚಂದ್ರ ಆಡಿದಂತೆಯೇ ಆಗಿತ್ತು. ಅವನ ತಂದೆತಾಯಿಗಳು ಈ ಸಂಬಂಧಕ್ಕೆ ಮೊದಲಿಗೆ ಒಪ್ಪಿಗೆ ಕೊಡಲಿಲ್ಲ. ತಮಗೆ ಈ ಪ್ರೀತಿಯ ಬಗ್ಗೆ ಏನೂ ತಿಳಿಯದೆಂದರು. ಕೇಶವನಿಗೆ ಅವಮಾನವಾದಂತಾಗಿತ್ತು.

'' ನಾನು ನೆನ್ನೆ ದಿನ ನಿಮ್ಮ ಮಗನ ಹತ್ತಿರ ಮಾತನಾಡಿಕೊಂಡು ಬಂದಿದೀನಿ. ನಿಮ್ಮ ತಮ್ಮನಿಗೂ ಸಹ ಈ ವಿಷಯ ತಿಳಿದಿದೆ. ಈಗ ನಿಮ್ಮ ಒಪ್ಪಿಗೆ ಮುಖ್ಯವಾಗಿದೆ. ಆದಷ್ಟು ಬೇಗ ವಿವಾಹ ಶುಭಕಾರ್ಯ ನಡೆದುಹೋಗಲಿ ದಯವಿಟ್ಟು ಒಪ್ಪಿಗೆ ಕೊಡಿ.''

''ನಮ್ಮ ಹಿಂದೆ ಹಿಂದೆ ಈ ತಿಳುವಳಿಕೆ ಇಲ್ಲದ ಹುಡುಗ್ರು ಏನೋ ಮಾಡಿಕೊಳ್ಳೋದು.... ನಾವು ಇಕ್ಕಟ್ಟಿಗೆ ಸಿಕ್ಕಿ ಬೀಳಬೇಕಾಗಿದೆ.'' ಮೈಲಾರಯ್ಯನ ಮಾತು ಕೇಶವನ ಕೆನ್ನೆಗೆ ಹೊಡೆದಂತಾಗಿತ್ತು. ಎದ್ದು ನಿಂತ.

''ನಾವೂ ಇಕ್ಕಟ್ಟಿಗೆ ಸಿಕ್ಕಿ ಬಿದ್ದುದರಿಂದ, ಹೃದಯವನ್ನು ಒಂದು ಹಿಡಿ ಮಾಡಿಕೊಂಡು ನಿಮ್ಮಲ್ಲಿಗೆ ಬಂದಿದೀನಿ. ಏಷ್ಟಾಗಲೀ ನಾವು ಹೆಣ್ಣು ಹೆತ್ತವರ ಮನೆಯವರು. ನೀವೀಗ ದೊಡ್ಡ ಮನಸ್ಸು ಮಾಡದಿದ್ದರೆ ನಮ್ಮ ಪೂರ್ಣಿಮಾಳ ಬಾಳು ಹಾಳಾಗಿ ಹೋಗುತ್ತದೆ. ಚಂದ್ರ–ಪೂರ್ಣ ಇಬ್ಬರೂ ಗುಟ್ಟಾಗಿ ಪ್ರೀತಿಸಿ, ಏನೇನೋ ಮಾಡಿಕೊಂಡು ಬಿಟ್ಟಿದಾರೆ. ಈಗ ಅದನ್ನು ಸರಿಮಾಡಬೇಕಾದದ್ದು ಹಿರಿಯರ ಕರ್ತವ್ಯವಾಗಿದೆ. ನಮ್ಮ ಪರಿಸ್ಥಿತಿ ನಿಮಗೂ ಅರ್ಥವಾಗುತ್ತೆ ಅಂತ ಭಾವಿಸಿದೀನಿ'' ಎಂದು ಕೈ ಮುಗಿದು ಹೊರಬಂದ.

ಇದ್ದಕ್ಕಿದ್ದಂತೆ ಚಂದ್ರ ತನ್ನ ಚಿಕ್ಕಪ್ಪನೊಡನೆ ಬಂದಿಳಿದಾಗ ಮೈಲಾರಯ್ಯ ದಂಪತಿಗಳು ಆಶ್ಚರ್ಯಗೊಂಡರು. ಸ್ವಲ್ಪ ಹೊತ್ತು ಸುಧಾರಿಸಿಕೊಂಡ ನಂತರ, ಮೈಲಾರಯ್ಯನ ತಮ್ಮ ಮಾತನಾಡಿದರು.

''ಈಗ ಈ ಮದುವೆಗೆ ಒಪ್ಪಿಗೆ ಕೊಡದೇ ವಿಧಿ ಇಲ್ಲ ಅತ್ತಿಗೆ, ಆ ಹುಡುಗಿಯನ್ನು ಈ ಪ್ರೀತಿಯ ಜಾಲಕ್ಕೆ ಎಳೆದವನು ಈ ನಿಮ್ಮ ಮಗನೇ. ಆ ಹುಡುಗಿಯ ಮೇಲೆ ಅತ್ಯಾಚಾರ ನಡೆದಿದೆ, ಬಲಾತ್ಕಾರ ನಡೆದಿದೆ ಅಂತ ಅವರುಗಳು ಕೇಸ್‌ಹಾಕಿದರೆ ಏನು ಮಾಡ್ತೀರ ? ಇವನು ಬರೆದ ಪ್ರೇಮ ಪತ್ರಗಳು ಅವರ ಹತ್ತಿರ ಇದೆ....''

''ಈ ಹುಡುಗರ ಹುಡುಗಾಟಕ್ಕೆ ನಾವೇಕೆ ತಲೆಬಾಗಬೇಕು ? ನಂಗೊತ್ತಿತ್ತು. ಈ ಚಂದ್ರ ಇಂತಹ ಅವಿವೇಕದ ಕೆಲಸ ಮಾಡಿಯೇ ಮಾಡ್ತಾನೆ ಅಂತ. ತಲೆ ಎತ್ತಿ ತಿರುಗಾಡದ ಹಾಗೆ ಮಾಡಿಬಿಟ್ಟೆಯಲ್ಲೋ... ಅವಿವೇಕಿ...'' ಚಂದ್ರನ ಕಡೆ ತಿರುಗಿ ಗುಡುಗಿದರು ಮೈಲಾರಯ್ಯ.

''ಈಗೇನಾಯ್ತು? ನಾನೇನು ಮದುವೆ ಬೇಡಾಂತ ಅನ್ನಲಿಲ್ಲವಲ್ಲ, ನಾನು ಅವಳನ್ನೇ ಮದುವೆಯಾಗೋದು....''

''ನೀನೇ ನಮಗೊಂದು ಮಾತು ಮುಂಚೇನೇ ಹೇಳಿದ್ರೆ.... '' ತಾಯಿಯ ಚುಚ್ಚು ಮಾತಿಗೆ ರೇಗಿದ.

''ನಮ್ಮ ಪ್ರೀತಿ ನಮ್ಮ ಪರ್ಸನಲ್ ವಿಷಯ ಕಣಮ್ಮಾ... ನಿನಗೆ ನನ್ನ ಮದುವೆಗಿಂತ ಚಂಪಕಳ ಮದುವೆಗೆ ಅವಾಂತರವಿತ್ತು. ನನ್ನನ್ನೊಂದು ಮಾತು ಕೇಳಲಿಲ್ಲ ನೀನು. ಆಗಲೇ ಇದೆಲ್ಲ ನಡೆದದ್ದು. ಇದರಲ್ಲಿ ಅವಳ ತಪ್ಪು ಏನಿಲ್ಲ. ಈಗ ನೀನು ಮದುವೆಗೆ ಒಪ್ಪಿಗೆ ಕೊಟ್ಟರೆ ಸರಿ, ಕೊಡದಿದ್ದರೂ ಪರವಾಗಿಲ್ಲ. ನಾವಿಬ್ಬರೂ ದೇವಸ್ಥಾನದಲ್ಲಿ ಮದುವೆಯಾಗ್ತೀವಿ. ಆಮೇಲೆ ನನ್ನನ್ನು ಹಂಗಿಸಬೇಡ. ''

''ಇದೇನೋ ಹೀಗೆ ಮಾತನಾಡ್ತೀತಿಯ. ನಾನು ನಿನ್ನ ತಾಯಿ ಕಣೋ''

''ಹೌದು ಗೊತ್ತು... ಅದಕ್ಕೇ ಹೇಳಿದ್ದು. ಈಗಲಾದರೂ ಮಗನ ಆಸೆ ಏನೂಂತ ತಿಳಿಯಿತಲ್ಲ.... ''ಅವನು ಸಿಟ್ಟಿನಿಂದ ಎದ್ದು ಅಲ್ಲಿಂದ ನಡೆದಾಗ, ಎಲ್ಲರೂ ಮುಖ ಮುಖ ನೋಡಿಕೊಂಡರು.

''ಈಚೆಗೆ ಯಾಕೋ ಹೀಗೆ ಅವನ ಸಿಡಿ ಸಿಡಿ ಹೆಚ್ಚಾಗಿದೆ ಅತ್ತಿಗೆ. ನೀವುಗಳು ಒಪ್ಪಿಗೆ ಕೊಡಿ. ಮದುವೆ ನಡೆದುಹೋಗಲಿ. ಪೂರ್ಣಿಮಾ ಒಳ್ಳೆ ಹುಡುಗಿ. ಅವಳ ಜೊತೆ ಇದ್ದರೆ, ಇವನ ಸಿಟ್ಟು ಕೋಪ ಎಲ್ಲಾ ಮಂಗಮಾಯವಾಗುತ್ತೆ. '' ಮೈದುನನ ಮಾತು ಅತ್ತಿಗೆಗೆ ಹಿಡಿಸಲಿಲ್ಲ. ಆದರೂ ಉತ್ತರ ಕೊಡುವ ಗೋಜಿಗೆ ಹೋಗಲಿಲ್ಲ.

ಕೇಶವನ ಮನೆಯವರು ಸಂಧಾನದಿಂದ ವಿವಾಹಕ್ಕೆ ಶುಭ ದಿನವನ್ನು ಗೊತ್ತು ಮಾಡಿದ್ದರು. ಶ್ರೀಮತಿ ಸಮಾಧಾನದ ಉಸಿರನ್ನು ಬಿಟ್ಟಳು. ''ಅವರಾಗಿಯೇ ನಮ್ಮ ಪೂರ್ಣಾಳನ್ನು ಕೇಳಿಕೊಂಡು ಬಂದಿದ್ದಾರೆ. ಒಬ್ಬನೇ ಮಗ, ಇಂಜಿನಿಯರ್ರು, ಬೆಂಗಳೂರಿನಲ್ಲಿ ಕೆಲಸದಲ್ಲಿದಾನೆ.... ನಾವು ಒಪ್ಪದಿದ್ದರೆ ಮೂರ್ಖರಾಗ್ತೀವಿ ಅಷ್ಟೇ....'' ಎಂದು ಗಂಡನನ್ನು ಪುಸಲಾಯಿಸಿದ್ದಳು.

''ನೀವು ಅಮ್ಮ ಮಗಳು ಏನಾದ್ರೂ ಮಾಡ್ಕೊಳ್ಳಿ, ನನ್ನನ್ನು ಖರ್ಚು ವೆಚ್ಚದ ಬಾಬ್ತಿಗೆ ಎಳೆಯದಿದ್ರೆ ಸಾಕು.''

''ಅದೇನು ಮಾತೂಂತ ಆಡ್ತೀರಿ ? ಮದುವೆ ಅಂದ್ರೆ, ಖರ್ಚಾಗುತ್ತೆ ಅಂತೀರಲ್ಲ.... ನಾವು ನಮ್ಮ ಅನುಕೂಲಕ್ಕೆ ತಕ್ಕಂತೆ ಮಾಡಿಕೊಟ್ಟರಾಯ್ತು...''

''ಅದೆಲ್ಲ ನಂಗೊತ್ತಿಲ್ಲ, ಅವರಿಗೆ ಸೊಸೆ ಬೇಕಾಗಿದ್ರೆ, ಅವರೇ ಖರ್ಚು ಮಾಡಿಕೊಳ್ಳಲಿ. ಹಾಗಂತ ನಿಮ್ಮ ಅಣ್ಣನಿಗೆ ಹೇಳಿಬಿಡು.'' ಗಂಡನ ಮಾತಿನಿಂದ ಶ್ರೀಮತಿ ನೊಂದಳು. ಸುಲಭದಲ್ಲಿ ಒಂದು ಸಂಬಂಧ ಸಿಕ್ಕಿದೆ, ಗಂಡ ನೋಡಿದ್ರೆ ಹೀಗೆ ಮಾತಾಡ್ತಾರೆ, ಒಂದು ವೇಳೆ ಈ ಸಂಬಂಧ ನಿಂತು ಹೋದರೆ ಪೂರ್ಣಾಳ ಗತಿಯೇನು? ಮತ್ತೆ ಶ್ರೀಮತಿ ಅಣ್ಣನಿಗೆ ಕಾಗದ ಬರೆದಳು.

ಕೇಶವ ತಂಗಿಯ ಕಾಗದ ಓದಿ ವ್ಯಥೆಗೊಂಡ. ಈಗ ಈ ವಿಷಯದಲ್ಲಿ

ಯಾರ್ಯಾರನ್ನು ದೂಷಿಸುವುದು ಎಂದು ಅರ್ಥವಾಗಲಿಲ್ಲ. ತಂಗಿಗೆ ಸಹಾಯ ವಾಗಲೆಂದು ಪೂರ್ಣಿಮಾಳನ್ನು ಓದಿಸುವ ಜವಾಬ್ದಾರಿಯನ್ನು ಹೊತ್ತುಕೊಂಡ. ಈಗ ನೋಡಿದರೆ ಹೀಗೆ. ತಾನೀಗ ಹಿಂಜರಿದರೆ ತಾನು ಎಲ್ಲಾ ರೀತಿಯಿಂದಲೂ ತಪ್ಪಿತಸ್ಥನಾಗುವುದು ನಿಜ ಎಂದುಕೊಂಡು ತಂಗಿಗೆ ಸಮಾಧಾನ ಹೇಳಿದ.

''ನೀನೇನೂ ಯೋಚಿಸಬೇಡ. ಎಲ್ಲಾ ಜವಾಬ್ದಾರಿ ನನಗಿರಲಿ. ನಾನು ಎಲ್ಲಾ ವ್ಯವಸ್ಥೆ ಮಾಡ್ತೀನಿ. ಈ ಶುಭಕಾರ್ಯವೊಂದು ಜರುಗಿ ಹೋದರೆ ಸಾಕು. ನನ್ನ ಜವಾಬ್ದಾರಿ ಕಳೆದಂತೆ. ..... ''ಎಂದ.

ಗುರು ಹಿರಿಯರು ನಿಶ್ಚಯಿಸಿದ ಶುಭ ಮುಹೂರ್ತದಲ್ಲಿ ಪೂರ್ಣಚಂದ್ರ ಪೂರ್ಣಿಮಾಳಿಗೆ ಮಾಂಗಲ್ಯವನ್ನು ಕಟ್ಟಿದ. ವಿವಾಹ ಸಮಾರಂಭ ಜರುಗಿತು. ಅವರಿಬ್ಬರ ಪ್ರೀತಿಯನ್ನು ಹಿರಿಯರು ಒಪ್ಪಿದುದೇ ದೊಡ್ಡ ಮಾತು. ಹಾಗಾಗಿ ಬೇರೆಯಾವ ಆಕ್ಷೇಪಣೆಯೂ ಇರಲಿಲ್ಲ. ಆಸಕ್ತಿಯೂ ಇರಲಿಲ್ಲ. ಹಾಗಾಗಿ ಯಾವ ಆಡಂಬರವೂ ಇಲ್ಲ, ಯಾವ ಲೋಪದೋಷವನ್ನು ಯಾರೂ ಎತ್ತಿ ಆಡುವಂತೆಯೇ ಇಲ್ಲ. ವಿವಾಹದ ಕಾರ್ಯಕಲಾಪಗಳೂ ಅಷ್ಟೇ ಸಂಕ್ಷಿಪ್ತ. ಚಂದ್ರ ತುಟಿ ಪಿಟಕ್ ಎಂದಿರಲಿಲ್ಲ. ಪೂರ್ಣಿಮಾಳಿಗೆ ಅವನ ವರ್ತನೆ ಆತಂಕವನ್ನುಂಟು ಮಾಡಿತ್ತು. ಆಹ್ವಾನಿತರು, ಸಮಯಕ್ಕೆ ಸರಿಯಾಗಿ ಹಾಜರಿದ್ದು ವಧೂವರರಿಗೆ ಉಡುಗೊರೆಗಳನ್ನಿತ್ತು ಶುಭ ಹಾರೈಸಿ, ಊಟ ಮಾಡಿ, ತಾಂಬೂಲ ಉಡುಗೊರೆಗಳಿಂದ ನಗುನಗುತ್ತಾ ಹೊರಟಿದ್ದೇ ಒಂದು ಭಾರೀ ಸಂಭ್ರಮ.

ಮೊದಲ ರಾತ್ರಿಯ ಬಗ್ಗೆ ಚಂದ್ರನಿಗೆ ಯಾವ ಕಾತುರ ಸಂಭ್ರಮಗಳಿರಲಿಲ್ಲ. ಉದಾಸೀನತೆಯಿಂದ ಇದ್ದವನನ್ನು ಪೂರ್ಣ ಗಮನಿಸಿದ್ದಳು. ಏಕಾಂತದಲ್ಲಿ ಅವರಿಬ್ಬರೇ ಇದ್ದಾಗಲೂ ಅವನು ಯಾವ ಸಡಗರವನ್ನು ತೋರದಿದ್ದಾಗ ಪೂರ್ಣಿಮಾ ಅಸಹನೆಯಿಂದ ಪ್ರಶ್ನಿಸಿದಳು.

''ನನ್ನ ಮೇಲೆ ಕೋಪಾನಾ ಚಂದ್ರ ? ''

''ಕೋಪ ಯಾಕೆ ? ಹಾಗೇನೂ ಇಲ್ಲ'' ಅವಳ ಕಡೆ ನೋಡದೇ ಉತ್ತರಿಸಿದ.

''ಮತ್ತೆ ! ಈಗ ಇಲ್ಲಿ ನಾವಿಬ್ಬರೇ ಇದೀವಿ.... ನಮ್ಮಿಬ್ಬರಿಗೂ ಮದುವೆಯಾಗಿದೆ. ನಾವಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತೇವೆ. ಅಷ್ಟಾದರೂ, ನೀನ್ಯಾಕೋ ಮಂಕಾಗಿದೀಯ... ಯಾಕೆ ಅಂತ ?''

''ಮದುವೆಯಾಗಬೇಕೂಂತ ಆಸೆ ಇದ್ದಾಗ ನೀನು ಒಪ್ಪಲಿಲ್ಲ. ನನಗೆ, ನೀನು, ನಿನ್ನ ಸಾನ್ನಿಧ್ಯ ಬೇಕೂಂತ ಹತ್ತಿರ ಬಂದಾಗ ದೂರ ತಳ್ಳಿ ಹೋದೆ. ಆ ಅನುಭವವೇ ಬೇರೆ... ಈಗ ಹೇಗೂ ನಾವಿಬ್ಬರೂ ಶಾಸ್ತ್ರೋಕ್ತವಾಗಿ ಮದುವೆಯಾದ ದಂಪತಿಗಳು. ಈಗ ನಾನು ಹತ್ತಿರ ಬಂದರೂ ದೂರ ತಳ್ಳುವುದಿಲ್ಲ ನನಗೆ ಗೊತ್ತು... ಆದರೆ ಈ ಅನುಭವ ನನಗೆ ಬೇಕಿಲ್ಲ...'' ಅವಳಿಗೆ ಅವನ ಮಾತು ಷಾಕ್ ಹೊಡೆದಂತಾಗಿತ್ತು. ನಿಧಾನವಾಗಿ ಚೇತರಿಸಿಕೊಂಡಳು. ನಗುವನ್ನು ತಂದುಕೊಂಡು ನುಡಿದಳು... ''ನನಗೆ ಬೇಕಲ್ಲ... ''ಅವನಿಗೆ ಒತ್ತಿ ಕುಳಿತಳು.

''ನೀನು ಹೇಳಿದ ಹಾಗೆ ನಾನೇನು ಕೇಳಬೇಕಾಗಿಲ್ಲ, ನೀನು ನನ್ನ ಹೆಂಡತಿ, ನಾನು ಹೇಳಿದ ಹಾಗೆ ಕೇಳೋದನ್ನ ಕಲಿ'' ಅವನ ಮಾತಿನ ಗಡುಸುತನ ಅವಳನ್ನು ಹೆದರಿಸಿತು.

''ಯಾಕೆ ಹೀಗೆಲ್ಲಾ ಮಾತನಾಡಿ ಹೆದರಿಸ್ತೀಯ ಚಂದ್ರ ? ಇವತ್ತಿನ್ನು ಮದುವೆಯಾಗಿದೆ... ನೀನು ಹೀಗೆ ಮಾತನಾಡಿದರೆ ನನಗೆ ಬೇಸರವಾಗುತ್ತೆ...''

''ನಿನ್ನ ಬೇಸರಕ್ಕೆ ನಾನೇನು ಮಾಡುಕ್ಕಾಗುಲ್ಲ. ನನಗೆ ನಿದ್ದೆ ಬರುತ್ತಿದೆ.... ಮಲಗೋಕೆ ಬಿಡು'' ಮುಸುಕೆಳೆದು ಮಲಗಿದ. ಎಲ್ಲೋ ಅಪಶೃತಿಯ ತಂತಿ ಮೀಟುತ್ತಿದೆ ಎಂದು ಅವಳಿಗೆ ಅನ್ನಿಸಿತ್ತು. ಮೊದಲ ರಾತ್ರಿಯ ಕಲ್ಪನೆಯ ಕನಸು ನುಚ್ಚು ನೂರಾಯಿತು. ''ಏನಾಯಿತು ಇವನಿಗೆ ? ನನ್ನನ್ನು ಪ್ರೀತಿಯ ಪರ್ವತಕ್ಕೆ ಹತ್ತಿಸಿದವನೂ ಇವನೆ ? ಈಗ ಪ್ರಪಾತಕ್ಕೆ ತಳ್ಳುತ್ತಿದ್ದಾನಲ್ಲ.... ನಾನೇನು ಅಂತಹ ತಪ್ಪನ್ನು ಮಾಡಿದೆ ? ಎಲ್ಲರಂತೆ ಸಹಜವಾಗಿಯೇ ಡಿಗ್ರಿ ಆಗಲಿ ಎಂದು ಆಸೆಪಟ್ಟೆ. ಅದು ತಪ್ಪೇ ? ಒಮ್ಮೆ ಅನುಭವಿಸಿದ ಸುಖಕ್ಕೆ ಮತ್ತೊಮ್ಮೆ ಒಪ್ಪದಿರುವುದು ಮಹಾ ತಪ್ಪೆ? ನಿಜವಾಗಿಯೂ ಪ್ರೀತಿಸುವುದೇ ಆಗಿದ್ದರೆ, ಇದು ತಪ್ಪು ಅಂತ ಇವನಿಗೆ ಅನ್ನಿಸುತ್ತಿರಲಿಲ್ಲ... ಒಂದೇ ಇವನಿಗೆ ನನ್ನ ಮೇಲಿನ ಪ್ರೀತಿ ಕಡಿಮೆ ಆಗಿದೆ. ಅಥವಾ ಇವನು ನಾಲ್ಕು ಜನರಂತೆ ನಾರ್ಮಲ್ ಅಲ್ಲ. ಹೀಗೆ ಅನ್ನಿಸಿದ ಕೂಡಲೇ ಅವಳಿಗೆ ತಿಳಿಯದಂತೆ ಕಣ್ಣೀರ ಹನಿಗಳು ಪಟಪಟನೆ ಉದುರಿದವು. ಮುಸುಕನ್ನು ತೆಗೆದು, ಎಬ್ಬಿಸಿ ಕೂರಿಸಿ ತನಗೆ ಅನ್ನಿಸಿದ್ದನ್ನು ಕೇಳಲೇ ಅಂತಂದುಕೊಂಡಳು. ಆದರೆ, ಮರುಕ್ಷಣವೇ ತನ್ನ ಕಣ್ಣೀರು ಅವನಿಗೆ ಕಾಣಬಾರದು, ತಾನು ಅಂಜಿದ್ದೇನೆಂದು ತಿಳಿಯಕೂಡದು, ಬಂದದ್ದು ಬರಲಿ ಅದನ್ನು ಎದುರಿಸುತ್ತೇನೆ. ಸಾಧ್ಯವಾದರೆ ಅವನ ಇಷ್ಟಕ್ಕೆ ತಕ್ಕಂತೆ ನಡೆಯಲು ಪ್ರಯತ್ನಿಸುತ್ತೇನೆ ಎಂದುಕೊಂಡಳು. ಆದರೂ ಮನ ಒಡೆದು ಹೋಗಿತ್ತು.''

ಅವಳನ್ನು ನಿಂದಿಸಿ ಮಲಗಿದವನಿಗೆ ನಿದ್ದೆಯೇನೂ ಹತ್ತಲಿಲ್ಲ. ಅವಳು ತನ್ನನ್ನು ಕಾಡಿಸಬಹುದು, ಬೇಡಿಕೊಳ್ಳಬಹುದು ಎಂದು ಅಂದುಕೊಂಡಿದ್ದವನಿಗೆ ನಿರಾಸೆ ಯಾಗಿತ್ತು. ದುರಹಂಕಾರ, ತಾನೇ ಅಪ್ರತಿಮ ಸುಂದರಿ ಎಂದುಕೊಂಡಿದ್ದಾಳೆ. ಇವಳಿಗೆ ತಕ್ಕ ಬುದ್ಧಿ ಕಲಿಸದಿದ್ದರೆ ತಾನು ಗಂಡಸೇ ಅಲ್ಲ ಅಂತಂದಕೊಂಡು ನಿದ್ರಿಸಲು ಯತ್ನಿಸಿದ. ಯಾಕೋ ಎರಡು ವರ್ಷಗಳಿಂದ ಕಾದವನಿಗೆ ಈ ಪ್ರೀತಿ ಹಳಸಲು ಎಂದೆನಿಸಿತ್ತು.

ತನಗಾದ ಹತಾಶೆಯನ್ನು ತೋರಗೊಡದೇ ಪೂರ್ಣಿಮಾ, ಅವನಿಗೆ ಅನುಸರಿಸಿಕೊಂಡು ಇರಲು ಯತ್ನಿಸಿದಳು. ಆದಷ್ಟು ವಾಗ್ವಾದಕ್ಕೆ ಅವಕಾಶ ಕೊಡದಂತೆ ಅವನು ಹೇಳುವುದಕ್ಕೆ ಒಪ್ಪಿಕೊಳ್ಳುತ್ತಿದ್ದಳು. ಕೆಲವೇ ದಿನಗಳಲ್ಲಿ ಅವಳು ಅರಿತಿದ್ದಳು, ಅತ್ತೆ ಮಾವನಿಗೆ ತಾನು ಇಷ್ಟವಾಗದ ಸೊಸೆ, ಚಂಪಕಗಳಿಗೆ ಬೇಡವಾದ ಅತ್ತಿಗೆ ಅಂತ. ಆದರೆ ಚಂದ್ರನಿಗೂ ಬೇಡವಾದ ಮಡದಿಯಾಗುವುದು ಅವಳಿಗೆ ಯೋಚಿಸಲೂ ಆಗದ ವಿಷಯ. ಮದುವೆಯ ವೇಳೆಗೆ, ಚಂದ್ರನೇಕೆ ಬದಲಾದ ಎಂದು ಅವಳಿಗೆ ಅರ್ಥವಾಗಲಿಲ್ಲ. ಕಾರಣವನ್ನು ತಾನಾಗಿಯೇ ಕೇಳುವುದಿಲ್ಲ ಎಂದು ನಿರ್ಧರಿಸಿದಳು.

''ಏನಯ್ಯಾ ಹನಿಮೂನ್‌ಗೆ ಎಲ್ಲಿಗೆ ಹೋಗ್ತಿದೀರಿ ? '' ಚಿಕ್ಕಪ್ಪ ಹಾಸ್ಯವಾಗಿ ಕೇಳಿದಾಗ ಚಂದ್ರ ಹುಬ್ಬುಗಳನ್ನು ಜೋಡಿಸಿದ.

''ಹನಿಮೂನ್.... ? ಅದಕ್ಕೆಲ್ಲ ಖರ್ಚಿಗೆ ನನ್ನ ಹತ್ತಿರ ಹಣವಿಲ್ಲ ಚಿಕ್ಕಪ್ಪ.... ನನ್ನ ಮಾವ ಕೊಟ್ಟರೆ ಹೋಗ್ಬಹುದು....'' ವ್ಯಂಗ್ಯವಾಗಿ ಪೂರ್ಣಿಮಾಳ ಕಡೆ ನೋಡಿದ. ಅವಳು ತಲೆ ತಗ್ಗಿಸಿದಳು.

''ಹನಿಮೂನ್‌ಗೆ ಮಾವ ಹಣ ಕೊಡ್ತಾರಾ ? ಮಗಳ ಮದುವೆಗೇ ಖರ್ಚು ಮಾಡದ ಅಪ್ಪ. ... ಹನಿಮೂನ್‌ಗೆ ಹಣ ? ಹುಂ... '' ತಾಯಿ ನುಡಿದಾಗ ಚಂದ್ರ ತಾಯಿಯನ್ನೇ ನೋಡಿದ.

''ಕೇಶವನ ಹೆಂಡತಿ ಹೇಳದ್ದನ್ನೇ ಹೇಳ್ತಿದೀನಿ... ಪಾಪ... ಅವರುಗಳು ಇವಳಿಗೋಸ್ಕರ ಖರ್ಚು ವೆಚ್ಚ ಮಾಡಿ ಮನೆಯಿಂದ, ಒಂದು ಮಾರ್ಗ ಮಾಡಿ ಕಳುಹಿಸಿದರು. ಇಲ್ಲದಿದ್ದರೆ ಇವಳ ಗತಿ ಏನಾಗುತ್ತಿತ್ತೋ... ನೀನು ದುಡುಕಿಬಿಟ್ಟೆ ಚಂದ್ರ... ಜಿಪುಣ ಮಾವನ ಅಳಿಯನಾದೆ....''

ಮರೆಯಲ್ಲಿ ನಿಂತು ಇವರುಗಳ ಮಾತನ್ನು ಆಲಿಸಿದ ಪೂರ್ಣಿಮಾಗೆ ದುಃಖ ಉಕ್ಕಿ ಹರಿದಿತ್ತು. ಅಪ್ಪನ ಜಿಪುಣತನ ಇಷ್ಟರವರೆಗೆ ಮುಂದುವರೆದಿರಬಹುದು ಎಂದು ತಿಳಿದಿರಲಿಲ್ಲ. ಅದನ್ಯಾಕೆ ಅತ್ತೆ ಇವರಿಗೆ ಹೇಳಿದರೋ... ಇದು ನನಗೇ ತಿಳಿಯದ ವಿಷಯ...ಅಪ್ಪನ ಜಿಪುಣತನ ತನ್ನ ಸಂಸಾರದ ಸುಖಕ್ಕೂಅಡ್ಡಿ ಮಾಡುತ್ತಿದೆಯಲ್ಲ.. ಈ ಅಸಮಾಧಾನವನ್ನು ಇವರುಗಳು ತನ್ನ ಮೇಲೆ ತೋರಿಸಿಕೊಳ್ಳುತ್ತಿದ್ದಾರೇನೋ ಅಂತೆನಿಸಿದಾಗ, ಅತೀ ಹೀನಾಯವೆನಿಸಿತ್ತು.

ಆ ಕ್ಷಣದಲ್ಲೇ ತಾಯಿಯ ಮನೆಗೆ ಹೋಗಿ ನಿಜ ಏನೂಂತ ಕೇಳಿ ತಿಳಿದುಕೊಳ್ಳಬೇಕೆಂದು ಅನ್ನಿಸಿತ್ತು. ಆದರೆ, ಇದರಿಂದ, ತನ್ನ ತಾಯಿಗೂ, ಸೋದರತ್ತೆಗೂ ಅಸಮಾಧಾನ, ಮನಸ್ತಾಪಗಳಾಗಬಹುದು ಎಂದು ಊಹಿಸಿ, ಸಮಯ ಬಂದಾಗ ಕೇಳಿದರಾಯ್ತು ಅಂತಂದುಕೊಂಡಳು. ಅಂತೂ ಈ ಮನೆಗೆ ಕಾಲಿಡುತ್ತಿದ್ದಂತೆಯೇ ಬುನಾದಿಯೇ ಅಲುಗಾಡುತ್ತಿದೆ ಎಂದುಕೊಂಡು ಖೇದಗೊಂಡಳು.

ಚಂದ್ರನಿಗೆ ತನ್ನೊಂದಿಗೆ ಹನಿಮೂನ್‌ಗೆ ಹೋಗಲು ಆಸೆ ಇದೆಯೋ ಇಲ್ಲವೋ, ಆದರೆ ತನ್ನ ಅಪ್ಪನ ಜಿಪುಣತನವನ್ನು ಹೀಯಾಳಿಸಿ ಅಂದಿದ್ದಾಯ್ತು. ... ಛೀ, ಈ ಅಪ್ಪ ಕೂಡಾ ಅಷ್ಟೇ.... ಇಷ್ಟು ಕೆಳಮಟ್ಟಕ್ಕೆ ಇಳಿದರೋ, ಹೀಗೆ ಅಂತ ಒಂದು ಮಾತು ಈ ಮೊದಲೇ ತಿಳಿದಿದ್ದರೆ, ತಾನು ಈ ಮದುವೆಯನ್ನೇ ಮರೆತು ಬಿಟ್ಟಿರುತ್ತಿದ್ದೆ, ಮ್ಮ ಕೂಡಾ ಈ ವಿಷಯ ಹೇಳಲಿಲ್ಲ, ಒಟ್ಟಿನಲ್ಲಿ ತನ್ನೊಂದಿಗೆ ಎಲ್ಲರೂ ಕಣ್ಣಾ ಮುಚ್ಚಾಲೆ ಆಟವಾಡಿದರೆಂದುಕೊಂಡಳು.

ತುಟಿ ಬಿಚ್ಚದೇ ಅತ್ತೆಗೆ ಮನೆಗೆಲಸಗಳಲ್ಲಿ ಸಹಾಯ ಮಾಡಿದಳು. ಎಲ್ಲರೊಂದಿಗೆ ಬೆರೆತು ಇರಲು ಯತ್ನಿಸಿದಳು ಬಿಗಮಾನದಿಂದ ಇದ್ದ ಚಂಪಕಗಳನ್ನು ತಾನಾಗಿಯೇ ಮಾತನಾಡಿಸಿದಳು. ಚಂಪಕಳ ಗಂಡನಿಗೆ ಪೂರ್ಣಿಮಾಳ ಬಗ್ಗೆ ಕನಿಕರ ಮೂಡಿತು. ಚಂಪಕಳ ಮಾತಿನಿಂದ ಕೆಲವು ವಿಷಯಗಳನ್ನು ತಿಳಿದಿದ್ದನಾದ್ದರಿಂದ ತಾನಾದರೂ ಪೂರ್ಣಿಮಾಳಿಗೆ ಸಮಾಧಾನ ಹೇಳಬೇಕೆಂದುಕೊಂಡ.

''ಬೆಂಗಳೂರಿಗೆ ಯಾವಾಗ ಹೊರಡ್ತೀದೀರಿ ? '' ಕೇಳಿದ.

''ಏನೋ ನಂಗೊತ್ತಿಲ್ಲ ಭಾವ '' ಉದಾಸೀನದಿಂದ ನುಡಿದಳು.

''ನಾನ್ಹೇಗೆ ನಿಮಗೆ ಭಾವನಾಗ್ತೀನಿ. ... ? ನಾನು ನಿಮಗೆ ಅಣ್ಣನ ಸಮಾನ... ನನ್ನನ್ನು ಪ್ರಕಾಶ್ ಅಂತಲೇ ಕರೀರಿ. ...'' ಪೂರ್ಣಿಮಾ ಸಂಕೋಚಗೊಂಡರೂ, ಸದ್ಯ ಈ ಮನೆಯಲ್ಲಿ ಇವನಾದರೂ ಒಬ್ಬ ತನ್ನ ಪಕ್ಷದಲ್ಲಿದಾನಲ್ಲ ಅಂತ ಸಂತಸವಾಗಿತ್ತು...

ದೂರದಿಂದಲೇ ಇವರಿಬ್ಬರ್ನೂ ಗಮನಿಸಿದ್ದ ಚಂದ್ರ. ಎದೆಯಲ್ಲಿ ಹೊಗೆ ಎದ್ದಿತು. ರಾತ್ರಿಯಾಗುವುದನ್ನೇ ಕಾದಿದ್ದ.

ಒಳಬಂದ ಪೂರ್ಣಿಮಾಳನ್ನು ಒರಟಾಗಿ ತನ್ನೆಡೆಗೆ ಎಳೆದುಕೊಂಡು ತನ್ನ ಮೇಲೆ ಬೀಳಿಸಿಕೊಂಡು ಕೇಳಿದ.

''ನಿಂಗೆ ಏನಾಗ್ಬೇಕು ಅವನಿಂದ ?''

''ಯಾರಿಂದ ? ''ಅವನ ಹಿಡಿತವನ್ನು ಸಡಿಲಿಸಿ ಕೇಳಿದಳು.

''ಅದೇ ಪ್ರಕಾಶ.... ಅವನನ್ನು ಏನು ಕೇಳ್ತಿದ್ದೆ ?'' ಅವಳ ತೋಳುಗಳನ್ನು ಬಲವಾಗಿ ಅಮುಕಿದ

''ಹಾಯ್..... ನೋಯ್ತಿದೆ... ಯಾಕೆ ಹೀಗೆ ಹಿಂಸೆ ಮಾಡ್ತಿದ್ದೀಯಾ ? ''

''ಓ.... ನಾನು ಹಿಡಿದರೆ ಹಿಂಸೆ ಆಗುತ್ತಾ .... ? ನಾನು ಹೊರಗೆ ಹೋಗಿ ಆ ಪ್ರಕಾಶನನ್ನು ಕಳಿಸ್ಲಾ.... ? '' ಕೆಣಕುವಂತೆ ಪ್ರಶ್ನಿಸಿದ.

''ಛೀ.... ಎಂತಹ ಹೊಲಸು ತಮಾಷೆ.....''

''ನಾನು ಹೊಲಸು, ನನ್ನ ಮಾತು ಹೊಲಸು..... ಪ್ರಕಾಶ ಎಲ್ಲಾ ರೀತಿಯಿಂದಲೂ ಸರಿಯಾಗಿದಾನೆ ಅಲ್ವಾ ? ಎಷ್ಟು ದಿನದಿಂದ ನಡೀತಿದೆ ಈ ಆಟ ?''

''ಎಂಥಾ ಆಟ ? ಏನೇನೋ ಹೇಳ್ಬೇಡ.... ''ಎದ್ದು ನಿಂತು ಅವನೆದುರಿಗೆ ನೋಟ ಹರಿಸಿದಳು.

''ಓ.... ನಂಗೇನೂ ಗೊತ್ತಿಲ್ಲಾಂತ ಅಂದ್ಕೋಬೇಡ... ಪ್ರಕಾಶನ ಹತ್ತಿರ ಏನು ಮಾತಾಡ್ತಿದ್ದೆ?'' ಎತ್ತರದ ಧ್ವನಿಯಲ್ಲಿ ಪ್ರಶ್ನಿಸಿದ.

''ಈಗ ಅರ್ಥವಾಯ್ತು . ಯಾವುದೋ ಸಂಶಯ ಪಿಶಾಚಿ ನಿನ್ನನ್ನು ಕಾಡ್ತಿದೆ. ಪ್ರಕಾಶ ನನಗೆ ಅಣ್ಣನ ಸಮಾನ. ಅಣ್ಣ ತಂಗಿಯರ ನಡುವೆ ಬೇಕಾದಷ್ಟು ಮಾತು ಇರುತ್ತೆ....''

''ಅಣ್ಣ ತಂಗಿ ? ಈ ಸಂಬಂಧವನ್ನೆಲ್ಲ ನನಗೆ ಹೇಳಬೇಡ... ನನಗೆ ಗೊತ್ತು ಅವನು ಎಂಥೋನು ಅಂತ.....''

''ಹಾಗೆಲ್ಲ ಏನೇನೋ ಹೇಳ್ಬೇಡ.... ಅವನು ನಿನ್ನ ಭಾವ....''

''ಅದನ್ನೇ ಹೇಳಿದ್ದು.... ನನ್ನ ಭಾವನ ಹತ್ತಿರ ನಿನ್ನ ಚಕ್ಕಂದ ಏನೂಂತ.... ಅವನು ಏನು ಹೇಳಿದ ಹೇಳು....'' ಒತ್ತಾಯಿಸಿದ.

''ಬೆಂಗಳೂರಿಗೆ ಯಾವಾಗ ಹೊರಡ್ತೀರಿ ಅಂತ ಕೇಳಿದ ಅಷ್ಟೇ... ''

''ನೀನು ನಿಜ ಹೇಳ್ತಿದೀಯ ಅಂತ ನಂಬ್ತೀನಿ..... ನನ್ನನ್ನು ತುಂಬಾ ಸತಾಯಿಸ್ತೀಯ ... ಹತ್ತಿರ ಬಂದಿರೋಳನ್ನ ಬಿಡುವಷ್ಟು ಮೂರ್ಖ ನಾನಲ್ಲ... ಎನ್ನುತ್ತಾ ಕಟುಕನಂತೆ ವರ್ತಿಸಿದ. ಇವನು ಪ್ರೇಮಿಯಲ್ಲ, ಕಾಮುಕ ಪಶು,ಇದು ಪ್ರೀತಿಯಲ್ಲ ಕಾಮದ ಅತಿರೇಕ ಎನ್ನುವಂತೆ ಅವಳ ಮೇಲೆ ಅತಿಕ್ರಮಣ ಮಾಡಿದ. ಮಾನಸಿಕವಾಗಿಯೂ ದೈಹಿಕವಾಗಿಯೂ ಅತಿಯಾಗಿ ಬಳಲಿದಳು. ಇವನು ಮನುಷ್ಯನ ಮುಖವಾಡ ಧರಿಸಿರುವ ಒಂದು ಹೀನ ಪಶು, ತಾನು ಇಂತಹವನನ್ನು ಪ್ರೀತಿಸಿದೆನೆ ? ತಾನ ಇವನೊಡನೆ ಬಾಳಲು ಸಾಧ್ಯವೇ ? ಆದರೆ

ಇವನನ್ನು ಬಿಟ್ಟು ತಾನು ತಾಯಿಯ ಮನೆಯಲ್ಲಿ ಇರಲು ಸಾಧ್ಯವೇ ? ತನ್ನ ಅಪ್ಪ ತನ್ನನ್ನು ಅಲ್ಲಿರಲು ಖಂಡಿತಾ ಒಪ್ಪುವುದಿಲ್ಲ... ಯಾರಿಗೂ ಬೇಡವಾಗಿ, ಅಥವಾ ಯಾರೊಬ್ಬರ ಹಂಗಿನಲ್ಲಿ ತಾನು ಇರುವುದಂತೂ ಸಾಧ್ಯವಿಲ್ಲ. ಮೊದಲು ತಾನೊಂದು ನೆಲೆಯನ್ನು ಖಚಿತಮಾಡಿಕೊಳ್ಳಬೇಕು. ಹೇಗೂ ಡಿಗ್ರಿ ಸಿಗಲು ಕೆಲವು ದಿನಗಳು ಮಾತ್ರ ಬಾಕಿ ಉಳಿದಿದೆ. ಯಾರಿಗೂ ತಿಳಿಯದಂತೆ ಬ್ಯಾಂಕಿನ ಪರೀಕ್ಷೆ ತೆಗೆದುಕೊಳ್ಳಬೇಕು... ಒಂದು ರಾಷ್ಟ್ರೀಯ ಬ್ಯಾಂಕಿನಲ್ಲಿ ತನಗೊಂದು ಕೆಲಸ ಸಿಕ್ಕಿಬಿಟ್ಟರೆ ಸಾಕು... ಸ್ವತಂತ್ರವಾಗಿ ಯಾರ ಹಂಗೂ ಇಲ್ಲದೇ ಹಾಯಾಗಿರಬಹುದು. ಈ ಆಲೋಚನೆ ಅವಳಿಗೆ ಮುದವನ್ನೇನೂ ನೀಡಲಿಲ್ಲ. ಆದರೆ ಏನೋ ಧೈರ್ಯ ತುಂಬಿಕೊಂಡಿತ್ತು. ಹೊಸ ಸಂಸಾರ ಪ್ರಾರಂಭಿಸಿದರೂ ಅವನ ನಡವಳಿಕೆ ಬದಲಾಗಿರಲಿಲ್ಲ.

ತಾಯಿಗೆ ವಿಶದವಾಗಿ ಎಲ್ಲವನ್ನು ಬರೆದು, ತಾನು ಮೋಸ ಹೋದುದನ್ನು ತಿಳಿಸಿ, ತಾನು ಡೈವೋರ್ಸ್ ತೆಗೆದುಕೊಳ್ಳುವುದಾಗಿ ನಿಶ್ಚಯಿಸಿರುವುದನ್ನು ಒತ್ತಿ ಬರೆದಿದ್ದಳು. ತಾನು ಕೆಲಸಕ್ಕೆ ಸೇರಿ ತನ್ನ ಕಾಲ ಮೇಲೆ ತಾನು ಸ್ವತಂತ್ರವಾಗಿ ನಿಲ್ಲುವ ಅಭಿಲಾಷೆಯುಂಟಾಗಿದೆಯೆಂದು ತಿಳಿಸಿದ್ದಳು. ಅಪ್ಪನಿಂದ ತಾನು ಯಾವ ಸಹಾಯವನ್ನಾಗಲೀ, ಸಹಕಾರವನ್ನಾಗಲೀ ನಿರೀಕ್ಷಿಸುವುದಿಲ್ಲವೆಂದೂ, ಅದರಿಂದ ಅಪ್ಪನಿಗೆ ಯಾವುದೇ ವಿಷಯವನ್ನು ತಿಳಿಸಕೂಡದೆಂದೂ ಬರೆದಿದ್ದಳು.

ಪತ್ರವನ್ನು ಓದಿದ ಶ್ರೀಮತಿಯ ಎದೆ ಒಡೆದು ಹೋಯಿತು. ಮಗಳ ಜಾತಕದ ಪ್ರತಿಯನ್ನು ಹಿಡಿದು ಜ್ಯೋತಿಷಿಯಲ್ಲಿಗೆ ಓಡಿದಳು. ಅವರು ವಿವರವಾಗಿ ಪರಿಶೀಲಿಸಿದರು. ಅವರ ಮುಖ ಗಂಭೀರವಾಗಿತ್ತು ನಿಜವಾದ ಭವಿಷ್ಯವನ್ನು ಹೇಳಲು ಹಿಂಜರಿದರು. ಅರ್ಧ ಸತ್ಯ, ಅರ್ಧ ಸುಳ್ಳು ಹೇಳಿ, ಸ್ವಾಂತನ ಹೇಳಿ ಕಳುಹಿಸಿದ್ದರು. ಅಷ್ಟಾದರೂ ಶ್ರೀಮತಿಗೆ ಸಮಾಧಾನವಾಗಿರಲಿಲ್ಲ, ಇನ್ನೂ ಮದುವೆಯಾಗಿ ಮೂರ ತಿಂಗಳು ಕಳೆದಿಲ್ಲ, ಅಪಶೃತಿ ಚಿಮ್ಮಿದೆ. ಇದೇಯೇನು ಪ್ರೀತಿ ? ಇದೇ ಏನು ಪ್ರೇಮ. ತಿಳುವಳಿಕೆಯಿಲ್ಲದ ಹುಡುಗರು. ಹುಡುಗಾಟ ಅಂತ ಅಂದುಕೊಂಡಿದ್ದಾರೆ. ಈ ಬಂಧನ, ಅಷ್ಟು ಸುಲಭವಾಗಿ ಕಿತ್ತುಹೋಗಲು ಸಾಧ್ಯವೇ ? ನಗೆಪಾಟಲಾಗುವುದಿಲ್ಲವೇ? ಎಲ್ಲರೂ ಸೇರಿ ತಿಳುವಳಿಕೆ ಹೇಳಿ ಸರಿಮಾಡಲೇಬೇಕು. ತಕ್ಷಣವೇ ಕೇಶವನಿಗೆ ಪತ್ರ ಬರೆದಳು.

ಕೇಶವ ತಂಗಿಯೊಡನೆ ಮಾತನಾಡಿ ಒಂದು ನಿರ್ಧಾರಕ್ಕೆ ಬಂದ. ಬಹುಶಃ ಚಂದ್ರನ ತಂದೆ ತಾಯಿಗಳಿಗೂ ಈ ವಿಷಯಗಳ ತಿಳಿದಿರಲಾರದು. ಚಂದ್ರನ ಸಮಸ್ಯೆ ಏನು ಇದ್ದರೂ ಸರಿ, ಈಗ ಮದುವೆ ನಡೆದು ಹೋಗಿದೆ. ಆದ್ದರಿಂದ ಎಲ್ಲರೂ ಕುಳಿತು ಸಮಾಲೋಚನೆ ನಡೆಸಿ, ಅವರಿಬ್ಬರೂ ಸಾಮರಸ್ಯದಿಂದ ಬಾಳ್ವೆ ನಡೆಸುವಂತೆ ತಿಳುವಳಿಕೆ ಹೇಳಬೇಕು. ದುಡುಕಿ ಇಬ್ಬರೂ ಹಾಳಾಗಬಾರದು.

ಕೇಶವನೊಡನೆ ಶ್ರೀಮತಿಯೂ ಊರಿಗೆ ಹೊರಟಾಗ, ಅವಳ ಗಂಡ ''ಇದ್ದಕ್ಕಿದ್ದಂತೆ ಈಗ ಯಾಕೆ ಹೊರಟಿದೀಯ'' ಅಂತ ಕೇಳಿದ. ಕೇಶವ ಚಾಚೂತಪ್ಪದೆ ಸಮಸ್ಯೆಯನ್ನು ಅರುಹಿದ. ಶ್ರೀಮತಿ ಗಾಬರಿಯಾಗಿದ್ದಳು.

''ನೀವು ಪೂರ್ಣಿಮಾಳ ತಂದೆ, ನಿಮಗೆ ಸತ್ಯಾಂಶ ಏನೂಂತ ತಿಳಿದಿರ ಬೇಕಾದ್ದು

ಅಗತ್ಯ ಎಂದು ಹೇಳಿ, ನೀವೂ ಬರುವುದಾದರೆ ಬನ್ನಿ'' ಅಂತ ಕರೆದ.

''ನನಗೆ ಮೊದಲೇ ಸಂಶಯ ಬಂದಿತ್ತು. ಈ ಪ್ರೇಮವಿವಾಹದ ದುರ್ಗತಿಯೇ ಇಷ್ಟು, ಏನಾದ್ರೂ ಮಾಡ್ಕೊಂಡು ಹಾಳಾಗ್ಲಿ... ಆದರೆ ಅವಳು ನನ್ನ ಮನೆಗೆ ಮಾತ್ರ ಬರುವುದು ಬೇಡ. ಎಲ್ಲದರೂ ಹೋಗಲಿ ನನಗೇನು? ''

''ನೀವೇನು ತಂದೇನೋ ? ಶತ್ರುನೋ ? ಮಗಳ ಬಾಳಿನಲ್ಲಿ ಒಡಕು ಮೂಡ್ತಿದೆಯಲ್ಲಾ ಅಂತ ಹಗಲು ರಾತ್ರಿ ಕೊರಗ್ತಾ ಇದೀನಿ... ಎಷ್ಟು ಸುಲಭವಾಗಿ ಹೇಳ್ತೀರಿ.... ಎಲ್ಲಾದ್ರೂ ಹಾಳಾಗ್ಲೀ ಅಂತ...'' ಶ್ರೀಮತಿ ಗಂಡನ ಮೇಲೆ ಕಿಡಿ ಕಾರಿದಳು. ಕೇಶವ ತಡೆದ.

''ನೋಡಿ ಭಾವ, ಹೀಗಾಗಬಾರದಾಗಿತ್ತು ನಿಜ. .... ಈಗ ಸರಿ ಮಾಡಬೇಕಾದ್ದು ನಾವುಗಳು ದೊಡ್ಡವರ ಕರ್ತವ್ಯ. ನಾಳೆ ಯಾರೂ ಹೇಳಲಿಲ್ಲಾಂತಾಗ ಬಾರದು. ''

''ನಿಮ್ಮ ಮಾತುಗಳನ್ನು ಕೇಳ್ತಾರೆ ಅಂತ ಏನು ಗ್ಯಾರಂಟಿ ? ಪ್ರೀತಿ ಪ್ರೇಮ ಅಂತ ಹಾಳಾಗೋರು, ತಲೆಗೆ ಕೆರ ಮೆಟ್ಟಿಕೊಂಡಿರುತ್ತಾರೆ. '' ಶ್ರೀಮತಿ ಗಂಡನ ಮಾತುಗಳಿಗೆ ಕಣ್ಣೀರು ಸುರಿಸಿದಳು.

''ಅಳು... ಅಳು... ಈಗ ಅತ್ತೇನು ಪ್ರಯೋಜನ ? ನೀವು ನೀವುಗಳೇ ಒಂದಾಗಿ ನನ್ನನ್ನು ದೂರ ಮಾಡಿದ್ದಿರಿ. ಈಗ ರಂಪ ರದ್ಧಾಂತ ಮಾಡಿಕೊಂಡು ಹಾಳಾಗುತ್ತಿರೋರಿಗೆ ತಿಳುವಳಿಕೆ ಹೇಳೋಕೆ ನಾನ್ಯಾರು ? ನಾನಂತೂ ಎಲ್ಲಿಗೂ ಬರೋನಲ್ಲ...'' ಕೈ ಒದರಿದ.

''ಅಣ್ಣಾ ಇವರು ಯಾವತ್ತೂ ಹೀಗೇ. ಸಮಯದಲ್ಲಿ ಕೈಕೊಡುವವರೇ. ಅದಕ್ಕೇ ನಾನು ಇವರನ್ನು ಯಾವುದಕ್ಕೂ ಕರಿಯಲ್ಲ''

''ಹೌದು ನಾನು ಅಂಥೋನೇ.... ಇದೀರಲ್ಲ ಅಣ್ಣ ತಂಗಿಯರು, ಕಾರ್ಯ ಸಾಧಕರು ಹೋಗಿ ಹೋಗಿ ಅದೇನು ಕಡಿದು ಕಟ್ಟೆ ಹಾಕ್ತೀರೋ ... ಹೋಗಿ ಹೋಗಿ'' ಅವನು ಅಗತ್ಯಕ್ಕಿಂತ ಎತ್ತರದ ಧ್ವನಿಯಲ್ಲಿ ನುಡಿದಾಗ ಕೇಶವ ಮುಂಬಾಗಿಲನ್ನು ದಾಟಿ ಹೊರಬಂದ. ಶ್ರೀಮತಿ ಹಿಂದೆಯೇ ಉಳಿದಳು. ಕೇಶವ ಹಿಂದೆ ತಿರುಗಿ ಒಳಗೆ ಇಣುಕಿದ.

''ನೀನು ಒಬ್ನೇ ಹೊರಡು.... ನಾನು ಈಗ ಬರುಲ್ಲ. ನೀನೇ ಎಲ್ಲವನ್ನು ನಿಭಾಯಿಸಬಲ್ಲೆ ಎನ್ನುವ ಧೈರ್ಯ, ನಂಬಿಕೆ ನನಗಿದೆ'' ಎಂದಳು.

ಕೇಶವ ಮರುಮಾತನಾಡದೇ ಗೇಟನ್ನು ದಾಟಿದ.

ಮೈಲಾರಯ್ಯನ ಮನೆಯಲ್ಲಿ ನಡೆದದ್ದು ಈ ನಾಟಕದ ಮುಂದಿನ ದೃಶ್ಯ. ಸುಮ್ಸುಮ್ನೆ ಎಂದೂ ಬಾರದವನು ಕೇಶವ. ದಿಢೀರೆಂದು ಬಂದಾಗ ಗಂಡ ಹೆಂಡತಿ ಮುಖ ಮುಖ ನೋಡಿಕೊಂಡರು. ಕೇಶವನ ಗಂಭೀರವನ್ನು ಗಮನಿಸಿದ, ಮೈರಾಲಯ್ಯ ತಾವೇ ಮಾತಿಗೆ ಪ್ರಾರಂಭಿಸಿದರು.

''ಏನು ಬೀಗರ ಸವಾರಿ ಇಷ್ಟು ದೂರದವರೆಗೆ ? '' ಅವರ ವ್ಯಂಗ್ಯ ಕೇಶವನಿಗೆ ಹಿಡಿಸಲಿಲ್ಲ.

''ಮುಖ್ಯವಾದ ವಿಷಯವನ್ನು ಮಾತನಾಡಬೇಕಾಗಿತ್ತು'' ಎನ್ನುತ್ತಾ ಅಲ್ಲಿದ್ದ

ಕುರ್ಚಿಗಳೊಂದರಲ್ಲಿ ಕುಳಿತು, ಅವರಿಬ್ಬರಿಗೂ ಕುಳಿತಕೊಳ್ಳುವಂತೆ ಕೈ ಸಂಜ್ಞೆ ಮಾಡಿದ. ಅವನೇ ಮಾತನ್ನು ಪ್ರಾರಂಭಿಸಿ, ಮುಗಿಸುವವರೆಗೂ ಅವರಿಬ್ಬರೂ ಮೂಕರಂತೆ ಕುಳಿತಿದ್ದರು. ಇಬ್ಬರಲ್ಲೂ ತಳಮಳ ಶುರುವಾಗಿತ್ತು.

''ಚಂದ್ರ ನಿಮ್ಮ ಮಗ, ಅವನ ಮನಸ್ಸಿನಲ್ಲಿ ಏನಿದೆ ಏನಿಲ್ಲ ಅಂತ ನಿಮ್ಮಗಳಿಗೆ ಖಂಡಿತಾ ತಿಳಿಯುತ್ತೆ. ದಯವಿಟ್ಟು ಅವರಿಬ್ಬರನ್ನು ಕರೆಸಿ, ಏನಾಯ್ತು ಅಂತ ತಿಳಿದುಕೊಳ್ಳಿ. ಇಬ್ಬರಿಗೂ ತಿಳುವಳಿಕೆ ಹೇಳಿ. ನಮ್ಮ ಪೂರ್ಣಿಮಾ ಇನ್ನು ಚಿಕ್ಕವಳು. ತಿಳುವಳಿಕೆ ಸಾಲದು. ಅವಳಿಂದ ಏನಾದರೂ ತಪ್ಪು ನಡೆದಿದ್ದರೆ , ಅವಳ ಪರವಾಗಿ ನಾನು ಕ್ಷಮೆಯನ್ನು ಕೇಳಿಕೊಳ್ಳುತ್ತೀನಿ.'' ಅವನು ಕೈ ಜೋಡಿಸಿದಾಗ, ಅವರಿಬ್ಬರಿಗೂ ಮುಜುಗುರವೆನ್ನಿಸಿತ್ತು.

''ಆಗಲಿ, ನಾವು ಅವರುಗಳನ್ನು ಆದಷ್ಟು ಬೇಗ ಕರೆಸಿ, ಏನು ಸಮಸ್ಯೆ ಅಂತ ತಿಳಿದುಕೊಂಡು, ಅದನ್ನು ಪರಿಹರಿಸಲು ಪ್ರಯತಿಸುತ್ತೇವೆ.'' ದಂಪತಿಗಳು ಆಶ್ವಾಸನೆ ನೀಡಿದರು. ಕೇಶವ ಹಿಂತಿರುಗಿದ.

ಈ ವಿಷಯ ಅವರಿಗೆ ಅನಿರೀಕ್ಷಿತ. ಮಗ ಪ್ರೀತಿಸಿದವಳನ್ನು ಮದುವೆಯಾದದ್ದು ಅವರಲ್ಲಿ ಅಸಮಾಧಾನವಿತ್ತು. ಆದರೆ ತಿಂಗಳೊಳಗೆ, ಮಗನ ಪ್ರೀತಿ ಕಡಿಮೆಯಾಗುವುದೆಂದು ಭಾವಿಸಿರಲಿಲ್ಲ. ಆದರೆ ಇದರಿಂದ ಅವರಿಗೆ ಸಂತೋಷ ವೇನೂ ಆಗಲಿಲ್ಲ. ಮಗನದೇ ತಪ್ಪು ಇರಬಹುದು ಎಂದೆನ್ನಿಸಿತ್ತು.

''ತಕ್ಷಣವೇ ಬರಬೇಕಂತೆ ''ಎಂದು ತಾಯಿ ಫೋನು ಮಾಡಿಸಿದಾಗ, ಚಂದ್ರ ಗಾಬರಿಗೊಂಡ. ಬಹುಶಃ ತಂದೆಗೆ ಹುಷಾರಿರಲಾರದು ಎಂತಂದುಕೊಂಡು ಆ ರಾತ್ರಿಯೇ ಪೂರ್ಣಿಮಾಳೊಡನೆ ಹೊರಟ ಅವಳ ಎದೆ ಢವ ಢವ ಎಂದಿತ್ತು. ಹೋಗುವ ಧೈರ್ಯವಿಲ್ಲದಿದ್ದರೂ, ಒಬ್ಬಳೇ ಉಳಿಯುವ ಧೈರ್ಯವೂ ಇರಲಿಲ್ಲ. ಯಾವ ಚರ್ಚೆಗೂ ಆಸ್ಪದ ಕೊಡದೇ ತೆಪ್ಪಗೆ ಹೊರಟಳು. ಚಂದ್ರ ಓರೆ ಕಣ್ಣಿನಲ್ಲಿ ಅವಳನ್ನೇ ನೋಡಿದ. ''ಆಹಾಹಾ... ಮಹಾಪತಿವ್ರತೆಯ ತರಹ ಆಡ್ತಾಳೆ'' ಅಂತ ತನ್ನಲ್ಲೇ ಹೇಳಿಕೊಂಡ.

ಯಾಕೋ ಏನೋ ಅವಳ ಮೇಲಿನ ಪ್ರೀತಿ ಕಡಿಮೆಯಾಗತೊಡಗಿತ್ತು. ಅತಿಯಾಗಿ ಒಂದೇ ವಿಷಯವನ್ನು ಚಿಂತಿಸುವ ದುರ್ಬುದ್ಧಿ ಅವನದ್ದು. ಚಂಪಕಳ ಮದುವೆಯ ರಾತ್ರಿಯ ಘಟನೆಯನ್ನು ಇವನು ಮರೆಯುವಂತೆಯೇ ಇಲ್ಲ. ಯಾವ ತಕರಾರೂ ಇಲ್ಲದೆ ತನ್ನ ಬಾಹುಗಳಲ್ಲಿ ಲೀನವಾಗಿದ್ದಳು. ಆದರೆ ಅದೇ ವಿಷಯವಾಗಿ ತನ್ನೊಡನೆ ವಾದ ಮಾಡಿರಲಿಲ್ಲ. ಯಾಕೆ ? ಅವಳೇನಾದರೂ ಗರ್ಭಿಣಿಯಾಗಿದ್ದರೆ, ಹೆದರಿ ತನ್ನನ್ನು ಪೀಡಿಸದೇ ಇರುತ್ತಿರಲಿಲ್ಲ. ಇವಳೇಕೆ ಗರ್ಭಿಣಿಯಾಗಲಿಲ್ಲ! ಇದು ನನ್ನ ಗಂಡಸುತನಕ್ಕೇ ಸವಾಲು ಅಲ್ಲವೇ ? ನಂತರ ಮತ್ತೊಮ್ಮೆ ಹತ್ತಿರ ಬಂದಿದ್ದವಳು ತಪ್ಪಿಸಿಕೊಂಡು ಓಡಿದ್ದಳು. ಏಕೆ ? ನನಗೆ ಅವಮಾನ ಮಾಡಲೆಂದೇ ? ಸುಮಾರು ಎರಡು ವರ್ಷಗಳ ತನಕ ನನ್ನನ್ನೇನೂ ಪ್ರಶ್ನಿಸದೇ ಸುಮ್ಮನೆ ಇದ್ದಳಲ್ಲ ಯಾಕೆ ? ನನ್ನ ಬಗ್ಗೆ ಏನನ್ನಿಸಿರಬಹುದು ? ನನ್ನ ಬಗ್ಗೆ ಸಂಶಯವೇ ? ನನ್ನ ಬಗ್ಗೆ ಹೇಸಿಗೆಯೇ ? ಮದುವೆಯ ಬಗ್ಗೆ ಅವಳಿಗೆ ಕಾತುರವಿರಲಿಲ್ಲವೇ ? ಯಾವ ಭಯವೂ ಇರಲ್ಲಿಲವೇ ? ಅಥವಾ ಯಾವ ಭಯ ಯಾವ ಅಂಜಿಕೆಯೂ ಇರದಂತೆ ತುಂಬಾ ಮುಂದುವರೆದಿದ್ದಳೇ? ಬೇರೆ ಗಂಡಸಿನ ಸಹವಾಸವಿರಬಹುದೆ ? ಅದೇ ನಿಜವಿರಬಹುದು

ಎಂದು ಪದೇ ಪದೇ ಅನ್ನಿಸತೊಡಗಿದಾಗ, ಅವಳ ಮೇಲಿನ ಸಿಟ್ಟು ಅಧಿಕವಾಗುತ್ತಿತ್ತು. ಅವಳ ಮೇಲೆ ತಿರಸ್ಕಾರ ಹುಟ್ಟಿತು. ಮದುವೆಯ ಮೊದಲಿನ ಆಲೋಚನೆಯು ಒಂದು ರೀತಿಯಾದರೆ, ಮದುವೆಯ ನಂತರದ ಆಲೋಚನೆ ಇನ್ನೊಂದು ರೀತಿ. ಪೂರ್ಣಿಳಿಗೆ ನನ್ನ ಮೇಲೆ ಪ್ರೀತಿ ಇಲ್ಲ. ನನ್ನ ಬಗ್ಗೆ ಗೌರವವಿಲ್ಲ. ನನ್ನ ಬಗ್ಗೆ ಏನೋ ಸಂಶಯವಿದೆ ಅಂತ ತನಗೆ ತಾನೇ ಊಹಿಸಿಕೊಂಡು ತೊಳಲಾಡುತ್ತಿದ್ದ. ಒಂದುಗಳಿಗೆ, ಅವಳನ್ನು ಮದುವೆಯಾಗದೇ ಅವಳನ್ನು ಸತಾಯಿಸಿದ್ದರೆ ಚೆನ್ನಾಗಿರುತ್ತಿತ್ತು ಅಂತ ಅನ್ನಿಸಿದರೆ, ಆಕ್ಷಣವೇ ಈಗ ಅವಳು ನನ್ನ ಪತ್ನಿ. ಅವಳು ಸುಖವಾಗಿರುವುದಕ್ಕೆ ಬಿಡುವುದಿಲ್ಲ ಎಂದುಕೊಳ್ಳುತ್ತಿದ್ದ. ಅದ್ಯಾಕೆ ತನಗೆ ಹೀಗೆ ಅನ್ನಿಸುತ್ತಿದೆ ಎನ್ನುವುದು ಅವನಿಗೇ ಅರಿವಿಲ್ಲದ ವಿಷಯ. ಒಮ್ಮೆ ಏನೋ ಕಳೆದುಹೋದ ಅನುಭವವಾಗುತ್ತಿತ್ತು. ಇದಕ್ಕೆಲ್ಲಾ ಪೂರ್ಣಿಮಾಳೇ ಕಾರಣ ಎಂದು ಅವಳನ್ನು ದೂಷಿಸುತ್ತಿದ್ದ. ಅವಳನ್ನು ಹಿಂಸಿಸಬೇಕು ಎಂಬ ಮನಸ್ಸಾಗುತ್ತಿತ್ತು. ದೈಹಿಕವಾಗಿಯೂ, ಮಾನಸಿಕವಾಗಿಯೂ ಅವಳನ್ನು ಎಷ್ಟು ಬಳಲಿಸಿದರೂ ಅವನಿಗೆ ತೃಪ್ತಿಯಾಗುತ್ತಿರಲಿಲ್ಲ. ಈ ನಡುವೆ ತನ್ನಲ್ಲಿ ಏನೋ ಕೊರತೆ ಇರಬಹುದೇ ಎಂಬ ಅನುಮಾನ ಕಾಡತೊಡಗಿತ್ತು. ಬೇಕೋ ಬೇಡವೋ, ಅತ್ಯಾಚಾರವೋ, ಬಲಾತ್ಕಾರವೋ ತಮ್ಮಿಬ್ಬರ ಸಂಬಂಧವಂತೂ ಬೆಳೆದಿದೆ. ಪೂರ್ಣಿಮಾ ಗರ್ಭಿಣಿಯಾಗದಿದ್ದರೆ... ? ಆಗ ಡಾಕ್ಟರರ ಬಳಿ ಹೋಗಬೇಕಾಗಿ ಬಂದರೆ ? ... ಆಗ ಡಾಕ್ಟರು ಏನು ಹೇಳುವರೋ ? ತನ್ನಲ್ಲೇ ಕೊರತೆ ಇದ್ದರೆ .... ಈ ಭಯ ಅವನನ್ನು ಆಗ ಈಗ ಕಾಡತೊಡಗಿತು. ಅವನ ನೆಮ್ಮದಿ ಹಾಳಾಗಿತ್ತು.

ಊಟ ತಿಂಡಿ ಸೇರದಾಗಿತ್ತು. ನಿದ್ದೆ ದೂರವಾಗಿತ್ತು. ಮನಸ್ಸನ್ನು ಕೆಡಿಸಿಕೊಂಡಿದ್ದ. ಈಗ ಹೇಗೂ ಊರಿಗೆ ಹೋಗುವ ಅವಕಾಶ ಬಂದಿದೆ. ಇವಳನ್ನು ಅಲ್ಲಿಯೇ ಬಿಟ್ಟು ಬರಬೇಕು. ಅವಳೂ ನೆಮ್ಮದಿ ಕೆಟ್ಟು ಹಾಳಾಗುವಂತೆ ಮಾಡಬೇಕು ಎಂದುಕೊಂಡು ಅವಳ ಕಡೆ ತಿರುಗಿ ನೋಡಿದ. ಬಸ್ಸಿನಲ್ಲಿ ಸೀಟಿಗೆ ಒರಗಿ ಕಣ್ಣು ಮುಚ್ಚಿ ನಿದ್ರಿಸುತ್ತಿದ್ದವಳನ್ನು ಕಂಡು ಮನಸ್ಸು ಕುದಿಯಿತು. ನನ್ನ ಮನಃಶಾಂತಿಯನ್ನು ಕೆಡಿಸಿ, ಎಷ್ಟು ಹಾಯಾಗಿದ್ದಾಳಲ್ಲ. ಇವಳಿಗೆ ಸರಿಯಾಗಿ ಬುದ್ಧಿ ಕಲಿಸಲೇಬೇಕು ಅಂತಂದು ಕೊಂಡ.

ಹೆಂಡತಿಯೊಡನೆ ಮನೆಯೊಳಗೆ ಕಾಲಿಟ್ಟ ಮಗನನ್ನೇ ದೀರ್ಘವಾಗಿ ನೋಡಿದಳು ಗೌರಮ್ಮ. ಹೊಸದಾಗಿ ಮದುವೆಯಾಗಿ, ಖುಷಿ ಖುಷಿಯಾಗಿರುವ ಕಳೆಯಂತೂ ಅವನ ಮುಖದಲ್ಲಿರಲಿಲ್ಲ. ಬೇಡಾಂತ ಎಷ್ಟು ಹೇಳಿದೆ. ನನಗೆ ಗೊತ್ತು ಲವ್ ಮ್ಯಾರೇಜ್‌ನ ಗತಿ ಇಷ್ಟೇ ಅಂತ... ಏನು ಹುಡುಗ್ರೋ ಇದರಲ್ಲಿ ನನ್ನ ಮಗನದೇ ಹೆಚ್ಚು ತಪ್ಪು ಅಂತ ಅನ್ನಿಸಿದರೂ, ಪೂರ್ಣಿಮಾಳ ಮೇಲಿನ ಅಸಮಾಧಾನವೇನೂ ಕಡಿಮೆಯಾಗಲಿಲ್ಲ. ಇವರಿಬ್ಬರೂ ಸಂಸಾರವನ್ನು ಶುರುಮಾಡಿ, ಕೆಲವೇ ತಿಂಗಳುಗಳು ಕಳೆದಿವೆ. ಖುಷಿ ಖುಷಿಯಾಗಿ ಹಕ್ಕಿಗಳಂತೆ ಹಾರಾಡಿಕೊಂಡು ಇರಬೇಕಾಗಿರುವ ದಿನಗಳು.... ಆದರೆ ಇವರಿಬ್ಬರ ನಡುವೆ ಈಗಾಗಲೇ ಬಿರುಕು ಕಾಣಿಸಿಕೊಂಡಿದೆ. ಇದನ್ನು ಸರಿ ಮಾಡುವುದು ನಮ್ಮಿಂದ ಸಾಧ್ಯವೇ ? ಆಕೆಯ ಮುಖದಲ್ಲಿ ಆತಂಕದ ನೆರಿಗೆಗಳು ಕಂಡವು. ತಾಯಿ ಯಾವ ಮಾತನ್ನೂ ಆಡದಿದ್ದಾಗ, ಚಂದ್ರ ತಾನೇ ಪ್ರಶ್ನಿಸಿದ.

''ಅದೇನು ಇದ್ದಕ್ಕಿದ್ದಂತೆ ಬರಬೇಕು ಅಂತ ಫೋನು ಮಾಡಿಸಿದ್ದಿಯಲ್ಲಾ ? ಎಲ್ಲಾ

ಹುಷಾರಾಗಿದ್ದೀರಿ ತಾನೇ ?...."

"ಹೂಂ.... ಎಲ್ಲಾ ಹುಶಾರಾಗಿದೀವಿ. ಮೊದಲು ಕೈಕಾಲು ಮುಖ ತೊಳೆದುಕೊಳ್ಳಿ.. ಆಮೇಲೆ ಮಾತನಾಡೋಣ ...."

"ಏನಮ್ಮಾ ... ಎಲ್ಲಾ ಹುಶಾರಾಗಿದ್ದ ಮೇಲೆ, ಈ ನಾಟಕ ಯಾಕೆ ? ಸುಮ್ಮಸುಮ್ನೆ ಏನೇನೋ ಮಾಡ್ತೀರಿ..." ಮೋರೆ ಗಂಟಿಕ್ಕಿ ನುಡಿದ. ಪೂರ್ಣಿಮಾ ಕೈಕಾಲು ತೊಳೆಯಲೆಂದು ಒಳಗೆ ನಡೆದಳು.

ತಾಯಿಯ ಕೈನ ಬಿಸಿ ಅಡಿಗೆ ಊಟ ಸಹ ಅವನ ಅಸಮಾಧಾನವನ್ನು ಕಡಿಮೆ ಮಾಡಲಿಲ್ಲ. ಏನೂ ನಡೆದಿಲ್ಲವೆನ್ನುವಂತೆ ಅತ್ತೆ ಸೊಸೆ ಕೆಳದನಿಯಲ್ಲಿ ಮಾತನಾಡುತ್ತಿದ್ದುದನ್ನು ಕಂಡು ಮತ್ತೂ ಅಸಹನೆಯಿಂದ ಮುಖ ಕಿವುಚಿದ. ಪೂರ್ಣಿಮಾ ತನ್ನ ಮೇಲೆ ಜಾಡಿ ಹೇಳುತ್ತಿರಬಹುದೇ ಎಂಬ ಅನುಮಾನ ಪ್ರಬಲವಾಯಿತು. ತನ್ನ ಪಾಡಿಗೆ ತಾನು ಹೋಗಿ, ಮಲಗುವ ಸಿದ್ಧತೆ ನಡೆಸಿದ. ಏನೂ ನಡೆದಿಲ್ಲವೆಂಬಂತೆ ಪೂರ್ಣಿಮಾ ರೂಮಿನೊಳಗೆ ಬಂದಾಗ ನಿದ್ದೆ ಬಂದಂತೆ ನಟಿಸಿದ.

ರಾತ್ರಿ ಕಳೆಯಿತು. ಬೆಳಿಗ್ಗೆ ಉಪಹಾರದ ವೇಳೆಯಲ್ಲೂ ಯಾವ ಆಕ್ಷೇಪಣೆಯ ಮಾತಿಲ್ಲ. ಪೂರ್ಣಿಮಾ ಯಾವ ಜಾದು ನಡೆಸಿರಬಹುದು .... ಅಮ್ಮನಾಗಲೀ, ಅಪ್ಪನಾಗಲೀ ಏನನ್ನೂ ಕೇಳಲಿಲ್ಲವಲ್ಲ ಎಂಬ ಆತಂಕ ಬೇರೆ. ಪೂರ್ಣಿಮಾ ಅಜ್ಜಿಯನ್ನು ಮಾತನಾಡಿಸಿಕೊಂಡು ಬರುತ್ತೇನೆ ಎಂದು ಹೊರಟಾಗ ಇವನ ಚಡಪಡಿಕೆ ಜಾಸ್ತಿಯಾಗಿತ್ತು. ಅವಳು ಅತ್ತ ಹೊರಟು ಹೋದ ಕೂಡಲೇ ಇತ್ತ ಗೌರಮ್ಮ ಬಾಯಿ ತೆರೆದಳು.

"ಏನೋ ಚಂದ್ರ... ಏನಾಯ್ತು ನಿನಗೆ ...? ಆ ಹುಡುಗೀನ ಆಸೆ ಪಟ್ಟು ಮದುವೆಯಾದೋನು ನೀನು.... ನಂಗೆ ಗೊತ್ತಿತ್ತು. .... ಹೀಗೆ ಆಗುತ್ತೇಂತ"

"ಅವಳು ನನ್ನ ಮೇಲೆ ಚಾಡಿ ಹೇಳಿದ್ಲಾ ?... ತನ್ನ ತಪ್ಪೇನಿದೆ ಅಂತ ಹೇಳಲಿಲ್ವಾ?....."

"ಅವಳು ಇವಳು ಅಂತ ಅದೇನು ? ಅವಳು ನಿನ್ನ ಹೆಂಡತಿ... ಹೆಂಡತೀನ ಗೌರವದಿಂದ ನಡೆಸ್ಕೋ..."

"ಓ....ಹೋ..... ಹೋ.... ಅದೇನು ಅಷ್ಟು ಹತ್ತಿರದವಳಾಗಿ ಬಿಟ್ಲಾ ನಿನ್ನ ಸೊಸೆ ಈಗ ....."ವ್ಯಂಗ್ಯದಿಂದ ಕೇಳಿದ.

"ಮದುವೆಗೆ ಮುಂಚಿನ ಮಾತು ಬೇರೆ..... ಪರರ ಮನೆಯ ಹುಡುಗಿಯನ್ನು ಮನೆ ತುಂಬಿಸಿಕೊಂಡ ಮೇಲೆ ಅವಳೂ ಈ ಮನೆಯವಳು..."

"ಅದೇನು ಮಾಟ ಮಾಡಿದಾಳೋ ಆ ಮಾಟಗಾತಿ. ಈಗ ನಾನು ಏನು ಆಡಿದರೂ ಅದು ತಪ್ಪಾಗಿಯೇ ಕಾಣುತ್ತೆ... ಬಿಡು ಅತ್ಲಾಗೆ."

"ಬಿಟ್ಟು ಬಿಡುವ ಮಾತಲ್ಲ ಇದು.. ಇಷ್ಟು ಬೇಗ ಹಳಸಿ ಹೋಗುವಂಥಾದ್ದು ಏನು ನಡೀತು ಅಂತ. ನಾವುಗಳೆಲ್ಲಾ ಎಷ್ಟೆಷ್ಟೋ ವರ್ಷಗಳಿಂದ ಅನುಸರಿಸಿಕೊಂಡು ಹೋಗ್ತಾ ಇಲ್ಲವೇ ? "

''ನಿನಗೆ ಅರ್ಥವಾಗುಲ್ಲ... ಅವಳು ನಿನ್ನೊಡನೆ ಏನು ಹೇಳಿದ್ಲು ಅಂತ ನಾನು ಕೇಳುಲ್ಲ.... ನಿನ್ನ ಸೊಸೆ ನಿನಗೆ ಅಷ್ಟು ಅಚ್ಚು ಮೆಚ್ಚಾದ್ರೆ, ನಿನ್ನ ಹತ್ತಿರಾನೇ ಇಟ್ಕೋ... ನನಗೇನೂ ತೊಂದರೆ ಇಲ್ಲ... '' ಗೌರಮ್ಮ ಕೆಟ್ಟದಾಗಿ ನಕ್ಕಳು.

''ಪೆದ್ದು ಪೆದ್ದಾಗಿ ಮಾತಾಡಬೇಡ... ನಿನಗೆ ಬೇಡವಾದರೆ, ಬಿಟ್ಟುಹೋಗು. ನಾಲ್ಕು ದಿನ ಕಳೆದ್ರೆ....ನೀನೇ ಕರೆದುಕೊಂಡು ಹೋಗುಕ್ಕೆ ಬರುತ್ತೀಯಾ... ''

''ನೋಡೋಣ ಆ ಸಮಯ ಬಂದಾಗ....''ಎನ್ನುತ್ತಾ ಆ ಜಾಗದಿಂದ ಎದ್ದು ಹೋದ. ಗೌರಮ್ಮ ಆತಂಕಗೊಂಡಳು. ಗಂಡನೊಡನೆ ಈ ವಿಷಯವನ್ನು ಚರ್ಚಿಸುವಂತಿಲ್ಲ. ''ನೀನುಂಟು ನಿನ್ನ ಮಗನುಂಟು...''ಎಂದು ಕೈಯಾಡಿಸಿ ಹೋಗುವವರೇ. ಈ ಮಗನೋ ಮೊದಲ್ನಿಂಟ ಸ್ವಲ್ಪ ವಕ್ರ. ಯಾರ ಮಾತೂ ರುಚಿಸುವುದಿಲ್ಲ. ಕಷ್ಟಪಟ್ಟು ಇಂಜಿನಿಯರಿಂಗ್ ಮುಗಿಸಿದ. ಒಳ್ಳೆ ಕೆಲಸ ಸಿಗಲಿಲ್ಲ ಅಂತಂದ್ರೆ ಅದು ನಮ್ಮ ತಪ್ಪೇ... ಮದುವೆ ಬಗ್ಗೆಯೂ ಆತುರ ತೋರಿದ. ಈ ಹುಡುಗೀನೇ ಆಗಬೇಕು ಅಂತ ಹಠ ಮಾಡದೇ ಇದ್ದಿದ್ದರೆ... ಈಗ ಏನು ಆಡಿದರೆ ಏನು ಪ್ರಯೋಜನ ? ಇವನೇ ಸರಿ ಇಲ್ಲದಿದ್ದ ಮೇಲೆ ನಿಟ್ಟುಸಿರು ಬಿಟ್ಟಳು.

ಸ್ವಲ್ಪ ಹೊತ್ತಿಗೆ ಪೂರ್ಣಿಮಾ ವಾಪಸ್ಸಾದಳು. ಅವಳೊಂದಿಗೆ ಅವಳ ಮನೆಯವರು ಯಾರೂ ಬಂದಿರಲಿಲ್ಲ. ಈಕೆ ನಿರಾಳಗೊಂಡಳು. ಅವರುಗಳ್ನು ಕಂಡರೆ ಈ ನನ್ನ ಮಗ ಏನು ಆಡಿ ಬಿಡುವನೋ ಎಂಬ ಆತಂಕ.

ಆ ರಾತ್ರಿಯ ಬಸ್ಸಿಗೆ ಚಂದ್ರನೊಬ್ಬನೇ ಹೊರಟು ನಿಂತಾಗ, ಗೌರಮ್ಮ ಪೂರ್ಣಿಮಾಳ ಕಡೆ ನೋಡದಳು. ಅವಳು ಕಣ್ಣು ತಪ್ಪಿಸಿದಳು. ಒಂದೆರಡು ದಿನಗಳು ಇವಳು ಇಲ್ಲೇ ಇರಲಿ, ಎಲ್ಲಾ ಸರಿಹೋಗುತ್ತದೆ ಎಂದುಕೊಂಡು ಸುಮ್ಮನಾದಳು.

ಆದರೆ ಅವಳ ಈ ಅನಿಸಿಕೆ ಸರಿಹೋಗಲಿಲ್ಲ. ವಾರ ಕಳೆದರೂ ಮಗ ಮತ್ತೆ ಬಂದಿರಲಿಲ್ಲ. ಆ ಬಗ್ಗೆ ಪೂರ್ಣಿಮಾ ಸಹ ಏನೂ ಹೇಳಲಿಲ್ಲ. ಕಡೆಗೆ ಒಂದು ದಿನ ತಾನಾಗಿಯೇ ಕೇಳಿದಳು.

''ಏನಮ್ಮಾ ಚಂದ್ರ ಯಾವಾಗ ಬರ್ತಾನಂತೆ? ಕಾಗದ, ಫೋನ್ ಏನಾದ್ರೂ ಬಂದಿತ್ತಾ? ''

''ಇಲ್ಲ ಅತ್ತೆ, ಕಾಗದ ಪೋನು ಯಾವುದೂ ಇಲ್ಲ...'' ನಿರಾಕಾರವಾಗಿ ಅವಳು ನುಡಿದಳು.

''ಅವನಿಗೆ ಸ್ವಲ್ಪ ಮುಂಗೋಪ. ನೀನಾದ್ರೂ ಸರಿಹೋಗಿಸಿಕೊಂಡು ಹೋಗಬಾರದೇನಮ್ಮ? ''

''ಏನಾಗಿದೆ ಅಂತ ತಿಳಿದ್ರೆ ಸರಿ ಹೋಗಿಸಿಕೊಂಡು ಹೋಗಬಹುದು. ''

''ನಿಮ್ಮಿಬ್ಬರ ಮಧ್ಯೆ ಏನು ನಡೀತು ಅಂತ ನಾನು ಕೇಳೋದು ಚೆನ್ನಾಗಿರಲ್ಲ.... ಆದರೆ ನಾನು ಹೆಣ್ಣು; ನೀನು ಹೆಣ್ಣು... ಗಂಡಸರು ತಮ್ಮ ಕೋಪ ತಾಪನ್ನೆಲ್ಲಾ ಹೆಂಡತಿಯ ಮೇಲೆ ಕಾರುತ್ತಾರೆ..... ಅವನು ಬರದಿದ್ದರೇನಾಯ್ತು... ನಿಮ್ಮ ಮಾವನಿಗೆ ಹೇಳು. ಅವರೇ ನಿನ್ನನ್ನು ಕರೆದುಕೊಂಡು ಹೋಗಿ ಬಿಟ್ಟು ಬರ್ತಾರೆ. ''

“ಇಲ್ಲ ಅತ್ತೆ.... ಅವರಾಗಿಯೇ ಬಂದು ಕರೆದುಕೊಂಡು ಹೋದ್ರೆ ಹೋಗ್ತೀನಿ. ಇಲ್ಲದಿದ್ರೆ ಇಲ್ಲೇ ಇದ್ದು ಬಿಡ್ತೀನಿ. ”

“ಅದ್ಹೇಗಮ್ಮ ಆಗುತ್ತೆ? .... ” ಸಮಜಾಯಿಸುವಂತೆ ನುಡಿದಳು. ”

“ಯಾಕತ್ತೆ ಆಗುಲ್ಲ... ನಿಮಗೆ ನನ್ನಿಂದ ಏನಾದ್ರೂ ತೊಂದರೇನಾ ?”

“ಹಾಗೇನಿಲ್ಲಮ್ಮ...... ನನಗೆ ನಮ್ಮ ಚಿಂಪಿ ಹೇಗೋ... ಹಾಗೇ ನೀನೂ.... ಎಷ್ಟು ದಿನ ಬೇಕಾದ್ರೂ ಇರಮ್ಮಾ... ಆದರೆ... ಬಸಿರಿ, ಬಾಣಂತನ ಅಂತ ಇದ್ದರೆ ಆ ಮಾತು ಬೇರೆ.... ಹೀಗೆ ಮದುವೆಯಾದ ಹೊಸದರಲ್ಲೇ... ವೈಮನಸ್ಸು ತಂದುಕೊಂಡು ಗಂಡ ಹೆಂಡತಿ ಬೇರೆ ಬೇರೆ ಇದ್ದರೆ, ಅದಕ್ಕೆ ಏನು ಅರ್ಥ ಅಂತ.. ”

ಪೂರ್ಣಿಮಾಳ ಕಣ್ಣಲ್ಲಿ ನೀರು ಇಳಿಯಿತು. ಗಂಟಲಿನಿಂದ ಮಾತು ಹೊರಡಲಿಲ್ಲ.

“ಹೋಗಲಿ ಬಿಡು, ಅಳೋದ್ಯಾಕೆ ? ?ಯಾರಾದ್ರೂ ನೋಡಿದ್ರೆ, ನಾನು ನಿನ್ನನ್ನ ಏನೋ ಅಂದು ಅಳಿಸಿದೆ ಅಂತ ಅಂದ್ಕೊಳ್ತಾರೆ ಅಷ್ಟೇ....”

“ಹಾಗಲ್ಲ ಅತ್ತೆ.... ” ಬಿಕ್ಕಳಿಸಿದಳು.

“ನಾನು ಎಷ್ಟಾಗಲೀ ಅತ್ತೇನೆ... ಅತ್ತೆ ಅತ್ತೇನೇ.... ತಾಯಿಯಾಗೋಕೆ ಸಾಧ್ಯವಿಲ್ಲ. ಚಂದ್ರ ನಮ್ಮನ್ನೆಲ್ಲಾ ಒಪ್ಪಿಸಿ, ನಿನ್ನನ್ನು ಮದುವೆಯಾದ... ಇಷ್ಟು ಬೇಗ ಅದೆಂತಹ ಮನಸ್ತಾಪ ಅಂತ ?”

“ಮನಸ್ತಾಪವೇನೂ ಇಲ್ಲ ಅತ್ತೆ... ಅವರ ಮನಸ್ನಲ್ಲಿ ಏನಿದೆ ಅಂತ ನನಗಂತೂ ತಿಳಿಯುತ್ತಿಲ್ಲ... ”

“ಹೆಂಡತಿಯಾದೋಳು ನಿನಗೇ ತಿಳೀದಿದ್ರೆ ನನಗೆ ಹೇಗೆ ತಿಳಿಯುತ್ತೆ ಹೇಳು ..”

ಅವನು ಪಶುವಿನಂತೆ ವರ್ತಿಸುತ್ತಾನೆ, ನನ್ನ ಮೇಲೆ ಸಂಶಯ ಪಡುತ್ತಾನೆಂದು ಹೇಳುವುದಾದರೂ ಹೇಗೆ ? ಹೇಳಿದರೆ ಇವರು ನಂಬುವರೆ... ಮಾವ ಏನು ಆಡಿದ್ದಾರೋ.... ? ತಾನೇನಾದರೂ ಆಡಿದರೆ, ಅದು ಸರಿಯೋ ತಪ್ಪೋ ಯಾರಿಗೆ ಗೊತ್ತು?

“ಗಂಡ ಹೆಂಡಿರ ಜಗಳ ಉಂಡು ಮಲಗೋ ತನಕ ಅಂತ ಗಾದೆ ಮಾತಿದೆ... ನಿಮ್ಮಿಬ್ಬರಲ್ಲಿ ಪರಸ್ಪರ ಪ್ರೀತಿ, ಆಕರ್ಷಣೆ ಇದ್ದರೆ ಮನಸ್ತಾಪ ಯಾಕೆ ಬರುತ್ತೆ ನೀನೇ ಹೇಳು....”

“ಹಾಗಲ್ಲ ಅತ್ತೆ... ಅವರಿಗೆ ಮೊದಲಿನ ಪ್ರೀತೀನೇ ಇಲ್ಲ....” ತೊದಲಿದಳು. ಆಕೆ ನಕ್ಕು ಬಿಟ್ಟಳು

“ನಿಮಗೆಲ್ಲಾ ಹುಡುಗಾಟ. ಪ್ರೀತಿ ಇಲ್ಲ ಅಂದರೆ ಏನರ್ಥ ? ... ನಿನ್ನನ್ನು ಬಯಸಿ ಬಯಸಿ ಮದುವೆಯಾಗಿದಾನೆ. ಅದೆಲ್ಲಾ ತಾನಾಗಿಯೇ ಸರಿ ಹೋಗುತ್ತದೆ.....”

“ಏನು ಸರಿಹೋಗುತ್ತದೋ ಎಂದು ತನ್ನಲ್ಲೇ ಹೇಳಿಕೊಂಡಳು. ಆಗ್ಲಿ ಅತ್ತೆ, ಕೇಶು ಮಾವನನ್ನು ಕೇಳ್ತೀನಿ.... ಅವರ ಜೊತೆ ನಾನು ನಾಳೆ ನಾಡಿದ್ದರಲ್ಲಿ ಬೆಂಗಳೂರಿಗೆ ಹೋಗ್ತೀನಿ.”

''ಒಳ್ಳೇದಮ್ಮ ಹಾಗೆ ಮಾಡು... ಒಟ್ನಲ್ಲಿ ಗಂಡ ಹೆಂಡತಿ, ನೀವಿಬ್ರೂ ಅನ್ಯೋನ್ಯವಾಗಿದ್ರೆ ನಮಗೂ ಸಂತೋಷಾನೆ.... ''ಪೂರ್ಣಿಮ ತನ್ನ ಸೋದರ ಮಾವನ ಮನೆಗೆ ಹೊರಟಳು.

ಅತ್ತೆಯ ಕಾಲಿಗೆ ನಮಸ್ಕರಿಸಿ, ಆಶೀರ್ವಾದ ಪಡೆದು, ಆಟೋ ಹತ್ತಿದಳು. ಗೌರಮ್ಮಳ ಕಣ್ಣಲ್ಲಿ ನೀರು ಜಿನುಗಿತು. ಸೊಸೆಯೂ ಮಗಳಂತೆಯೇ.... ಅಳಿಯ ಮಗಳಲ್ಲಿ ವಿರಸ ಮೂಡಿದರೆ, ಮಗಳಿಗೆ ತಿಳುವಳಿಕೆ ಹೇಳುತ್ತೇವೆ. ಹಾಗೇ ಇಲ್ಲಿಯೂ ಸೊಸೆಗೇ ತಿಳುವಳಿಕೆ ಹೇಳಬೇಕು... ನನಗೆ ಗೊತ್ತು ಈ ಹುಡುಗಿಯಲ್ಲಿ ಏನೂ ತಪ್ಪಿಲ್ಲ. ನಮ್ಮ ಪದಾರ್ಥವೇ ಸರಿಯಾಗಿಲ್ಲದಿರುವಾಗ ಬೇರೆ ಯಾರನ್ನೋ ಯಾಕೆ ದೂಷಿಸಬೇಕು ? ಈ ಮಾತುಗಳೆಲ್ಲ ನನ್ನ ಗಂಡನಿಗೆ ಬೇಕೂ ಇಲ್ಲ, ಅರ್ಥವೂ ಆಗುವುದಿಲ್ಲ. ಹೇಗೋ ಎಲ್ಲ ಸರಿ ಹೋದರೆ ಸಾಕು.... ಅಷ್ಟು ಮಾಡು ಭಗವಂತ.... ಮನದಲ್ಲಿಯೇ ದೇವರಿಗೆ ವಂದಿಸಿ ಬೇಡಿಕೊಂಡಳು.

ಎರಡು ದಿನಗಳ ನಂತರ, ಪೂರ್ಣಿಮಾ ಕೇಶವನೊಂದಿಗೆ ವಾಪಸ್ಸಾದಳು. ಅವಳ ಮುಖ ಕಳಾಹೀನವಾಗಿತ್ತು. ಗೌರಮ್ಮ ಏನನ್ನಾದರೂ ಕೇಳುವ ಮೊದಲೇ ಕೇಶವ ನುಡಿದಿದ್ದ.

''ನಿಮ್ಮ ಮಗ ಹೀಗೆ ಮಾಡ್ತಾನೆ ಅಂತ ನಾವು ಅಂದ್ಕೊಂಡಿರಲಿಲ್ಲ. ಹೇಳದೇ ಕೇಳದೇ ನಾಪತ್ತೆಯಾಗಿದಾನೆ. ಕೆಲಸಕ್ಕೂ ರಿಸೈನ್ ಮಾಡಿ ಬಿಟ್ಟಿದಾನೆ.....''

''ಅಯ್ಯೋ ದೇವರೆ ... ಎಲ್ಲಿ ಹೋದ ? ಏನಾದೂರ ಅಪಾಯ ಮಾಡಿಕೊಂಡಿರಬಹುದೇ..... '' ಆಕೆಗೆ ದುಃಖ ಉಕ್ಕಿ ಬಂದಿತ್ತು.

''ಅತ್ತರೆ ಏನೂ ಪ್ರಯೋಜನವಿಲ್ಲ. ಬೇಕೂಂತಲೇ ಹೀಗೆ ಮಾಡಿರೋದು. ನಾನು ಪೋಲೀಸ್ ಕಂಪ್ಲೇಂಟ್ ಕೊಟ್ಟು ಬಂದಿದೀನಿ... ''

''ಛೆ.... ಛೆ.... ಹಾಗೇಕೆ ಮಾಡಿದ್ರಿ ? ನಾಲ್ಕು ಕಡೆ ನಾಲ್ಕು ಜನರಲ್ಲಿ ವಿಚಾರಿಸಿದ್ರೆ ಆಗ್ತಿತ್ತು...''

''ಎಲ್ಲಾ ಆಯ್ತಮ್ಮಾ.... ಎಲ್ಲಾ ಆಯ್ತು... ಎರಡು ದಿನಗಳಿಂದ ನನಗೆ ಅದೇ ಕೆಲಸ... ನಿಮ್ಮ ಮೈದುನನ ಮನೆಗೂ ಹೋಗಿ ವಿಚಾರಿಸಿದ್ದಾಯ್ತು... ಅಲ್ಲಿಗೂ ಬಂದಿರಲಿಲ್ಲವಂತೆ.''

''ಸುಮ್ನೆ ಎಲ್ರಿಗೂ ತಿಳಿದ ಹಾಗಾಯ್ತು.... ಏನು ಕಷ್ಟವೋ ...ಏನು ಪರದಾಟವೋ... '' ಆಕೆ ಲೊಚಗುಟ್ಟಿದಳು.

''ಹಾಗೇನಾದ್ರೂ ಇದ್ದಿದ್ರೆ ನಿಮಗಾದ್ರೂ ತಿಳಿಸಬಹುದಾಗಿತ್ತಲ್ಲ... ಯಾರಿಗೂ ಏನೂ ತಿಳಿಸದೇ ಪರಾರಿಯಾದ್ರೆ ಏನಂದುಕೊಳ್ಳಬೇಕು....''

''ಅವನ ಕಷ್ಟ ಏನೂಂತ ನಮಗಂತೂ ತಿಳೀದು. ಈ ಹುಡುಗೀಗಾದ್ರೂ ತಿಳಿಯಬೇಡವೇ ? ''

''ಇವಳಿಗೇನು ತಿಳಿಯುತ್ತೆ ! ಇನ್ನು ಚಿಕ್ಕವಳು. ಹೆಂಡತಿ, ಸಂಸಾರ ಅಂತ ಆಸಕ್ತಿ ಇಲ್ಲದವನು ಮದುವೆಯಾಕೆ ಆಗಬೇಕಾಗಿತ್ತು .. ನೀವೇ ಹೇಳಿ......''

''ನಾನೇನು ಹೇಳಲಪ್ಪಾ.... ನಮಗಂತೂ ಈ ಮದುವೆ ಸುತಾರಾಂ ಇಷ್ಟವಿರಲಿಲ್ಲ..... '' ಬಾಯಿಂದ ಮಾತು ಬಿದ್ದಿತ್ತು.

''ಈಗ ನಾವು ಏನು ಮಾಡಬೇಕು ನೀವೇ ಹೇಳಿ... ನಮ್ಮ ಹುಡುಗಿಯ ಬಾಳು ಹಾಳಾಗಿ ಹೋಗ್ತಿದೆಯಲ್ಲ...''

''ಯಾಕ್ರೀ ಹಾಳಾಗುತ್ತೆ ? ನಾವೆಲ್ಲಾ ಇಲ್ಲವೇ ? ಸರಿ ಮಾಡೋಣ. ... ನಮಗೂ ಜವಾಬ್ದಾರಿ ಇದೆ. ಇಂದಲ್ಲ, ನಾಳೆ ಬಂದೇ ಬರುತ್ತಾನೆ. ಇನ್ನೆಲ್ಲಿಗೆ ಹೋಗ್ತಾನೆ.... ''ಅದುವರೆಗೂ ಸುಮ್ಮನಿದ್ದ ಮೈಲಾರಯ್ಯ ನುಡಿದರು.

''ನೀವು ದೊಡ್ಡವರು. ಅನುಭವಿಗಳು. ನೀವೇ ಸರಿಪಡಿಸಬೇಕು. ಇಲ್ಲದಿದ್ರೆ ಈ ಹುಡುಗಿಯ ಬಾಳು ಹಾಳಾಗಿ ಹೋಗುತ್ತದೆ.''

''ಆಯ್ತಪ್ಪಾ ...... ನಮಗೂ ತಿಳುವಳಿಕೆ ಇದೆ. ಹುಡುಗಾಟ ಅಂತಂದ್ರೆ ಹೇಗೆ? ಜೀವನ ಅಂದ್ರೆ ಒಂದರ್ಥ ಬೇಡವೆ ? ಒಂದು ಬೆಲೆ ಬೇಡವೇ ? ನೀವು ನಿರಾತಂಕವಾಗಿರಿ. ನಾನು ಎಲ್ಲಾ ಸರಿಮಾಡ್ತೀನಿ. ಎಲ್ಲೇ ಇದ್ದರೂ ಒದ್ದು ಎಳೆದುಕೊಂಡು ಬರ್ತೀನಿ. ಹೋಗಮ್ಮ ನೀನು ಒಳಗೆ ಹೋಗು. ನಾನೂ ನಿನ್ನ ತಂದೆಯವರ ಹಾಗೆ. ... ನಮಗೆ ನೀನು ಭಾರವಲ್ಲ....'' ಆತ ಪೂರ್ಣಿಮಾಳ ಕಡೆ ತಿರುಗಿ ನುಡಿದರು.

''ಥ್ಯಾಂಕ್ ಯೂ ಸರ್.... ನಾನೂ ಆವೇಶದಲ್ಲಿ ಏನೇನೋ ಆಡಿ ಬಿಡ್ತೀನಿ. ಕ್ಷಮಿಸಿ.... ಇನ್ನೊಂದು ಮಾತು ಹೇಳಿದರೆ, ನೀವು ಬೇಸರ ಮಾಡ್ಕೊಳ್ಳೋದಿಲ್ಲ ಅಂತ ಅಂದ್ಕೊತೀನಿ''

''ಅದೇನು ಹೇಳ್ತಿರೋ ಹೇಳಿಬಿಡಿ.... ಇಷ್ಟು ಮಾತು ಕೇಳಿದೋರಿಗೆ ಅಷ್ಟು ಕೇಳೋಕೆ ಆಗುಲ್ವೆ ? ''

''ಛೆ..., ಛೆ..., ನಿಮಗೆ ಬೇಸರವಾಗಿದೆ ನಂಗೊತ್ತು....''

''ಹೇಳೀಪ್ಪಾ... ಹೇಳಿ .... ಹೇಳ್ಬಿಡಿ....''

''ನಿಮ್ಮ ಮಗನ ವರ್ತನೆಗಳನ್ನು ಗಮನಿಸಿದರೆ ಏನಾದರೂ ಮಾನಸಿಕ ತೊಂದರೆ ಇರಬಹುದೇ.... ಎಂಬ ಅನುಮಾನ...'' ತೊದಲಿದ.

''ಏನ್ರೀ ನನ್ನ ಮಗನ್ನ ಹುಚ್ಚ ಅಂತ ಅಂತೀರಾ....'' ಆತ ಹೆದರಿದ್ದ.

''ಛೆ .... ಛೆ.... ನಾನೆಲ್ಲಿ ಹಾಗಂದೆ...? ಈ ಕಾಲದ ಹುಡುಗರು... ವಿದ್ಯಾಭ್ಯಾಸ , ಉದ್ಯೋಗಗಳಲ್ಲಿ ಅವರು ನಿರೀಕ್ಷಿಸಿದ ಮಟ್ಟ ಸಿಗದೇ ಇದ್ದಾಗ ನಿರಾಶೆಗೊಳ್ತಾರೆ.... ಅದು ಮನಸ್ಸಿನ ಮೇಲೆ ಪರಿಣಾಮ ಬೀರುತ್ತೆ.... ಅದಕ್ಕೆ''

''ಆ ಸಿಟ್ಟು ಕೋಪಾನ ಹೆಂಡತಿ ಮೇಲೆ ತೀರಿಸ್ಕೊಂಡಿದಾನೇಂತ ಹೇಳ್ತಿದೀರಾ... ಹೌದು ತಾನೇ... ಇಂಥದ್ದೆಲ್ಲ ಹೊಸದೇನ್ರೀ.... ನೀವೂ ನಾವೂ ನಮ್ಮ ನಮ್ಮ ಮನೆಯವರ ಮೇಲೆ ಕೂಗಾಡುಲ್ವೇ .... ಇದ್ಯಾವ ಹೊಸ ವಿಷಯ ಬಿಡಿ....''

''ಆದರೆ... ನಾವುಗಳೆಂದೂ ಮದುವೆಯಾದ ಹೊಸದರಲ್ಲೇ ಹೀಗೆ ಆಡಿರಲಿಲ್ಲ, ಯಾರಿಗೂ ತಿಳಿಸದೇ ನಾಪತ್ತೆಯಾಗಿರಲಿಲ್ಲ... ಅಲ್ಲವೇ ? ''

"ನೀವು ದುಡುಕಿಬಿಟ್ಟು ಪೋಲಿಸ್ ಕಂಪ್ಲೇಂಟ್ ಕೊಟ್ಟಿದೀರಾ .... ಅವನಿಗೆ ತಿಳಿದರೆ ಇನ್ನು ಏನೇನು ರಂಪ ರಾದ್ಧಾಂತ ಮಾಡ್ತಾನ್ಲೋ..... ? ಮೊದಲು ಹೋಗಿ ಆ ಕಂಪ್ಲೇಂಟ್‌ನ ವಾಪಸ್ಸು ತೆಗೆದುಕೊಳ್ಳಿ. ವಾಪಸ್ಸು ಬಂದೇ ಬರ್ತಾನೆ, ಬರದೇ ಎಲ್ಲಿ ಹೋಗ್ತಾನೆ ...... "

ಕೇಶವನ ಮುಖ ಚಿಕ್ಕದಾಗಿತ್ತು. ಮತ್ತೊಮ್ಮೆ ಕ್ಷಮೆ ಕೇಳಿ, ತನ್ನ ಮನೆಗೆ ನಡೆದ. ಅದೇ ರಾತ್ರಿ ಕೇಶವ ಹಾಗೂ ಮೈಲಾರಯ್ಯ ಮತ್ತೆ ಬೆಂಗಳೂರಿಗೆ ಹೊರಟರು. ನಾಲ್ಕಾರು ದಿನಗಳು ಕಳೆದರೂ ಅವನೆಲ್ಲಿದಾನೆಂದು ಪತ್ತೆಯಾಗಲಿಲ್ಲ. ನಿರಾಸೆಯಿಂದ ಹಿಂತಿರಗಿದರು.

"ನನ್ನ ಮಗ ಹೀಗೆ ಮಾಡಿದ್ನಲ್ಲ ಅಂತ ತುಂಬಾ ವ್ಯಥೆಯಾಗುತ್ತಿದೆ ಕೇಶವಾ... ಆದರೆ ಒಂದಲ್ಲ ಒಂದು ದಿನ ಹಿಂದಿರುಗಿ ಬರುತ್ತಾನೆ ಅಂತ ನನಗೆ ಅನ್ನಿಸುತ್ತಿದೆ. ನಮ್ಮ ಪ್ರಯತ್ನವನ್ನು ನಾವು ಮುಂದುವರಿಸೋಣ.... ನಿಮ್ಮ ಹುಡುಗಿಗೆ ಧೈರ್ಯ ಹೇಳಿ. ಅಧೈರ್ಯ ಗೆಡದಿರಲಿ... ಎಲ್ಲಾ ಸರಿಹೋಗುವವರೆಗೂ ಅವಳು ನಮ್ಮ ಮನೆಯಲ್ಲಿಯೇ ಇರುತ್ತಾಳೆ" ಮೈಲಾರಯ್ಯ. ಆಶ್ವಾಸನೆಯೊಂದಿಗೆ ನುಡಿದರೂ, ಕೇಶವನಿಗೆ ಸಮಾಧಾನವಾಗಲಿಲ್ಲ. ಆದರೆ ಬೇರೆ ವಿಧಿ ಯೇ ಇರಲಿಲ್ಲ. ಈ ಅತ್ತೆ ಮಾವನ ಸಹಕಾರವೂ ಇಲ್ಲದಿದದರೆ, ಪೂರ್ಣಿಮಾಳ ಗತಿ ಏನಾಗುತ್ತಿತ್ತೋ....? ಇವಳಪ್ಪನೋ ಮೊದಲೇ ಸರಿ... ಮಗಳನ್ನು ತನ್ನ ಮನೆಗೆ ಸೇರಿಸುತ್ತಾನೆಯೇ ? ನೋಡೋಣ, ದೇವರಿದ್ದಾನೆ. ಅವನು ನಡೆಸಿದಂತಾಗಲಿ ಎಂದುಕೊಂಡು ತಂಗಿಗೆ ಒಮ್ಮೆ ಬಂದು ಹೋಗು ಎಂದು ಪತ್ರವನ್ನು ಬರೆದು, ಪ್ರಯಾಣದ ಖರ್ಚಿಗೆಂದು ಹಣವನ್ನು ಕಳುಹಿಸಿದ.

ಶ್ರೀಮತಿ, ಗಂಡನೊಡನೆ ಸುಳ್ಳು ಹೇಳಿ "ಅಮ್ಮನಿಗೆ ಹುಶಾರಿಲ್ಲವಂತೆ, ನನ್ನನ್ನು ನೋಡಿ ಮಾತನಾಡಿಸಬೇಕೂಂತ ಹಂಬಲಿಸ್ತಿದಾಳಂತೆ" ಎಂದು ಹೇಳಿ ಹೊರಟೇ ಬಿಟ್ಟಳು.

ಅಣ್ಣನನ್ನು ಕಂಡೊಡನೆ ಶ್ರೀಮತಿಯ ದುಃಖ ಉಕ್ಕಳಿಸಿತು. "ಅಣ್ಣಾ ಇದೇನೋ ಗ್ರಹಚಾರ...? ಹೀಗೇಕಾಯ್ತು ಅಂತ..."

"ಭಾವ ಏನಂದ್ರು ? "

"ನಿಮ್ಮ ಭಾವಂಗೆ ನಾನು ಏನನ್ನು ಹೇಳಿಲ್ಲ...."

"ಹೋಗಲಿ ಬಿಡು. ಒಳ್ಳೆಯದೇ ಆಯ್ತು... ನಿನ್ನ ಮಗಳು ದುಡುಕಿ ಬಿಟ್ಟಳು ಅಂತನ್ನಿಸ್ತಿದೆ. ಅಲ್ಲ... ಎಲ್ಲಾ ಬಿಟ್ಟು ಅಂಥಾ ಅವಿವೇಕೀನ ಪ್ರೀತಿಸೋದು.... ಈಗ ನೋಡು ಏನು ಮಾಡಿಬಿಟ್ಟ...? "

"ಅವಿವೇಕಿ ಅಲ್ಲ, ಮೋಸಗಾರ ಅನ್ನು. ಪೂರ್ಣಿಮಂಗೆ ಮೋಸ ಮಾಡಿ ಬಿಟ್ಟ"

"ನಾನೂ ಸುಮ್ಮನಿರ್ತೀನಾ ? ಅವನಿಗೆ ಬುದ್ಧಿ ಕಲಿಸದೇ ಬಿಡುವುದಿಲ್ಲ. ಮೊದಲು, ನಿನ್ನ ಮಗಳ ಹತ್ತಿರ ಮಾತ್ನಾಡು, ಏನು ನಡೀತು ಅಂತ ಸರಿಯಾಗಿ ತಿಳಕೋ...."

"ಅವನಿಗೆ ಇವಳ ಮೇಲೆ ಏನೋ ಸಂಶಯ, ಹಾಗೇ ಸರಿ ಹೋಗಬಹುದು ಅಂತ ಅಂದ್ಕೊಂಡೆ..... ನೋಡಿದ್ರೆ ಅವನೇ ಸರಿಯಿಲ್ಲ...."

"ತಾನು ಕಳ್ಳ ಪರರನ್ನು ನಂಬ ಅನ್ನೋಹಾಗೆ... ತನ್ನ ತಪ್ಪನ್ನು ಮುಚ್ಚಿಡೋಕೆ ಹೀಗೆ ನಾಟಕ ಆಡ್ತಿದಾನೆ... ಎದುರಿಗೆ ಬರಲಿ, ಝಾಡಿಸಿ ಹಾಕಿ ಬಿಡ್ತೀನಿ..."

''ನೀನೂ ಅವನ ತರಹ ದುಡುಕಬೇಡಪ್ಪಾ.... ಮೊದಲು ಅವನು ಎಲ್ಲಿದ್ದಾನೇಂತ ಪತ್ತೆಯಾಗಲಿ. ತಿಳುವಳಿಕೆ ಹೇಳೋಣ. ಹಣಕಾಸಿನ ತಾಪತ್ರಯವಿದ್ದರೆ ಪರಿಹರಿಸೋಣ....''

''ಹಣಕಾಸು ಕೊಡ್ತಾ ಹೋದರೆ, ಅದಕ್ಕೆ ಒಂದು ಮಿತಿ ಎಲ್ಲಿದೆ ? ಅವನಿಗೆ ಮಾನಸಿಕ ವೈದ್ಯರ ಅಗತ್ಯವಿದೆ ಅವನು ಮಾನಸಿಕ ರೋಗಿ''

ಶ್ರೀಮತಿ ಬೆಚ್ಚಿಬಿದ್ದಳು. ತನ್ನ ಅಳಿಯನಿಗೆ ಮನಸ್ವಾಸ್ಥ್ಯ ಸರಿಯಿಲ್ಲ ಅಂತಂದರೆ .... ಪೂರ್ಣಿಮಾಳ ಗತಿಯೇನು

''ಏನೇನೋ ಹೇಳಿ ಹೇದರಿಸಬೇಡಪ್ಪಾ.... ಮದುವೇಲಿ ಸರಿಯಾಗಿಯೇ ಇದ್ನಲ್ಲ.... ''ಹಾಗೆ ಹೇಳಿದರೂ, ಅವಳಿಗೂ ಏನೋ ಅನುಮಾನ ಕಾಡತೊಡಗಿತು. ಅವನ ವರ್ತನೆಯಲ್ಲಿ ಏನೋ ವ್ಯತ್ಯಾಸವಿದೆ ಅಂತ ಅನ್ನಿಸತೊಡಗಿದಾಗ, ನಡುಗಿ ಹೋದಳು. ಮನೆದೇವರಿಗೆ ಮನದಲ್ಲೇ ವಂದಿಸಿ ಬೇಡಿಕೊಂಡಳು.

''ಪೂರ್ಣಿಮಾಳ ಹತ್ತಿರ ಮಾತನಾಡಬೇಕೂಂತ ಅನ್ನಿಸ್ತಿದೆ. ಆದರೆ, ಆಕೆ ಎದುರಿಗೆ ಹೇಗೆ ಮಾತನಾಡುವುದು ?''

''ನಮಗೇಕೆ ಭಯ ? ನಾವು ಏನೂ ತಪ್ಪನ್ನು ಮಾಡಿಲ್ಲವಲ್ಲ.... ನಿನ್ನ ಮಗಳನ್ನು ನೀನು ಹೋಗಿ ಮಾತನಾಡಿಸುವುದಕ್ಕೆ ಆಕೆಯ ಅಪ್ಪಣೆ ಏಕೆ ? ''

''ಹಾಗಲ್ಲಣ್ಣಾ.... ಪದೇ ಪದೇ ನಾವುಗಳು ಹೋದರೆ ಆಕೆ ಏನೆಂದುಕೊಳ್ತಾಳೋ.....''

''ಅವಳನ್ನೇ ಕರೆಸ್ತೀನಿ.''

''ಬೇಡ ಬೇಡ ಅವಳು ಅತ್ತೆ ಮನೆಯಲ್ಲಿರುವುದೇ ಸರಿ. ಅಲ್ಲದೇ ಅಮ್ಮನಿಗೇಕೆ ಹಗರಣವೆಲ್ಲಾ ತಿಳಿಯಬೇಕು ?''

''ಅಮ್ಮನಿಗೆ ಗೊತ್ತಿಲ್ಲದ್ದು ಏನಿಲ್ಲ. ಮೊಮ್ಮಗಳಿಗೆ ತಿಳುವಳಿಕೆ ಹೇಳಿದಳು. ಅವಳು ಸೊರಬರ ಅಂತ ಅತ್ಕೊಂಡು ಎದ್ದು ಹೋದಳು. ''

''ಹೌದಾ ? ಥೂ ಎಂಥಾ ನಾಚಿಕೆಗೇಡಿನ ಪ್ರಸಂಗ. ಅತ್ತಿಗೆ ಏನಂದು ಕೊಂಡರೋ... ಅವರು ತವರು ಮನೆಯವರಲ್ಲಿ ಹೇಳದೆ ಇರ್ತಾರಾ ?''

''ಅವಳು ಅಂಥೋಳಲ್ಲ. ಇಷ್ಟರ ಮೇಲೆ ಹೇಳಿದರೆ ಹೇಳಲಿ ಬಿಡು. ಒಬ್ಬೊಬ್ಬರ ಮನೇಲಿ ಒಂದೊಂದು ಹಗರಣ ಇದ್ದೇ ಇರುತ್ತೆ. ''

''ಆದರೂ... ತಲೆ ಎತ್ತಿ ತಿರುಗದ ಹಾಗಾಯ್ತು ನನ್ನ ಸ್ಥಿತಿ. '' ಶ್ರೀಮತಿ ಬಿಕ್ಕಳಿಸಿದಾಗ ಕೇಶವ ಸಮಾಧಾನ ಮಾಡಿದ.

''ಹಾಗಲ್ಲ ಏನೂ ಆಗುಲ್ಲ.... ಎಲ್ಲಾ ಸರಿ ಹೋಗುತ್ತದೆ. ನಾವು ನಂಬಿದ ದೇವರು ನಮ್ಮ ಕೈ ಬಿಡುವುದಿಲ್ಲ. ಒಂದಲ್ಲ ಒಂದು ದಾರಿಯನ್ನು ಖಂಡಿತಾ ತೋರಿಸಿಯೇ ತೋರಿಸುತ್ತಾನೆ.''

  

ಹಾಗೆ ಒಬ್ಬರಿಗೊಬ್ಬರು ಸಮಾಧಾನದ ಮಾತುಗಳನ್ನು ಹೇಳಿಕೊಂಡರೂ ಸುಲಭವಾಗಿ ಯಾವುದೂ ಪರಿಹಾರ ಒದಗಲಿಲ್ಲ. ಇದ್ದಕ್ಕಿದ್ದಂತೆ ಅನಿರೀಕ್ಷಿತವಾಗಿ ಚಂಪಕ ಹಾಗೂ ಅವಳ ಗಂಡ ಪ್ರಕಾಶ ಬಂದಿಳಿದಾಗ, ಮನೆಯವರಿಗೆಲ್ಲ ಅಚ್ಚರಿ. ಚಂಪಕಳನ್ನು ನೋಡಿದರೆ ತೆಳ್ಳಗೆ ಹಾಗೇ ಇದಾಳೆ. ಮೈಕೈ ತುಂಬಿಕೊಂಡಿಲ್ಲ. ಗರ್ಭಿಣಿಯಾಗಿರುವ ಸೂಚನೆಗಳಿಲ್ಲ. ಸಂಶಯವನ್ನು ನಿವಾರಿಸಿಕೊಳ್ಳಲು ಗೌರಮ್ಮ ಮಗಳನ್ನು ಕೇಳಿಯೇ ಬಿಟ್ಟಳು.

''ಏನೇ ಚಿಂಪಿ.... ಹುಶಾರಾಗಿದೀಯ ತಾನೇ.... ಅದೇನು ಇದ್ದಕ್ಕಿದ್ದಂತೆ ಯಾವ ಸೂಚನೆಯೂ ಇಲ್ಲದೆ ಬಂದಿಳಿದದ್ದು...''

''ಯಾಕಮ್ಮಾ.... ನಮ್ಮಪ್ಪನ ಮನೆಗೆ ನಾನು ಬರೋಕೆ ಸೂಚನೆ ಕೊಡಬೇಕಾ....''

''ಹಾಗಲ್ವೇ.... ಈಗ ಎಷ್ಟಾಗಲೀ ನೀನು ಬೇರೆ ಮನೆಯನ್ನು ಸೇರಿದವಳು. ... ನಮ್ಮ ನೆನಪು ಹೇಗೆ ಬಂತೂಂತ.....?''

''ಮೊದಲು ನನಗೆ ಈ ಮನೆ.... ಆ ಮೇಲೆ ಆ ಮನೆ... ಅದಿರಲಿ ಈಗ ನಾನು ಬಂದಿರುವ ಕಾರಣವೇ ಬೇರೆ... ಇದಾನಲ್ಲ ನಿನ್ನ ಮಗ....''

''ಅಂ..... ಚಂದ್ರ ಸಿಕ್ಕಿದ್ನಾ ನಿನಗೆ ? '' ಆಕೆ ಉದ್ವೇಗದಿಂದ ಮಗಳನ್ನು ಪ್ರಶ್ನಿಸಿದಳು.

''ಇಲ್ಲ ನನಗೆ ಸಿಕ್ಕಿಲ್ಲ. ನನ್ನ ಮುಖ ನೋಡೋಕೆ ಅವನಿಗೆಲ್ಲಿದೆ ಧೈರ್ಯ.... ? ಏನಂತೆ ಅವನ ಕತೆ ? ... ಇವಳು ಏನ್ಮಾಡಿದಳಂತೆ... ಇವಳ ಸ್ನೇಹ ಮಾಡಿದಾಗ್ಲೇ ನಂಗೆ ಗೊತ್ತಿತ್ತು ಹೀಗಾಗುತ್ತೆ ಅಂತ.....''

''ಮೆಲ್ಲಗೆ ಮಾತಾಡೇ ಚಿಂಪಿ.... ನಿನ್ನ ಅತ್ತಿಗೆ ರೂಮಿನಲ್ಲಿದಾಳೆ.''

''ಕೇಳಿಸ್ಲಿ ಬಿಡಮ್ಮ.... ನಾನೇನು ಸುಳ್ಳು ಹೇಳ್ತಿಲ್ಲ....'' ಪೂರ್ಣಿಮಾ ರೂಮಿನಿಂದ ಹೊರಗೆ ಬರುತ್ತಿದ್ದಂತೇ ಚಿಂಪಿ ಮಾತು ನಿಲ್ಲಿಸಿದಳು.

''ಏನು ಚಂಪಕಾ ? ಈಗ ಬಂದ್ಯಾ ? ಹೇಗಿದೀಯ ....'' ಪೂರ್ಣಿಮಾ ಪ್ರೀತಿಯಿಂದ ಪ್ರಶ್ನಿಸಿದಾಗ, ಚಂಪಕ ತಲೆ ತಗ್ಗಿಸಿದಳು.

''ಒಬ್ಬಳೇ ಬಂದ್ಯಾ ? ಪ್ರಕಾಶ್ ಬರಲಿಲ್ವಾ ? '' ಚಂಪಕಾ ಅತ್ತಿಗೆಯ ಕಡೆ ಓರೆ ನೋಟ ಬೀರಿದಳು.

''ಯಾಕೆ ? ಪ್ರಕಾಶ್‌ನ ನೀವೂ ಬೈಯಬೇಕಾ ?''

''ಏನು ಹೇಳ್ತಿದೀಯ ? ನಾನೇಕೆ ಬೈಯಲಿ .....'' ಪೂರ್ಣಿಮಾ ಕೆಳದನಿಯಲ್ಲಿ ಪ್ರಶ್ನಿಸಿದಳು. ಅವಳಿಗೆ ಅವಮಾನವಾದಂತಾಗಿತ್ತು.

''ಏನೇ ಚಿಂಪಿ. ಏನೇನೋ ಆಡಬೇಡ.....ನಿನ್ನ ಗಂಡನ್ನ ಇವಳ್ಯಾಕೆ ಏನಾದ್ರೂ ಅಂತಾಳೆ....''

''ಅದೇ ನನಗೆ ಅರ್ಥವಾಗ್ತಿಲ್ಲ.... ನನ್ನ ಗಂಡನ್ನ , ಇವಳ ಗಂಡ ಯಾಕೆ ಬೈದ ಅಂತ.... '' ಕೈ ತಿರುಗಿಸುತ್ತಾ ಪ್ರಶ್ನಿಸಿದಳು.

''ಏನು ? ಚಂದ್ರ ಅಳಿಯಂದಿರನ್ನ ಬೈದ್ನಾ ? ಯಾಕೆ... ಏನ್ಮಾಡಿದರು ಅವನಿಗೆ ಇವರು ? ''

''ಯಾಕೆ ಅಂತಂದ್ರೆ, ಮೊದಲಿಗೆ ನನ್ನನ್ನು ಕಂಡರೆ ಆಗ್ತಿರಲಿಲ್ಲ ನಿನ್ನ ಮಗನಿಗೆ. ಈಗ ನನ್ನ ಗಂಡನ್ನ ಕಂಡರೆ ಆಗುಲ್ಲ... ಅದಕ್ಕೆಲ್ಲ ಇವಳೇ ಕಾರಣ.... ಇವಳೇ ಕಾರಣ...'' ಎಂದು ಪೂರ್ಣಿಮಾಳ ಕಡೆ ಬೊಟ್ಟು ಮಾಡಿ ನುಡಿದಾಗ, ಪೂರ್ಣಿಮಾ ಅಲ್ಲಿ ನಿಲ್ಲದೇ ರೂಮಿನೊಳಕ್ಕೆ ಹೋಗಿ ಬಾಗಿಲನ್ನು ಹಾಕಿಕೊಂಡಳು.

''ನೋಡಿದ್ಯೇನಮ್ಮಾ.... ನಿಜ ಹೇಳಿದ್ರೆ ಹೇಗೆ ಕೋಪ ಬರುತ್ತೇಂತ. ನನ್ನ ಗಂಡಂದು ಏನು ತಪ್ಪಿದೆ ನೀನೇ ಹೇಳು... ಅವರ್‍ಯಾಕೆ ಬಾಯಿಗೆ ಬಂದ ಹಾಗೆ ಬೈಯಿಸಿ ಕೊಳ್ಳಬೇಕು....?''

''ಏನಂತ ಬೈದ್ನಂತೆ ? ಎಲ್ಲಿ ನಿನ್ನ ಗಂಡ.... ಅವರನ್ನೇ ಕೇಳೋಣ.''

''ಅವರು ಈಗ ಬರ್ತೀನಿ ಅಂತ. ಅಂಗಡಿಗೋ ಎಲ್ಲಿಗೋ ಹೋಗಿದಾರೆ. ಅವರನ್ನು ದಯವಿಟ್ಟು ಏನೂ ಕೇಳಬೇಡ.... ಮೊದಲೇ ಸಾಕಷ್ಟು ಬೇಜಾರಾಗಿದೆ.''

''ಹೀಗೆ ಉದ್ವೇಗದಿಂದ ಮಾತ್ನಾಡಿದ್ರೆ ಏನು ಪ್ರಯೋಜನ ? ನಿಧಾನವಾಗಿ ಏನು ನಡೀತು ಅಂತ ಹೇಳು. ಮೊದಲೇ ಅವನೊಂದು ತರಹ ಹೊಟ್ಟೆ ಉರಿಸ್ತಾನೆ. ನೀನಾದ್ರೂ ಸಮಾಧಾನವಾಗಿ ಮಾತನಾಡು. ..''

''ಅಲ್ಲಮ್ಮ ನೀನೇ ಹೇಳು. ಹೆಂಡತಿ ಮಾಡಿದ ತಪ್ಪಿಗೆ ಹೆಂಡತಿಯನ್ನು ಬೈಯುವುದನ್ನು ಬಿಟ್ಟು... ನನ್ನ ಗಂಡನ್ನ ಯಾಕೆ ಬೈಯಬೇಕು. ನೀನೇ ಹೇಳು....''

''ಚಂದ್ರ ಯಾಕೆ ಹೀಗೆ ಮಾಡಿದ್ನೋ ನನಗಂತೂ ತಿಳೀದು. ಹದಿನೈದ ದಿನಗಳ ಮೇಲಾಯ್ತು. ... ಅವಳನ್ನು ಇಲ್ಲಿ ಬಿಟ್ಟು ಹೋದವನು... ಎಲ್ಲಿದಾನೋ ಏನೋ ಒಂದೂ ತಿಳೀದು. ನಿನ್ನ ಗಂಡನಿಗೆ ಎಲ್ಲಿ ಸಿಕ್ಕಿದ್ನಂತೆ..... ''

''ತಡೀ ಅವರು ಬಂದ ಮೇಲೆ ಸರಿಯಾಗಿ ಕೇಳಿ ಹೇಳ್ತೀನಿ. ... ಅವನು ಬೈದ ಅಂದ ತಿಳಿದಕೂಡಲೇ ಅವರನ್ನು ಹೊರಡಿಸಿಕೊಂಡು ಬಂದುಬಿಟ್ಟೆ... ಏನು ಎತ್ತ ಯಾಕೆ ಅಂತ ಒಂದನ್ನೂ ವಿಚಾರಿಸಲಿಲ್ಲ ನಾನು.''

''ನೋಡು.... ಇದನ್ನೇ ತಪ್ಪು ಅಂತ ಅನ್ನೋದು. ಚಂದ್ರ ದುಡುಕಿ ಈ ಹುಡುಗಿಯ ಬಾಳನ್ನು ಹಾಳು ಮಾಡ್ತಿದಾನೆ..... ನೀನೂ ಹಾಗೆ ದುಡುಕಿ ಏನೇನೋ ಮಾಡಿಕೊಳ್ತೀಯೋ.....?''

''ಬಿಡಮ್ಮ ಪ್ರಕಾಶ್ ಅಂಥೋರಲ್ಲ ಒಳ್ಳೆಯವರು. ... ನನ್ನ ಮೇಲೆ ಅವರಿಗೆ ತುಂಬಾ ಪ್ರೀತಿ.....''

''ಇದೇ ಪ್ರೀತಿ ನಿನ್ನ ಅಣ್ಣ ಅತ್ತಿಗೆಯರಲ್ಲೂ ಇರಲಿ ಅಂತ ಹಾರೈಸಬೇಕು. ಅದು ಬಿಟ್ಟು ಏನೇನೋ ಆಡ್ತೀಯಲ್ಲ. ''

''ಅಣ್ಣನ ಪ್ರೀತಿಯೆಲ್ಲಾ ಹಳಸಿಹೋಗಿದೆ ಕಣಮ್ಮಾ.... ಅದಕ್ಕೆ ತಕ್ಕ ಹಾಗೆ ಇವಳು .... ಇವಳೂ ಏನೂ ಸಾಚಾ ಅಲ್ಲ.''

''ಚಂಪೀ .... ಬಾಯಿಗೆ ಬಂದದ್ದನ್ನೆಲ್ಲಾ ಆಡಬೇಡ.... ''ಇದುವರೆಗೂ ಬಾಗಿಲಿಗೆ ಒರಗಿ ಹೊರಗಿನ ಮಾತುಗಳನ್ನು ಕೇಳಿಸಿಕೊಂಡಿದ್ದ ಪೂರ್ಣಿಮಾ ಬಾಗಿಲನ್ನು ತೆರೆದು ಹೊರಬಂದಳು. ತಾಯಿಮಗಳು ಮುಖ ಮುಖ ನೋಡಿಕೊಂಡರು. ಪೂರ್ಣಿಮಾ ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತಳು.

''ಅತ್ತೇ..... ನಾನು ಯಾರನ್ನೂ ದೂಷಿಸುಲ್ಲ. ಮೋಸವಾಗಿರುವುದು ನನಗೆ. ಆದ್ದರಿಂದ ಈಗ ಹೇಳಲೇಬೇಕಾಗಿದೆ.... ನಿಮ್ಮ ಮಗ, ನನ್ನನ್ನು ಅತಿಯಾಗಿ ಪ್ರೀತಿಸಿದ್ದೂ ನಿಜ. ಆದರೆ ಎಂದೂ ನಾನಾಗಿಯೇ ನಾನು ಮುಂದಾಗಿ, ಅವರನ್ನು ನನ್ನನ್ನು ಪ್ರೀತಿಸು ಎಂದು ಕೇಳಿಕೊಳ್ಳಲಿಲ್ಲ. ನನ್ನನ್ನೇ ಮದುವೆಯಾಗುವುದಾಗಿ ಮಾತುಕೊಟ್ಟು, ಮದುವೆಗೆ ಮುಂಚೆಯೇ ನನ್ನನ್ನು ಕೆಡಿಸಿಯೂ ಇದ್ದರು. ... ಆ ಕಾರಣದಿಂದಲೇ ನಾನು ಅವರನ್ನು ಮದುವೆಯಾಗಲು ಒಪ್ಪಿದುದು. ಆದರೆ, ಅದೇಕೋ ಮದುವೆಯ ನಂತರ ಅವರಿಗೆ ನನ್ನ ಮೇಲೆ ಸಂಶಯ ಕಾಡಲಾರಂಭಿಸಿತು. ಏನೇನೋ ಪ್ರಶ್ನೆಗಳನ್ನು ಕೇಳಿ ಹಿಂಸೆ ಮಾಡುತ್ತಿದ್ದರು ''

ಚಂಪಕಳ ಪತಿ ನನಗೆ ಅಣ್ಣನ ಸಮಾನ. ಅವರು ಒಮ್ಮೆ ನನ್ನನ್ನು ಮಾತನಾಡಿಸುತ್ತಿದ್ದುದನ್ನು ಕಂಡು, ನನ್ನ ಮೇಲೆ ಏನೇನೋ ಆಪಾದನೆ ಹೊರಿಸಿದರು. ನಿನಗೆ ಬೇರೆ ಬೇರೆ ಗಂಡಸರ ಸಹವಾಸವಿದೆಯೋ ? ಎಷ್ಟು ಬಾರಿ ಅಬಾರ್ಷನ್ ಮಾಡಿಸಿಕೊಂಡಿದ್ದೀಯ..... ನಿನಗೆ ಪ್ರಕಾಶ್ ಬೇಕಾ ? ಕರೆಸ್ಲಾ? ಅಂತ ಹುಚ್ಚು ಹುಚ್ಚಾಗಿ ಮಾತನಾಡಿ ಮಾನಸಿಕವಾಗಿಯೂ, ದೈಹಿಕವಾಗಿಯೂ ಹಿಂಸಿಸುತ್ತಿದ್ದರು. ಇದನ್ನೆಲ್ಲಾ ನಾನು ತಾಳ್ಮೆಯಿಂದ ಸಹಿಸಿಕೊಂಡೆ. ಯಾರೊಂದಿಗೂ ಏನನ್ನೂ ಎಂದೂ ಹೇಳಿಲ್ಲ.... ಪೂರ್ಣಿಮಾ ಬಿಕ್ಕಳಿಸಿದಾಗ, ಗೌರಮ್ಮನ ಕಣ್ಣಲ್ಲೂ ನೀರು ಉಕ್ಕಿತು. ಚಂಪಕ ಮಾತ್ರ ನಂಬದವಳಂತೆ ಮುಖ ಸೊಟ್ಟಗೆ ಮಾಡಿ ಕುಳಿತಿದ್ದಳು.

''ನಾನು ಅಂಥೋಳಲ್ಲ ಅತ್ತೆ.. ನನ್ನನ್ನು ನಂಬಿ. ಈ ವಿಷಯ ನಮ್ಮ ತಾಯಿ ಮನೆಯವರಿಗೆ ತಿಳಿದರೆ ನನ್ನ ಗತಿ ಏನು ? ''

''ಹಾಗಾದರೆ ನಿಮ್ಮಿಬ್ಬರ ಮಧ್ಯೆ ಒಡಕು ಮೂಡಿದೆ ಅಂತ ಕೇಶವನಿಗೆ ಹೇಗೆ ತಿಳಿಯಿತು ?.... ಅವನು ಬಂದು ಎಷ್ಟು ಮಾತಾಡಿದ...''

''ನಾನು ಅಮ್ಮನಿಗೆ ಹೇಳಿದ್ದೆ.....'' ತಲೆ ತಗ್ಗಿಸಿ ನುಡಿದಳು.

''ನನಗೆ ಈ ಮೊದಲೇ ಹೇಳಿದ್ದರೆ, ನಾನು ನನ್ನ ಮಗನಿಗೆ ಬುದ್ಧಿ ಹೇಳ್ತಿದ್ದೆ.''

''ಏನಾದ್ರೂ ಹೇಳಿದ್ರೆ ಚಾಡಿ ಮಾತಾಗುತ್ತೇನೋ ಅಂತ ಹೆದರಿದೆ.''

''ನಿಮಗೆ ಹೆದರಿಕೆ ಬೇರೆ ಆಗುತ್ತಾ ?'' ವ್ಯಂಗ್ಯವಾಗಿ ಕೇಳಿದಳು ಚಂಪಕ.

''ಪ್ಲೀಸ್ ಚಂಪಕಾ.... ನನ್ನ ಕಷ್ಟಾನ ಅರ್ಥ ಮಾಡ್ಕೊ.....''

''ನಂಗೆ ನೀವಿಬ್ರೂ ಅರ್ಥ ಆಗುಲ್ಲ... ಏನಾದ್ರೂ ಮಾಡ್ಕೊಳ್ಳಿ.... ಆದರೆ ನನ್ನ ಗಂಡನ ತಂಟೆಗೆ ಮಾತ್ರ ಬರಬೇಡಿ.....''

''ನಿಮ್ಮಣ್ಣ ಪ್ರಕಾಶನ್ನ ಏನೂಂತ ಬೈದರೋ ನನಗಂತೂ ಗೊತ್ತಿಲ್ಲ .... ಆದರೆ

ಪ್ರಕಾಶನ್ನ ನಾನು ಕ್ಷಮೆ ಕೇಳ್ತೀನಿ....''

''ಬೇಡಮ್ಮ ಬೇಡ ತಾಯಿ... ನೀವು ಅವರ ಕಣ್ಣೆದುರಿಗೇ ಬರಬೇಡಿ. ನಮ್ಮ ಪಾಡಿಗೆ ನಮ್ಮನ್ನು ಬಿಡಿ....'' ನಾಟಕೀಯವಾಗಿ ಕೈ ಮುಗಿದಳು. ಪೂರ್ಣಿಮಾ ಅವಳ ಕೈ ಹಿಡಿಯಲು ಹೋದಳು. ....

''ದೂರ.... ದೂರ....'' ಚಂಪಕ ಸಿಡಿದು ಹಿಂದೆ ಸರಿದಳು. ಪೂರ್ಣಿಮಾ ರೂಮಿನೊಳಕ್ಕೆ ಓಡಿ ಹೋದಳು. ಗೌರಮ್ಮ ಮಗಳನ್ನು ತರಾಟೆಗೆ ತೆಗೆದುಕೊಂಡಳು.

''ಅತಿಯಾಯ್ತು ನಿಂದು...... ಸಾಕು ನಿಲ್ಲಿಸು. ಕೇಳಿದವರು ಏನೆಂದು ಕೊಂಡಾರು....?''

''ನಿನಗೆ ನನಗಿಂತ ಅವರಿಬ್ಬರೇ ಹೆಚ್ಚು.... ಅವಳ ಪರವಹಿಸಿಕೊಂಡು ನನ್ನನ್ನೇ ಅಂತೀಯಲ್ಲ.....''

''ಸಾಕು ಮಾಡು ಚಿಂಪೀ.... ಮೊದಲು ನಿಮ್ಮಣ್ಣ ಎಲ್ಲಿದಾನೇಂತ ತಿಳೀಲಿ... ಕರೆದು ಬುದ್ಧಿ ಹೇಳಿ ಅವರ ಸಂಸಾರಾನ ನೆಟ್ಟಗೆ ಮಾಡೋಣ.... ಮದುವೆಯಾಗಿ ಮೂರು ತಿಂಗಳು ಸಹ ಕಳೆದಿಲ್ಲ. ಇದೇನು ರಾದ್ಧಾಂತ.... ಅವನೆಲ್ಲಿದಾನೇಂತ ನಿನ್ನ ಗಂಡಂಗೆ ಗೊತ್ತಾ.... ?''

''ನಂಗೊತ್ತಿಲ್ಲ ನಾನು ಕೇಳಿಲ್ಲ....''

''ಕೇಳಿ ತಿಳಿಕೋ... ನಾನು ಇವತ್ತೇ ನಿಮ್ಮಪ್ಪನ ಅಲ್ಲಿಗೆ ಕಳಿಸ್ತೀನಿ..... ಇದೇನೇ ನಿನ್ನ ಯಜಮಾನರು ಎಲ್ಲಿಗೆ ಹೋದರು ? ಇಷ್ಟು ಹೊತ್ತಾದ್ರೂ ಮನೆಗೆ ಬಂದಿಲ್ಲ.''

''ಬರ್ತಾರೆ ಬಿಡಮ್ಮಾ.... ನಾನೇ ಕಳಿಸ್ದೆ.... ಅವರೆದುರಿಗೆ ನಾನು ಇಷ್ಟೆಲ್ಲಾ ಮಾತ್ನಾಡುಕ್ಕೆ ಎಲ್ಲಿ ಆಗ್ತಿತ್ತು.... ? ಅವರಿಗೂ ಸಂಕೋಚ, ಹೀನಾಯ ಎಲ್ಲಾ ಆಗುತ್ತೆ...''

''ನಿಮಗೆಲ್ಲಾ ಹುಡುಗಾಟ. ನೀವು ನೀವೇ ಎಲ್ಲಾ ನಿಮಗೆ ತಿಳಿದ ಹಾಗೆ ಮಾಡ್ತೀರಿ... ಪ್ರಕಾಶ ಈ ಮನೆಯ ಅಳಿಯ. ಅವರ ಮನಸ್ಸಿನಲ್ಲಿ ಏನಿದೆ ಅಂತ ಅವರೂ ಆಡಬಹುದಾಗಿತ್ತಲ್ಲ... ''

''ಆಡ್ತಾರೆ... ಆಡ್ತಾರೆ... ಏನಂತ ? ನಿಮ್ಮ ಮಗ ನನ್ನನ್ನು ಬೈದ ಅಂತ ಹೇಗಮ್ಮ ಹೇಳ್ತಾರೆ ? .....''

''ಅವರೂ ಈ ಮನೆಯೋರೆ ತಾನೇ.... ಚಂದ್ರನ ಹಾಗೆ ನಮಗೆ ಮಗನೇ.... ಮಕ್ಕಳು ತಮ್ಮ ತಂದೆ ತಾಯಿಗೆ ಎಲ್ಲಾ ಹೇಳೋದಿಲ್ವೆ ...?''

''ಅವರೇ ಬಂದ್ರು.... ಅದೇನು ಕೇಳ್ತಿಯೋ ಕೇಳು.... ಅದೇನು ಹೇಳ್ತಾರೋ ಹೇಳಲಿ. ... ನಾನೇಕೆ ಮಧ್ಯೆ ಮಾತಾಡ್ಲೀ.....'' ಆದರೆ ಅಳಿಯನನ್ನು ಕಂಡೊಡನೆ ಆಕೆಯ ದನಿ ಏಳಲಿಲ್ಲ. ಏನಂತ ಕೇಳುವುದು ? ಹೇಗೆ ಮಾತನಾಡುವುದು ಅಂತಂದುಕೊಂಡು, ನಗುಮುಖವನ್ನು ಮಾಡಿಕೊಂಡು ...

''ಬರ್ತಿದ್ದ ಹಾಗೆ ಎಲ್ಲೋ ಹೊರಟುಹೋದ್ರಿ.... ಕಾಫಿ ತಿಂಡಿ ತೆಗೆದುಕೊಂಡಾದ್ರೂ ಹೋಗಬಹುದಾಗಿತ್ತು....''

''ಈಗ ಕೊಡಿ.... ತಗೋತೀನಿ.....''

''ಈಗ ತಂದೆ ....'' ಎನ್ನುತ್ತಾ ಆಕೆ ಒಳನಡೆದಳು.

''ನಿನ್ನ ಮಾತು ಮುಗಿದಿದ್ರೆ ಹೇಳು.... ನಾವು ಹೊರಡೋಣ.''

''ಆಡಿದ್ದೇನೋ ಆಯ್ತು .... ಆದರೆ ಚಂದ್ರ ಎಲ್ಲಿದಾನೆ ಅಂತ ನಮಗೆ ಗೊತ್ತಿಲ್ಲ ಅಂತ ಹೇಳಿದೆ.''

''ಯಾಕೆ ಸುಳ್ಳು ಹೇಳಿದೆ.ಅವರು ಇರೋ ಜಾಗ ನನಗೆ ಗೊತ್ತು.....''

''ಗೊತ್ತು ಅಂತ ಹೇಳಿದ್ರಾಯ್ತು.... ಅವಳೂ ಇಲ್ಲೇ ಇದಾಳೆ....''

''ಅವಳು? ಅವಳು ಅಂದ್ರೆ ಯಾರು ?''

''ಚಂದ್ರನ ಹೆಂಡತಿ....ಪೂರ್ಣಿಮಾ''

''ಅತ್ತಿಗೆ ಅಂತ ಹೇಳು ಚಂಪಕ.... ಅವಳು ಇವಳು ಅಂತೆಲ್ಲಾ ಆಡಬಾರದು.''

''ನಿಮ್ಮನ್ನ ಅಣ್ಣ ಬೈದ.... ಅದಕ್ಕೆ ಕಾರಣ ಈ ಪೂರ್ಣಿಮಾ.... ಅವಳ ಪರವಹಿಸಿಕೊಂಡು ಮಾತಾಡ್ತಿದೀರಲ್ಲ.''

''ನಾನು ಯಾರ ಪರಾನೂ ವಹಿಸಿಕೊಳ್ತಿಲ್ಲ. ನಿಮ್ಮ ಅಣ್ಣನಿಗೆ ಏನ ತಪ್ಪು ಕಲ್ಪನೆ ಆಗಿದೆ.... ನನ್ನನ್ನಾಗಲೀ ಪೂರ್ಣಿಮಾಳಲ್ಲಾಗಲೀ ಏನೂ ತಪ್ಪಿಲ್ಲದಿರುವಾಗ ನಮಗೆ ಯಾಕೆ ಭಯ ?''

''ನಂಗೊತ್ತು ನೀವು ಶ್ರೀರಾಮಚಂದ್ರ ಅಂತ.... ಆದರೆ ಪೂರ್ಣಿಮಾ ಎಂಥೋಳು ಅಂತ ನಿಮಗೇನು ಗೊತ್ತು?''

''ನಿಮ್ಮಣ್ಣನ ತರಹಾನೇ ನೀನೂ ಮಾತಾಡ್ತೀಯ ಚಂಪಕ, ಇದು ತಪ್ಪು.... ಒಂ ವೇಳೆ ನಿನ್ನನ್ನೇ ಯಾರಾದ್ರೂ ಹೀಗೆ ಏನಾದ್ರೂ ಇಲ್ಲದ್ದನ್ನು ಆಡಿದರೆ... ಆಗ ನಿನಗೇನನ್ನಿಸುತ್ತೆ....''

''ಚಪ್ಪಲಿ ತೆಗೆದುಕೊಂಡು ಹೊಡಿತೀನಿ ಅಷ್ಟೇ.....'' ಅಷ್ಟರಲ್ಲಿ ಗೌರಮ್ಮ ತಿಂಡಿ ಕಾಫಿಯನ್ನು ತಂದಿಟ್ಟಳು. ಮಾತು ಅಲ್ಲಿಗೆ ನಿಂತಿತು.

''ಅಮ್ಮಾ ನಾವೀಗಲೇ ವಾಪಸ್ಸು ಹೊರಡ್ತೀವಿ.''

''ಅದೇನು ಹೀಗೆ ಬಂದು ಹಾಗೆ ಹೊರಡೋದಾ ? ಒಂದೆರಡು ದಿನ ಇದ್ದು ಹೋಗಬಹುದಲ್ಲ.''

''ಇಲ್ಲಮ್ಮ ನಾವು ಈಗಲೇ ಹೊರಡುವುದು ಒಳ್ಳೇದು. .... ನಿನ್ನ ಸೊಸೆ ಇಲ್ಲಿಯೇ ಇದಾಳೆ.... ಚಂದ್ರ ಏನು ಬೇಕಾದ್ರೂ ಆಡ್ತಾನೆ.'' ಮಗಳು ಮುಖಕ್ಕೆ ಹೊಡೆದ ಹಾಗೆ ಅದೂ ಅಳಿಯನ ಎದುರಿಗೆ ಆಡಿದಾಗ ಗೌರಮ್ಮನ ಮುಖ ಕಂದಿತು. ಆದರೂ ನಗು ಮುಖದಿಂದ ನುಡಿದಳು.

''ಅಪ್ಪ ಬರೋ ವರೆಗಾದ್ರೂ ಇದ್ದು ರಾತ್ರಿಯ ಬಸ್ಸಿಗೆ ಹೊರಟರೆ ಆಗ್ಲೋಲ್ವೆ? ... ನಿಮ್ಮಪ್ಪ ಏನಂದುಕೊಳ್ತಾರೆ ....?''

''ಸರಿಯಮ್ಮ... ಅಪ್ಪನ್ನ ನೋಡಿದ ಕೂಡಲೇ ರಾತ್ರಿಯ ಬಸ್ಸಿಗೆ ಹೊರಡ್ಲೇ ಬೇಕು. ಮನೆಯಿಂದ ಆತುರಾತುರವಾಗಿ ಹೊರಟಿದ್ದೆವು'' ಎನ್ನುತ್ತಾ ತಿಂಡಿ ತಿನ್ನತೊಡಗಿದಳು. ಪೂರ್ಣಿಮಾ ಅಡಿಗೆ ಮನೆಗೆ ಬಂದಳು.

''ಅತ್ತೆ.... ನಾನು ಕೇಶು ಮಾವನ ಮನೆಗೆ ಹೋಗಿರ್ತೀನಿ. ನಿಧಾನವಾಗಿ ಬರ್ತೀನಿ.''

''ಅವಳ ಮಾತು ಅರ್ಥವಾಗಿತ್ತು. ಹಾಗೇ ಮಾಡಮ್ಮ.....ರಾತ್ರಿ ಮಲಗೋ ಹೊತ್ತಿಗೆ ಬಂದು ಬಿಡು'' ಹೂಂ ಎಂದು ತಲೆಯಾಡಿಸಿ ಹಾಗೇ ಹಿಂದಿನ ಬಾಗಿಲಿನಿಂದ ಕೇಶವನ ಮನೆಗೆ ಬಂದಳು. ಅಲ್ಲಿ ಪೂರ್ಣಿಮಾ ತನ್ನ ತಾಯಿಯನ್ನು ಕಂಡು ಅಚ್ಚರಿಗೊಂಡಳು.

''ಏನಮ್ಮ ಯಾವಾಗ ಬಂದೆ ? .....''

''ರಾತ್ರೇನೇ ಬಂದೆ ಕಣೆ.... ನಿನ್ನ ನಾದಿನಿ ಬಂದಿರೋ ಹಾಗಿದೆ.''

''ಹೂಂನಮ್ಮ. ಬೆಳಿಗ್ಗೆ ಬಂದಳು. .. ರಾತ್ರೀನೇ ವಾಪಸ್ಸು ಹೊರಟು ಹೋಗ್ತಾಳಂತೆ.''

''ಅದೇನು ಹಬ್ಬ ಇಲ್ಲ ಹುಣ್ಣಿಮೆ ಇಲ್ಲ... ಆಷಾಢ ಮಾಸವೂ ಅಲ್ಲ....''

''ಬಿಡಮ್ಮ ಅವಳ ಅಪ್ಪನ ಮನೆಗೆ ಅವಳು ಯಾವಾಗ ಬಂದರೆ ಏನಂತೆ ? ನನಗೂ ನಿನಗೂ ಏನಾಗಬೇಕು ? ''

''ತಿಂಡಿ ಆಯ್ತೇನೇ ಪೂರ್ಣಿಮಾ ? ''ಕೇಶವನ ಹೆಂಡತಿ ತಿಂಡಿಯನ್ನು ತಂದಿತ್ತಳು.

''ಯಾಕೋ ತಿನ್ನೋ ಮನಸ್ಸೇ ಆಗಲಿಲ್ಲ ಅತ್ತೆ.....''

''ಅಕ್ಕಿ ರೊಟ್ಟಿ ಚಟ್ನಿ ಮಾಡಿದೀನಿ. ತಿನ್ನೂವಂತೆ.''

''ಹುಂ ಕೊಡಿ. ಅಮ್ಮನ ಜೊತೇಲಿ ತಿಂತೀನಿ.'' ತಾಯಿ ಮಗಳಿಬ್ಬರೂ ತಿಂಡಿ ತಿನ್ನುತ್ತಾ ಬೇಕಾದಷ್ಟು ಮಾತಾಡಿದರು. ಕೇಶವನ ಹೆಂಡತಿ ಮಧ್ಯೆ ಬರಲಿಲ್ಲ. ಅಲ್ಲಿಯೇ ಕುಳಿತಿದ್ದ ಅಜ್ಜಿ ಮಾತ್ರ ಮಧ್ಯೆ ಮಧ್ಯೆ ಬಾಯಿ ಹಾಕುತ್ತಿದ್ದಳು.

''ಈಗಿನ ಕಾಲದ ಹುಡುಗೀರು ನೀವು. ನಿಮಗೆ ನಿಮ್ಮ ನಿಮ್ಮ ಗಂಡಂದಿರನ್ನು ಹೇಗೆ ವಶದಲ್ಲಿಟ್ಟುಕೊಳ್ಳಬೇಕು ಅನ್ನೋ ರಹಸ್ಯವೇ ತಿಳೀದು.''

''ಅಜ್ಜೀ...... ನಿಮ್ಮ ಕಾಲಾನೇ ಬೇರೆ .... ಈಗಿನ ಕಾಲವೇ ಬೇರೆ....''

''ಯಾವ ಕಾಲ ಆದರೇನಂತೆ, ಗಂಡ ಹೆಂಡತಿ ಅನ್ನೋ ಸಂಬಂಧ ಏನು ಬೇರೆಯಾಗಿ ಹೋಗುತ್ತಾ ? .... ದಂಪತಿಗಳಲ್ಲಿ ಅನ್ಯೋನ್ಯತೆ ಇರಬೇಕು. ಇಲ್ಲದಿದ್ದರೆ ಸಂಬಂಧದಲ್ಲಿ ಸ್ವಾರಸ್ಯವೇ ಇರುಲ್ಲ.....''

''ಬಿಡಮ್ಮ .... ಸ್ವಾರಸ್ಯ ಅಂದರೆ ಏನು ? ನಿಮ್ಮ ಕಾಲದ ಹಾಗೆ .... ಪತಿಯೇ ಪರಮೇಶ್ವರ ಅಂತ ಪತಿವ್ರತೆಯ ತರಹ , ಪತಿಯ ಪಾದಗಳನ್ನು ತೊಳೆದು ಕೊಂಡು.... ನಿಮ್ಮದೇ ಸ್ವಂತವಾದ ಆಸೆ ಏನಾದ್ರೂ ಇತ್ತಾ ? ಅದನ್ನು ಎಂದಾದ್ರು ತಂದೆಯ ಹತ್ತಿರ ಹೇಳ್ಕೊಂಡಿದ್ಯಾ ? ''

''ಆಸೆ ಅಂದರೆ ಏನು ? ..... ಮನೇಲಿ ನಾವುಗಳು ಒಗ್ಗಟ್ಟಾಗಿದ್ದೆವು. ಮನೆ ಕೆಲಸಗಳನ್ನು ಹಂಚಿಕೊಂಡು ಮಾಡುತ್ತಿದ್ದೆವು. ಒಟ್ಟಿಗೆ ಕೂತು ಊಟ ಮಾಡುತ್ತಿದ್ದೆವು..''

''ಎಲ್ಲಾ ಒಟ್ಟಿಗೇನೇ ಮಲಗ್‌ತ್ತಿದ್ರಾ ? ....''ಅಲ್ಲಿಯೇ ಓಡಾಡುತ್ತಿದ್ದ ಕೇಶವನ ಮಗಳು ಕೇಳಿದಾಗ, ಎಲ್ಲರೂ ಕಿಸಕ್ಕನೇ ನಕ್ಕಿದ್ದರು.

''ಹೋಗೇ ಹುಚ್ಚು ಗೈನೆ.... ನೀನಿನ್ನೂ ಚಿಕ್ಕೋಳು..... ದೊಡ್ಡವರ ಮಧ್ಯೆ ನಿನಗೇನು ಮಾತು ? ''

''ಏನಜ್ಜಿ ಅವಳು ಕೇಳಿದ್ರಲ್ಲಿ ತಪ್ಪೇನಿದೆ..... ನೀವು ಅಷ್ಟು ಒಗ್ಗಟ್ಟಾಗಿದ್ರಾ ಅಂತ ಕೇಳಿದಳು ಅಷ್ಟೇ... ಹೋಗಲಿ ಬಿಡಿ... ನಿಮ್ಮ ನಿಮ್ಮಲ್ಲಿ ಮನಸ್ತಾಪ ಬರುತ್ತಿರಲಿಲ್ವಾ ?''

''ಮನಸ್ತಾಪ..... ? ಬರದೇ ಏನು ? ಆದರೆ ಯಾರ ಮೇಲೂ ಯಾರೂ ಚಾಡಿ ಹೇಳುವಂತಿಲ್ಲ....ನಾವು ನಾವೇ ಸರಿ ಮಾಡಿಕೊಳ್ಳುತ್ತಿದ್ದೆವು. ನಿಮ್ಮ ತಾತನ ತನಕ ಯಾವ ಮಾತೂ ಹೋಗುವಂತೆಯೇ ಇಲ್ಲ. ''

''ಇದನ್ನು ಅನ್ಯೋನ್ಯತೆ ಅಂತ ಅಂತೀರಾ ಅಜ್ಜಿ....?''

''ಮತ್ತಿನ್ನೇನು ? ಕೈ ತುಂಬಾ ಕೆಲಸ ಹೊಟ್ಟೆ ತುಂಬ ಊಟ, ಕಣ್ತುಂಬಾ ನಿದ್ದೆ.... ಇದರಿಂದ ಮನಸ್ಸಿಗೆ ದೇಹಕ್ಕೆ ನೆಮ್ಮದಿ... ಯಾವ ಆತಂಕವೂ ಇಲ್ಲ..... ''

''ಅದೆಲ್ಲಾ ಕನಸು ಬಿಡಮ್ಮ, ಈ ಕಾಲದಲ್ಲಿ ಹೆಂಗಸರು ಓದ್ತಾರೆ, ಕೆಲಸಕ್ಕೆ ಹೋಗ್ತಾರೆ. ಸ್ವತಂತ್ರ ವ್ಯಕ್ತಿತ್ವವಿರುತ್ತೆ.... ಅವರದ್ದೇ ಆದ ಸ್ವಂತ ಆಸೆಗಳನ್ನು ಪೂರೈಸಿಕೊಳ್ತಾರೆ. .... ನಿನ್ನ ಕಾಲದವರ ತರಹ, ಈ ಕಾಲದಲ್ಲಿ ಯಾರೂ ಇಲ್ಲ, ಇರೋಕೂ ಆಗುಲ್ಲ....''

''ಅದಕ್ಕೆ ಈ ಕಾಲದಲ್ಲಿ ಅದೇನೋ ಹೇಳ್ತೀರಲ್ಲ, ಡೈವಸ್ಸು ಅಂತ.... ಅದು ಜಾಸ್ತಿಯಾಗಿರುವುದು. ''

''ಡೈವರ್ಸ್ ಅಲ್ಲ ಅಜ್ಜಿ... ಡೈವೋರ್ಸು .... ಅಂತ ''ಅಲ್ಲಿಯೇ ಇದ್ದ ಮೊಮ್ಮಗಳು ತಿದ್ದಿದಳು.

''ಎಂಥದೋ ಒಂದು... ಗಂಡ ಹೇಳಿದ ಹಾಗೆ ಹೆಂಡತಿ ಕೇಳಿದ್ರಾಯ್ತಪ್ಪ.... ಎಷ್ಟಾಗಲೀ ಗಂಡ ಯಜಮಾನ. ... ಅವನ ಮಾತು ನಡೆಯಬೇಕಾದ್ದೇ ನ್ಯಾಯ. ... ಹೆಂಡತಿ ಆದೋಳಿಗೆ ತೃಪ್ತಿ ಇರಬೇಕು. ಅದು ಬೇಕು, ಇದು ಬೇಕು ಅಂತ ಗಂಡನ್ನ ಪೀಡಿಸಿದರೆ ಇನ್ನೇನಾಗುತ್ತೆ.... ? ಇಬ್ಬರಲ್ಲೂ ಹಳಸಿಕೊಳ್ಳುತ್ತೆ.... ಅದೇನು ಅಂದ್ಲಲ್ಲ ಈಗ, ಅದಾಗುತ್ತೆ.''

''ಅಮ್ಮಾ..... ಏನೇನೋ ಅಸಂಬದ್ಧ ಮಾತುಗಳನ್ನಾಡಬೇಡ.... ಈಗ ಇಲ್ಲಿ ಯಾವ ಡೈವೋರ್ಸ್‌ನ ಮಾತೂ ನಡೆಯುತ್ತಿಲ್ಲ...''ಶ್ರೀಮತಿ ನುಡಿದಳು.

''ಹೋಗಲಿ ಬಿಡಿ ಅಜ್ಜಿ... ಆ ಮಾತು ಬಂದಾಗ ನೋಡಿಕೊಳ್ಳೋಣ.'' ಆದರೆ ಇದಕ್ಕಿದ್ದಂತೆ ಡೈವೋರ್ಸಿನ ಮಾತು ಬಂದದ್ದು, ತಾಯಿ ಮಗಳಲ್ಲಿ ಕೋಲಾಹಲವನ್ನೆಬ್ಬಿಸಿತ್ತು.

ಈಚೀಚೆಗೆ ಡೈವೋರ್ಸ್ ತಗೊಳ್ಳೋದು ಹೆಚ್ಚಾಗುತ್ತಿದೆ... ಅದಕ್ಕೆ ಕಾರಣ, ಅಮ್ಮ ಹೇಳೋ ಹಾಗೆ ವಿರಸವೇ ಕಾರಣವಿರಬಹುದು. ಆದರೆ ನಾವು ಈಗಾಗಲೇ ಆ ಬಗ್ಗೆ ಚಿಂತಿಸುವುದು ಬೇಡ. ಅವರಿಬ್ಬರ ಮಧ್ಯೆ ನಿಜವಾಗಿ ನಡೆದಿರುವುದಾದರೂ ಏನೂಂತ ಪರಿಶೀಲಿಸಿ ಮತ್ತೆ ಹೊಂದಾಣಿಕೆಯಿಂದ ಇರುವಂತೆ ಮಾಡಬೇಕಾದದ್ದು ನಮ್ಮ ಕರ್ತವ್ಯ. ನನ್ನ ಗಂಡನಿಗೆ ತಿಳಿದರೆ ಏನೇನು ರಾದ್ಧಾಂತ ಮಾಡುವರೋ... ಖರ್ಚು ವೆಚ್ಚ ಮಾಡಿ ಮದುವೆ ಮಾಡುವ ಆಸೆಯೇ ಇರಲಿಲ್ಲ ಅವರಿಗೆ. ಈಗ ಹೀಗೆ ಅಂತ ತಿಳಿದರೆ, ಮಗಳನ್ನು

ಮನೆಗೆ ಸೇರಿಸುತ್ತಾರೆಯೇ... ? ಶ್ರೀಮತಿ ತನ್ನಲ್ಲೇ ಚಿಂತಿಸುತ್ತಿದ್ದಳು.

ಈ ಅಜ್ಜಿ ತೀರಾ ಹಳೆ ಕಾಲದೋರು.... ಗಂಡನೇ ದೇವರು ಅಂತ ಹೆದರಿ ನಡೆಯೋ ಕಾಲ ಈಗೆಲ್ಲಿದೆ ? ಅಮ್ಮನೇ ಅಪ್ಪನಿಗೆ ಹೆದರುವುದಿಲ್ಲ ಹೆದರಿದಂತೆ ನಟಿಸುತ್ತಾಳೆ ಅಷ್ಟೇ. ಅವಳು ನಿಜವಾಗಿಯೂ ಹೆದರುವುದೇ ಆಗಿದ್ದರೆ ಅಮ್ಮ ನೇಣು ಹಾಕಿಕೊಂಡಿರುತ್ತಿದ್ದಳು. ಅಪ್ಪನಿಗೆ ಅಮ್ಮನ ಮೇಲಾಗಲೀ, ನಮ್ಮ ಮೇಲಾಗಲೀ ನಿಜವಾದ ಪ್ರೀತಿಯಿಲ್ಲ. ಅಂಥೋರಿಗೆ ಪೆದರಿ, ನಮ್ಮತನವನ್ನು ಯಾಕೆ ಹಾಳು ಮಾಡಿಕೊಳ್ಳಬೇಕು. ಅಮ್ಮನಿಗಾದರೋ, ಕೇಶವನಂತಹ ಅಣ್ಣನಿದ್ದಾನೆ. ಅವರ ಸಹಕಾರವಿದೆ. ನನಗೆ ? ನಾನೇ ಈ ಮನೆಯಲ್ಲಿ ಹಿರಿಯ ಮಗನೂ ನಾನೇ, ಮಗಳೂ ನಾನೇ.... ಪ್ರೀತಿಸಿ ಮದುವೆಯಾದರೆ, ಅನ್ಯೋನ್ಯತೆ ಇರುತ್ತದೆ ಅನ್ನೋ ಮಾತು ಖಂಡಿತಾ ಸುಳ್ಳು..... ಚಂದ್ರನಂತಹವರು ಯಾರನ್ನೂ ಪ್ರೀತಿಸುವುದು ಸಾಧ್ಯವಿಲ್ಲ. ಕಾಡು ಮನುಷ್ಯ. ತಂದೆ, ತಾಯಿ, ತಂಗಿ, ಹೆಂಡತಿ ಯಾವ ಸಂಬಂಧವೂ ಅವನಿಗೆ ಲಾಯಕ್ಕಲ್ಲ. ಇಂಥೋನ ಜೊತೆ ಹೀನಾಯವಾಗಿ ಬಾಳೋದಕ್ಕಿಂತ ಒಂಟಿಯಾಗಿ, ಸ್ವತಂತ್ರವಾಗಿ ಇರೋದೇ ಉತ್ತಮ....

ಅವಳ ಆಲೋಚನೆ ಅಲ್ಲಿಗೆ ನಿಂತಿತು. ಸುಮ್ಮನೆ ಕುಳಿತವಳನ್ನು ಅಜ್ಜಿ ಎಚ್ಚರಿಸಿದಳು.

''ಏನ್ರೇ.... ಇಬ್ಬರೂ ಮಾತೇ ಆಡುತ್ತಿಲ್ಲ, ಏನು ಯೋಚಿಸ್ತಿದೀರಿ?''

''ಏನಿಲ್ಲ ಅಜ್ಜಿ..... ನೀವು ಹೇಳಿದ ಹಾಗೆ ಡೈವೋರ್ಸ್ ಯಾಕೆ ತಗೋಬಾರದು ಅಂತ ಯೋಚಿಸ್ತಿದ್ದೆ. ''

''ಛಿ.... ಬಿಡ್ತು ಅನ್ನು'' ಶ್ರೀಮತಿ ಪಿಸುದನಿಯಲ್ಲಿ ಗದರಿಸಿದಳು. ''ಬಾಯಿ ತಪ್ಪಿಯಾದರೂ ಡೈವೋರ್ಸ್ ಅನ್ನೋ ಮಾತನ್ನು ಅವರುಗಳೆದುರಿಗೆ ಎತ್ತಬೇಡ. ಡೈವೋರ್ಸ್‌ನಿಂದ ಅವನ ಜೀವನ ಸುಗಮವಾಗುತ್ತದೆ. ನಿನ್ನ ಜೀವ ದುರ್ಭರವಾಗುತ್ತದೆ. ಅವನಿಗೆ ನೀನು ಬೇಡವಾದರೆ, ಅವನೇ ಡೈವೋರ್ಸ್‌ಗೆ ಹಾಕಲಿ. ಆಗ ಅವನು ನಿನಗೆ ಜೀವನಾಂಶ ಕೊಡಬೇಕಾಗುತ್ತದೆ. ಅದನ್ನೆಲ್ಲ ಅವನೂ ಯೋಚಿಸುತ್ತಾನೆ. ''

ತಾಯಿಯ ಮುಂದಾಲೋಚನೆ ಅವಳನ್ನು ಚಿಂತಿಸುವಂತೆ ಮಾಡಿತು. ಆದರೂ ನುಡಿದಳು.

''ಅವನ ಜೀವನಾಂಶದ ಹಣ ಯಾರಿಗೆ ಬೇಕಾಗಿದೆಯಮ್ಮ? ನಾನೇ ಕೆಲಸಕ್ಕೆ ಸೇರಿ ಸಂಪಾದಿಸ್ತೀನಿ.''

''ಆ ಮಾತು ಬೇರೆ ಪೂರ್ಣ. ಅವನಿಗೂ ನಮ್ಮ ಕಷ್ಟ ಏನೂಂತ ತಿಳೀಲಿ. ಮದುವೆ ಸಂಸಾರ ಅಂತಂದ್ರೆ ಹುಡುಗಾಟವಲ್ಲ, ಅಲ್ಲದೇ ಈಗಲಿಂದ ಆ ಮಾತೇಕೆ. ಅವನು ಮೊದಲು ಮನೆಗೆ ಬರಲಿ. ಅವನ ಮನಸ್ನಲ್ಲಿ ಏನಿದೆ ಅಂತ ಒದರಲಿ. ಆಮೇಲೆ ಮುಂದಿನ ಮಾತು. ಆದರೆ ನೀನಾಗಿಯೇ ನೀನು ಮಾತ್ರ ಡೈವೋರ್ಸ್ ಸುದ್ಧಿನ ಎತ್ತಬೇಡ.... ಹಾಗೇ ಇನ್ನೊಂದು ಮಾತು.... ಎಷ್ಟೇ ಮಾತು ಬರಲಿ, ನೀನು ಮಾತ್ರ ಅತ್ತೆ ಮನೆಯಿಂದ ಹೊರ ಬರಬೇಡ... ಆ ಮೇಲೆ ಅವನಿಗೆ ಮಾತಿಗೆ ಅವಕಾಶ ಸಿಕ್ಕಿದ ಹಾಗಾಗುತ್ತೆ. ''

''ಆದರೆ ಅಲ್ಲಿ ಕೂತು ಏನು ಮಾಡಲಮ್ಮಾ. ಬೇಜಾರಾಗುತ್ತೆ.''

"ಮನೆ ಕೆಲಸದಲ್ಲಿ ಅತ್ತೆಗೆ ಸಹಾಯ ಮಾಡು. ಯಾವುದಾದರೂ ಕ್ಲಾಸಿಗೆ ಸೇರ್ಕೋ....."

"ನಾನು ಮನೆಯಿಂದ ಹೊರಗೆ ತಿರುಗುವುದು, ಅವರಿವರ ಜೊತೆ ಬೆರೆಯುವುದೇ ಅವನಿಗಿಷ್ಟವಿಲ್ಲವಲ್ಲಮ್ಮಾ..."

"ಹಾಗಂತ ಒಳಗೇ ಕೂತಿರಕ್ಕೆ ಆಗುತೇನೆ. ... ಹೇಗಾದ್ರೂ ನಿಮ್ಮ ಅತ್ತೇನ ಒಪ್ಪಿಸಿ ಮನೆಯಿಂದ ಹೊರಗೆ ಹೋಗ್ತಾ ಇರು. ಇಲ್ಲದಿದ್ದರೆ ಮನಸ್ಸು ಕೆಟ್ಟು ಹೋಗುತ್ತದೆ."

"ಅಪ್ಪಾನೂ ವಿಚಿತ್ರವಾಗಿಯೇ ಆಡುತ್ತಿದ್ದರಲ್ಲಮ್ಮ... ನೀನೇನು ಯಾವ ಕ್ಲಾಸಿಗೂ ಹೋಗಲಿಲ್ಲ.... ಎಲ್ಲಿಯೂ ತಿರುಗಲಿಲ್ಲ...."

"ಅದೇ ಬೇರೆ ಮಾತು. ನಿಮ್ಮಪ್ಪನಿಗೆ ಹಣ ಖರ್ಚಾಗಬಾರದು ಅನ್ನೊದೊಂವೆ ಚಿಂತೆ... ಅದು ಬಿಟ್ರೆ ಎಲ್ಲಿಗೆ ಬೇಕಾದರೂ ಹೋಗಬಹುದಾಗಿತ್ತು...."

"ಈಗ ಈ ಖರ್ಚಿಗೆಲ್ಲ ನಾನು ಅತ್ತೇನ ದುಡ್ಡು ಕೇಳುಲ್ಲಮ್ಮ"

"ಕೇಶವನ್ನ ಕೇಳೋಣ. ಅವನು ಇಲ್ಲ ಅನ್ನೋಲ್ಲ..."

"ಮಾವನ್ನೇ ಎಲ್ಲಾದಕ್ಕೂ ಪೀಡಿಸಬೇಕಲ್ಲಮ್ಮಾ...."

"ಏನ್ಮಾಡೋದು, ನಮ್ಮ ಭಾಗಕ್ಕೆ ಅವನೂ ಇಲ್ಲದೇ ಇದ್ದಿದ್ದರೆ, ನಮ್ಮಿಬ್ಬರ ಗತಿ ಏನಾಗತ್ತಿತ್ತೋ... ನಾನು ನಿಮ್ಮ ಅತ್ತೆ ಹತ್ತಿರ ಮಾತಾಡ್ಲಾ?"

"ಏನಾಡ್ತೀಯ ?.... ಅಲ್ಲಿ ಚಂಪಕ ಇದಾಳೆ. ಅವಳೋ ಏನೇನೋ ಆಡಿ ಅವರ ತಲೆ ಕೆಡಿಸಿದಾಳೆ."

"ಎಷ್ಟು ಹೊತ್ತಿಗೆ ಹೊರಡ್ತಾಳೆ ಅವಳು."

"ರಾತ್ರಿಯ ಬಸ್ಸಿಗೆ ಅಲ್ಲಿಯವರೆಗೆ ನಾನು ಇಲ್ಲಿರ್ತೀನಿ ಅಂತ ಹೇಳಿ ಬಂದಿದೀನಿ."

  

ಇಷ್ಟೆಲ್ಲಾ ಮಾತುಗಳಾದರೂ ಯಾವ ಪರಿಹಾರವೂ ಕಂಡು ಬಂದಿರಲಿಲ್ಲ. ತಿಂಗಳು ಕಳೆಯುತ್ತಾ ಬಂದಿದ್ದರೂ, ಚಂದ್ರ ಊರಿಗೆ ಬಂದಿರಲಿಲ್ಲ. ಪತ್ರವನ್ನು ಬರೆದಿರಲಿಲ್ಲ. ಅವನು ಇರುವ ಜಾಗವನ್ನು ಪ್ರಕಾಶ ತಿಳಿಸಿದ್ದರಿಂದ ಮೈಲಾರಯ್ಯ ಖುದ್ದಾಗಿ ಹೋಗಿ ಅವನ ಹತ್ತಿರ ಮಾತನಾಡಿದ್ದರು.

"ನಾನು ಆ ಕೆಲಸವನ್ನು ಬಿಟ್ಟು ಬಿಟ್ಟಿದೀನಿ. ಬೇರೆ ಕೆಲಸ ಸಿಗುವವರೆಗೂ ನಾನು ಎಲ್ಲಿಗೂ ಬರುವುದಿಲ್ಲ" ಎಂದು ಒರಟಾಗಿ ನುಡಿದಿದ್ದ.

"ಒಂದು ನಾಲ್ಕು ದಿನ ಬಾ.... ಏನೇ ಕಸಿವಿಸಿಯಿದ್ದರೂ ಸರಿ ಹೋಗುತ್ತದೆ" ಎಂದು ಸಮಜಾಯಿಸಿ ಹೇಳಿದ್ದರೂ ಅವನು ಒಪ್ಪಿರಲಿಲ್ಲ.

"ನನಗೆ ಬರುಕ್ಕೆ ಆಗುಲ್ಲ ಅಂತಂದ್ನಲ್ಲ, ಮತ್ತೇಕೆ ಬಲವಂತ" ಎಂದು ಬಿರುಸಾಗಿ ನುಡಿದಿದ್ದ. ಅವರು ತೆಪ್ಪಗಾಗಿದ್ದರು.

ಮಾವನ ಬಳಿ ಇದ್ದ ವಿಳಾಸಕ್ಕೆ ಒಂದೆರಡು ಬಾರಿ ಪತ್ರ ಬರೆದಳು. ಆದರೆ ಅದಕ್ಕೆ

ಉತ್ತರ ಬರಲಿಲ್ಲ. ಒಮ್ಮೆ ತಾನೇ ಹೋಗಿ ಮಾತನಾಡಿ ಬರುವುದೆಂದು ನಿರ್ಧರಿಸಿದಳು.

''ನೋಡೋಣ ತಡಿ. ಅವನಿಗೂ ಸ್ವಲ್ಪ ಸಮಯ ಕೋಡೋಣ. ಕೆಲಸ ಸಿಕ್ಕಿದ ಮೇಲೆ ಮನೆ ಮಾಡಿ, ಅವನೇ ಬಂದು ನಿನ್ನನ್ನು ಕರೆದುಕೊಂಡು ಹೋಗಬಹುದು'' ಅತ್ತೆಯ ಮಾತಿಗೆ ಒಪ್ಪಿ ಸುಮ್ಮನಾದಳು.

ಆದರೆ ದಿನಗಳು ಕಳೆಯಿತೇ ವಿನಃ ಅವನಿಂದ ಸುದ್ಧಿ ಇಲ್ಲ. ಮತ್ತೆ ಮೈಲಾರಯ್ಯ ಹೋಗಿ ಬಂದರು. ''ಅವನು ಆ ಮನೇನೂ ಖಾಲಿ ಮಾಡಿ ಬಿಟ್ಟಿದಾನೆ. ಹೊಸ ವಿಳಾಸ ಯಾರಿಗೂ ತಿಳಿಯದು. ನಾನು ಎಲ್ಲೆಲ್ಲಿ ಅಂತ ಹುಡುಕಲಿ? ಅವನಿಗೆ ನಾವುಗಳ ಬೇಕಿದ್ರೆ ಅವನೇ ಬರ್ತಾನೆ. ಇಲ್ಲದಿದ್ರೆ ಎಲ್ಲೋ ಇದ್ಕೊಳ್ಳಲಿ...''

''ಹಾಗಂದ್ರೆ ಹೇಗೆ ? ಅವನನ್ನು ಕಟ್ಟಿಕೊಂಡಿರುವ ಈ ಹುಡುಗಿಯ ಪಾಡೇನು? ''

''ಇದೇ ನನ್ನ ತಲೆ ತಿನ್ನುತ್ತಿರುವ ವಿಷಯ. ... ಇಂಥೋರಿಗೆ,ಮದುವೆ, ಸಂಸಾರ ಎಲ್ಲಾ ಯಾಕೆ ಅಂತ, ಸರಿಯಾಗಿ ಸಂಭಾಳಿಸಿದಿದ್ದ ಮೇಲೆ ..... ಒಂದು ವೇಳೆ ನಮ್ಮ ಚಂಪಕಳಿಗೇ ಹೀಗಾಗಿದ್ದರೆ, ಅವಳಿಗೆ ಒಂದು ದಾರಿ ತೋರಿಸುತ್ತಿರಲಿಲ್ಲವೆ ? ಹಾಗೆ ಅಂತ ಅಂದುಕೊಳ್ಳೋಣ. ಈ ಹುಡುಗೀನ ಕೆಲಸಕ್ಕೆ ಸೇರಿಸೋಣ. ''

''ಅವರ ಮನೆಯವರು ಏನೆಂದುಕೊಳ್ತಾರೆ .... ಸಂಪಾದನೆಯ ಆಸೆಗೆ ಹುಡುಗಿಯ ಹತ್ತಿರ ದುಡಿಸಿಕೊಳ್ಳುತ್ತಿದೀರಿ ಅಂತಾಂದ್ರೆ.....''

''ಅನ್ನೋರು ಏನು ಬೇಕಾದ್ರೂ ಅಂತಾರೆ... ಈ ಹುಡುಗಿ ಪರಾವಲಂಬಿ ಯಾಗಿರುವುದು ಬೇಡ.... ಸ್ವಾವಲಂಬಿಯಾಗಿರಲಿ ಅಂತ ಹೀಗೆ ಹೇಳಿದೆ. ನಿನ್ನ ಮಗನೋ ನಾಯಿಬಾಲ ಇದ್ದರಾಗೆ... ಅವನ ಡೊಂಕನ್ನು ತಿದ್ದಕ್ಕೆ ಆಗುತ್ಯೆ ? ''

''ಅವನನ್ನೇನುತ್ತಾನ್ನೋ .....?''

''ಹೆಂಡತೀನ ನೋಡಿಕೊಳ್ಳೋಕೆ ಆಗದೇ ಇರುವ ಅಯೋಗ್ಯ ಅವನನ್ನೇನು ಕೇಳೋದು ? ಇವಳು ಇಲ್ಲಿರಲಿ, ಕೆಲಸಕ್ಕೆ ಸೇರಿಕೊಳ್ಳಲಿ... ಆಮೇಲೆ ಅವನೇ ನಾಯಿಕುನ್ನಿಯ ತರಹ ಬರ್ತಾನೆ.'' ಗಂಡನ ಮಾತಿನ ಮೇಲೆ ಗೌರಮ್ಮನಿಗೆ ಪೂರ್ತಿ ಸಮ್ಮತಿ ಇರಲಿಲ್ಲ. ಈಗಾಗಲೇ ಮಗ ಬೇರೆ ದಾರಿ ಹಿಡಿದಿರಬಹುದು. ಅದಕ್ಕೆ ಹೆಂಡತಿಯನ್ನು ದೂರ ಮಾಡಿದ್ದಾನೆ. ಇದೇ ನೆಪ ಮಾಡಿಕೊಂಡು ಬಿಟ್ಟೇ ಬಿಟ್ಟರೇ. ಈ ಆಲೋಚನೆಯಿಂದಲೇ ಅವಳ ಎದೆ ಧಸಕ್ಕೆಂದಿತು. ಈ ಮಕ್ಕಳು ನನಗೆ ನೆಮ್ಮದಿಯನ್ನಂತೂ ಕೊಡುತ್ತಿಲ್ಲ. ಚಂದ್ರ ಚಂಪಕ ಇಬ್ಬರೂ ನನ್ನ ಗೋಳು ಹುಯ್ಯುದ್ಕೊಳ್ಳಲೆಂದೇ ಹುಟ್ಟಿದಾರೇನೋ ಎಂದು ವ್ಯಥೆಗೊಂಡಳು.

ಯಾವ ವ್ಯಥೆ ಬೇಸರಗಳಿಗಾಗಿ, ದಿನಗಳು ನಿಲ್ಲಲಿಲ್ಲ. ಸರಿದು ಹೋದವು. ಚಂದ್ರ ಎಲ್ಲಿದ್ದಾನೆಂದು ತಿಳಿದರೂ, ಅವನೊಡನೆ ಮಾತನಾಡಿದರೂ, ಅವನು ಇವರುಗಳ ಯಾವುದೇ ಮಾತಿಗೂ ಬಗ್ಗಿ ಪೂರ್ಣಿಮಾಳೊಡನೆ ಮತ್ತೆ ಸಂಸಾರ ಮಾಡಲು ಒಪ್ಪಲಿಲ್ಲ.

''ಹಾಗಾದ್ರೆ ಅವಳಿಗೆ ಡೈವೋರ್ಸ್ ಕೊಟ್ಟುಬಿಡು '' ಒಬ್ಬರು ಸಲಹೆ ನೀಡಿದರು.

''ನೋಡೋಣ.... ಆ ಮಾತೇಕೆ ಈಗ ?'' ಮಾತನ್ನು ಹಾರಿಸಿದ್ದ. ಅವನೂ ಕಾನೂನು ಬಲ್ಲವನೇ. ತಾನೇ ಅವಳಿಗೆ ಡೈವೋರ್ಸ್ ಕೊಡಬೇಕಾಗುತ್ತದೆ. ಅಂತಂದರೆ ಅವಳಿಗೆ ಜೀವನಾಂಶವನ್ನೂ ಕೊಡಬೇಕಾಗುತ್ತದೆ. ಇದೇ ಸುಸಮಯ ಅಂತ ವಸೂಲಿ ಮಾಡದೇ ಬಿಡುವವಳಲ್ಲ.... ಅವಳ ಐಷರಾಮಿ ಜೀವನಕ್ಕೆ ಹಣ ಬೇಕೇ ಬೇಕು. ಅದಕ್ಕಿಂತ ಮುಖ್ಯವಾಗಿ ತಾನು ಅವಳಿಗೆ ಡೈವೋರ್ಸ್ ಕೊಟ್ಟು ಸುಲಭ ಮಾಡಿಕೊಡಬಾರದು. ಅವಳು ಮರು ಮದುವೆಯಾಗುವುದಂತೂ ಖಂಡಿತ. ತಾನು ಅದಕ್ಕೆ ಆಸ್ಪದ ಕೊಡಬಾರದು... ಹೀಗೆ ಬೇರೊಂದು ರೀತಿಯಲ್ಲಿ ಅವನ ಮನ ಆಲೋಚಿಸಿತು. ತಾನು ನೆಮ್ಮದಿಯನ್ನು ಕಳೆದುಕೊಂಡಿರುವೆನಲ್ಲವೇ ? ಅವಳ ನೆಮ್ಮದಿಯೂ ಹಾಳಾಗಲಿ ಎನ್ನುವುದೇ ಅವನ ಯೋಚನೆ.

ಚಂಪಕ, ಪ್ರಕಾಶ ಅವನನ್ನು ಮಾತನಾಡಿಸುವಂತಿಲ್ಲ, ತಂದೆ ತಾಯಿಗಳ ಮಾತಿಗೆ ಅವನು ಬಗ್ಗಲಿಲ್ಲ. ಸ್ನೇಹಿತರ ಮುಖಾಂತರ ಹೇಳಿಸಲು ನೋಡಿದರು. ಆದರೆ ಅವರ ಮಾತಿಗೂ ಬಗ್ಗಲಿಲ್ಲ, ಒಬ್ಬನಂತೂ, ಬೇರೆಯ ಸಲಹೆಯನ್ನೇ ಕೊಟ್ಟ.

''ನಿನ್ನ ನಡವಳಿಕೆ ನೋಡಿದರೆ, ನಿನಗೆ ಸೈಕಿಯಾಟರಿಸ್ಟ್‌ರ ಸಲಹೆಯ ಅಗತ್ಯವಿದೆ ಅಂತನ್ನಿಸುತ್ತದೆ. ಕಾಲ ಮೀರಿ ಹೋಗುವ ಮೊದಲೇ ಡಾಕ್ಟರರ ಬಳಿಗೆ ಹೋಗು... ನಿನ್ನ ಒಳ್ಳೆಯದಕ್ಕಾಗಿಯೇ ಹೇಳ್ತಿದೀನಿ'' ಅಂತಂದ.

''ನಿಮ್ಮ ಸಲಹೆಯ ಅಗತ್ಯ ನನಗಿಲ್ಲ, ನಾನು ಸರಿಯಾಗಿಯೇ ಇದೀನಿ. ನಿನಗೂ ನಿನ್ನ ಹೆಂಡತಿ ಮೋಸ ಮಾಡಿದಿದ್ರೆ ಗೊತ್ತಾಗುತ್ತಿತ್ತು''ಅಂತಂದ. ಸ್ನೇಹಿತ ಪೆಚ್ಚಾದ

ಇನ್ನೊಬ್ಬ ಸ್ನೇಹಿತ ಇನ್ನೊಂದು ಸಲಹೆ ಕೊಟ್ಟ. ''ಎಲ್ಲಾ ಹೆಂಗಸರೂ ಒಂದೇ ತರಹ ಇರುಲ್ಲ, ಯಾವುದಕ್ಕೋ ಕೊರಗುತ್ತಾ ನೆಮ್ಮದಿ ಕೆಡಿಸಿಕೊಳ್ಳುವುದಕ್ಕಿಂತ ನಿನಗೆ ಬೇಕಾದ ಹಾಗೆ ಜಾಲಿಯಾಗಿರು. ಈಗಿನ ಕಾಲದಲ್ಲೇನು ಬೇಕಾದಷ್ಟು ಬೆಲೆ ವೆಣ್ಣುಗಳು ಸಿಗುತ್ತಾರೆ''ಎಂದಿದ್ದ. ಚಂದ್ರ ಆ ಸ್ನೇಹಿತನ ಷರಟಿನ ಕಾಲರನ್ನು ಹಿಡಿದು ಗದರಿದ್ದ.

''ಯೂ ಸ್ಕೌಂಡ್ರಲ್..... ನೀವೆಲ್ಲಾ ನನ್ನ ಶತ್ರುಗಳು ಕಣ್ರೋ... ಅವಳು ನನಗೆ ಮೋಸ ಮಾಡಿದಳು ಅಂತ ನಾನು ಅವಳಿಗೆ ಮೋಸ ಮಾಡ್ತೀನೇನ್ರೋ.... ನಾನು ಅವಳನ್ನು ಪ್ರೀತಿಸಿ ಮದುವೆಯಾದೆ.... ನಿಮಗೇನು ಗೊತ್ತು ಪ್ರೀತಿಯ ಬೆಲೆ '' ಅವನು ಅಳತೊಡಗಿದಾಗ ಸ್ನೇಹಿತರು ಮಂಕಾಗಿದ್ದರು.

ಆನಂತರ ಆ ಸ್ನೇಹಿತರುಗಳೇ ಒಬ್ಬ ಸೈಕಿಯಾಟ್ರಿಸ್ಟ್‌ನನ್ನು ಭೇಟಿ ಮಾಡಿ, ತಮ್ಮ ಗೆಳೆಯನ ವರ್ತನೆ ಬಗ್ಗೆ ತಿಳಿಸಿ, ಸಲಹೆಯನ್ನು ಕೇಳಿದರು.

''ಒಮ್ಮೆ ಅವರನ್ನು ಕಂಡು ಅವರೊಡನೆ ಮಾತನಾಡದೇ ನಾನು ಏನೂ ಸಲಹೆಯನ್ನು ನೀಡಲಾರೆ, ಹೇಗಾದರೂ ಒಪ್ಪಿಸಿ ಕರೆದುಕೊಂಡು ಬನ್ನಿ ನಾನು ಅವರ ಹತ್ತಿರ ಮಾತನಾಡುತ್ತೇನೆ'' ಎಂದಿದ್ದರು. ಆದರೆ ಅವನನ್ನು ಒಪ್ಪಿಸುವುದು ಸುಲಭದ ಮಾತಾಗಿರಲಿಲ್ಲ.

  

ಪೂರ್ಣಿಮಾ ಚಂದ್ರನಿಗಾಗಿ ಕಾದು ಕಾದು ಸುಮ್ಮನಾದಳು. ತನ್ನ ಬಾಳಿನಲ್ಲಿ ಈ ಚಂದ್ರನಿಲ್ಲ... ತನಗಿನ್ನು ಪೌರ್ಣಿಮೆಯೇ ಇಲ್ಲ ಅಂತ ಅನ್ನಿಸತೊಡಗಿತ್ತು. ಅತ್ತೆಗೆ ಮನೆಗೆಲಸಗಳಲ್ಲಿ ಸಹಾಯ ಮಾಡಿದರೂ, ಹೊತ್ತು ಕಳೆಯುವುದು ಕಷ್ಟವೆನಿಸಿತ್ತು. ಬೇಸರ ಅಧಿಕವಾಗುತ್ತಿತ್ತು. ಬೇಸರ ಕಳೆಯಲೆಂದು ಕಂಪ್ಯೂಟರ್ ಕೋರ್ಸಿಗೆ ಸೇರಿಕೊಂಡಳು. ಸಂಗೀತಾಭ್ಯಾಸವನ್ನು ಮುಂದುವರೆಸಿದಳು ಬ್ಯಾಂಕ್ ಪರೀಕ್ಷೆ ತೆಗೆದುಕೊಳ್ಳುವುದೆಂದು ನಿರ್ಧರಿಸಿದಳು. ಇದಕ್ಕೆ ಅವಳ ಅತ್ತೆಯ ಸಹಕಾರವಿತ್ತು. ಒಮ್ಮೊಮ್ಮೆ ಗೌರಮ್ಮನಿಗೆ ತಮ್ಮ ಭಾಗಕ್ಕೆ ಮಗನೇ ಸರಿಯಿಲ್ಲದಿರುವಾಗ, ಸೊಸೆಯ ಗೊಡವೆ ಏಕೆ ಎಂದೆನ್ನಿಸುತ್ತಿತ್ತು. ಆದರೆ ಹಿರಿಯರಾಗಿ ತಮ್ಮ ಜವಾಬ್ದಾರಿಯನ್ನು ಮರೆತು ಮಗನಂತೆ ಅವಿವೇಕಿಯೂ ಆಗಬಾರದೆಂದು ಅವರ ವಿವೇಕ ಅವರನ್ನು ಎಚ್ಚರಿಸುತ್ತಿತ್ತು. ಮುಂದೆ ಒಂದಲ್ಲ ಒಂದು ದಿನ ಎಲ್ಲಾ ಸರಿ ಹೋಗಬಹುದು ಎಂಬ ಆಶಾಭಾವನೆ ಇಣುಕುತ್ತಿತ್ತು. ಈ ಕಾಲದಲ್ಲಿ ಹುಡುಗಿಯರು ಸಂಪಾದಿಸಿದರೆ ತಪ್ಪೇನಿಲ್ಲ. ಅವರ ಕಾಲ ಮೇಲೆ ಅವರು ನಿಲ್ಲಬೇಕು. ಏನು, ನಮ್ಮ ಕಾಲ ಕೆಟ್ಟುಹೋಯಿತೇ ? ಪ್ರತಿಯೊಂದಕ್ಕೂ ಗಂಡನನ್ನೇ ಅವಲಂಬಿಸಿರುವುದಕ್ಕೆ ? ಎಂದು ತನ್ನ ನಿಲುವನ್ನು ಬದಲಾಯಿಸಿ ಕೊಂಡಿದ್ದಳು. ಸೊಸೆ ನಮ್ಮ ಮನೆಯಲ್ಲಿಯೇ ಇದ್ದರೆ ಯಾವ ಪುಕಾರೂ ಹುಟ್ಟುವುದಿಲ್ಲ. ಅಲ್ಲದೇ ಈ ಹುಡುಗಿಯಿಂದ ನನಗೆ ಯಾವ ತೊಂದರೆ? ಮಗಳನ್ನು ಮದುವೆ ಮಾಡಿ ಕಳಿಸಿದ್ದಾಗಿದೆ. ಆ ಜಾಗದಲ್ಲಿ ಇವಳು ಇರುತ್ತಾಳೆ ಎಂದುಕೊಂಡಿದ್ದಳು. ಗಂಡ ಮೈಲಾರಯ್ಯನಿಗೂ ಅದು ಸರಿ ಎನಿಸಿತ್ತು. ಆದರೂ ಮನಸ್ಸೆಲ್ಲಾ ಕಹಿಯಾಗಿತ್ತು.

''ಅಂತೂ ನಿನ್ನ ಮಗ ತನ್ನ ರೂಪವನ್ನೇತೋರಿಸಿಬಿಟ್ಟ .... ಬಾಳಿಸುವುದಕ್ಕೆ ಆಗದಿದ್ದ ಮೇಲೆ ಮದುವೆ ಯಾಕೆ ಆದ ? ಹೋಗಲಿ, ಇಬ್ಬರನ್ನು ಒಪ್ಪಿಸಿ ಡೈವೋರ್ಸ್ ಕೊಡಿಸೋಣ ಅಂತಂದ್ರೆ.... ಈ ಹುಡುಗಿಗಾದ್ರೂ ಮರು ಮದುವೆ ಆದೀತು. ನಿನ್ನ ಮಗನ್ನ ಮತ್ತೆ ಯಾರು ಮದುವೆಯಾಗ್ತಾರೆ ? ಅಲ್ಲದೆ ನಮ್ಮ ಮನೆ ಮರ್ಯಾದೆ ಏನಾಗುತ್ತೆ? ಅಂತೂ ನಿನ್ನ ಮಗ ನನಗೆ ಮಸಿ ಬಳಿದುಬಿಟ್ಟ....''

''ಏನು ನಿನ್ನ ಮಗ ನಿನ್ನ ಮಗ ಅಂತ ಹಂಗಿಸ್ತೀರಿ.... ಅವನನ್ನು ಹೆತ್ತಾಗ, ಮುಂದೆ ಹೀಗೆಲ್ಲಾ ಮಾಡ್ತಾನೆ ಅಂತ ನನಗೇನು ಗೊತ್ತಿತ್ತು! ವಿದ್ಯಾಭ್ಯಾಸ ಸರಿಹೋಗ್ಲಿಲ್ಲ, ಉದ್ಯೋಗ ಸರಿಹೋಗ್ಲಿಲ್ಲ, ಹೋಗಲಿ ಅಂತಂದ್ರೆ ಈ ಹೆಂಡ್ತೀನೂ ಅವನಿಗೆ ಸರಿ ಹೋಗ್ಲಿಲ್ಲ ಅಂತಂದ್ರೆ ಅವೆಲ್ಲಾ ನನ್ನ ತಪ್ಪೇ.... ಮಕ್ಕಳು ಹುಟ್ತಾ ಹುಟ್ತಾ ಒಳ್ಳೆಯ ಹಣೆಬರಹವನ್ನು ಬರೆಸಿಕೊಂಡು ಹುಟ್ಟೇಕು. ಅವನ ಹಣೆಯ ಬರಹವೇ ಸರಿಯಾಗಿಲ್ಲದಿದ್ದರೆ ಅದಕ್ಕೆ ನಾನೇನು ಮಾಡುಕ್ಕಾಗುತ್ತೆ? ''

''ಅದೂ ನಿಜ ಅನ್ನು. ಅವನ ಹಣೆಯ ಬರಹವೇ ಅವನಿಗೆ ಕೈಕೊಡುತ್ತಿದೆ. ಶಾಸ್ತ್ರಿಗಳಿಗೆ ಅವನ ಜಾತಕವನ್ನು ತೋರಿಸಿಕೊಂಡು ಬಾ.. ಏನಾದ್ರೂ ಗ್ರಹಶಾಂತಿ ಮಾಡಿಸಬೇಕಾದ್ರೆ ಮಾಡಿಸೋಣ. ''

''ನಿಮಗೆ ಶಾಸ್ತ್ರ ಜ್ಯೋತಿಷ್ಯ ಯಾವುದರ್ಲೂ ನಂಬಿಕೇನೇ ಇಲ್ಲ ಅಂತಿದ್ರಿ... ಇದೇನು ಈಗ ಹೀಗೆ ಹೇಳ್ತಿದೀರಿ. ತಮಾಷೆ ಮಾಡ್ತಿಲ್ಲ ತಾನೇ .....''

''ತಮಾಷೆ ಮಾಡೋ ಕಾಲಾನ ಇದು ? ನಮ್ಮ ಮಕ್ಕಳಿಗೆ ನಾವೇ ದಿಕ್ಕು. ಅವರಿಗೆ ಬೇಕಿರಲಿ, ಬೇಡವಾಗಿರಲಿ, ಅವರಿಗೆ ಒಳ್ಳೆಯದನ್ನೇ ಬಯಸುವವರು ನಾವು.... ಇದೂ ಒಂದು ನಡೀಲಿ.. ಅದರಿಂದಲಾದ್ರೂ, ಈ ಹುಡುಗಿಯ ಬಾಳು ಹಸನಾದ್ರೆ ಅಷ್ಟೇ ಸಾಕು.... ಕಂಡವರ ಹೆಣ್ಣುಮಕ್ಕಳನ್ನು ತಂದುಕೊಂಡು, ಅವರು ನಿಟ್ಟುಸಿರು ಬಿಡುವಂತಾಗಬಾರದು... ಈ ಹುಡುಗಿಯದು ತಪ್ಪೇನಲ್ಲ... ತಪ್ಪೆಲ್ಲ ಅವನದೇ .... ಅದನ್ನು ಹೇಗಾದರೂ ಸರಿಪಡಿಸಬೇಕು.''

ಗೌರಮ್ಮ ಮಗನ ಹಾಗೂ ಸೊಸೆಯ ಜಾತಕಗಳನ್ನು ತೆಗೆದುಕೊಂಡು ಪರಿಚಯವಿದ್ದ ಪಂಡಿತರ ಬಳಿಗೆ ಬಂದಳು. ಪಂಡಿತರು ಇಬ್ಬರ ಜಾತಕಗಳನ್ನು ಪರಿಶೀಲಿಸಿ ಹುಬ್ಬೇರಿಸಿದರು.

''ಮದುವೆಗೆ ಮೊದಲು ಜಾತಕಗಳು ಹೊಂದುತ್ತದೋ ಇಲ್ಲವೋ ಅಂತ ತೋರಿಸಲಿಲ್ವಾ ? ''

''ಇಲ್ಲ. ಇದು ಲವ್ ಮ್ಯಾರೇಜ್.... ಯಾಕೆ ಏನಾದ್ರೂ ತೊಂದರೇನಾ ?''

''ನೋಡಿ...... ನಾನು ಹೀಗಂತೀನಿ ಅಂತ ಬೇಸರಿಸಬೇಡಿ..... ಇದು ಪರಸ್ಪರ ಹೊಂದಾಣಿಕೆ ಇಲ್ಲದ ಜಾತಕಗಳು. ಒಟ್ಟಿಗೆ ಇರಲು ಸಾಧ್ಯವೇ ಇಲ್ಲ. ''

ಗೌರಮ್ಮನ ಮುಖ ಕಂದಿತು. ಮನದಲ್ಲಿ ದುಗುಡ ತುಂಬಿಹೋಯಿತು. ಆದರೂ ಸಮಾಧಾನ ತಂದುಕೊಂಡು ಕೇಳಿದಳು.

''ಯಾವುದಾದರೂ ಗ್ರಹಶಾಂತಿ, ಹೋಮ ಮಾಡಿಸಿದರೆ..... ಸರಿ ಹೋಗಬಹುದೇ ? ''

''ಯಾವುದೇ ಶಾಂತಿ, ಜಪ, ಹೋಮ, ಏನೇ ಮಾಡಿಸಿದರೂ, ಅದೇನು ನಡೆಯಬೇಕೋ ಅದು ನಡೆದೇ ತೀರುತ್ತದೆ..... ನಿಮ್ಮ ಮನಶ್ಶಾಂತಿಗೆ ಏನು ಬೇಕಾದ್ರೂ ಮಾಡಿಸಬಹುದು. ... ಅಷ್ಟೇ''

''ಹಾಗಾದ್ರೆ ಏನೂ ಪರಿಹಾರವಿಲ್ಲವೇ ? ''

''ಇದೆ.... ಡೈವೋರ್ಸ್ ಒಂದೇ ಪರಿಹಾರ. ನಾನು ಹೀಗೆ ಹೇಳಿದ್ದು ನಿಮಗೆ ಆಶ್ಚರ್ಯವೆನಿಸಬಹುದು.... ಆದರೆ ಕಾಲಕ್ಕೆ ತಕ್ಕಂತೆ ನಾವು ಬದಲಾದರೆ, ಎಷ್ಟೋ ಸಮಾಧಾನ. ಪರಿಹಾರಗಳು ತಾವಾಗಿಯೇ ಒದಗಿ ಬರುತ್ತವೆ..... ನಿಮ್ಮ ಮಗನದು ಕಾಳಸರ್ಪಯೋಗದ ಜಾತಕ. ಭವಿಷ್ಯದಲ್ಲಿ ಏಳಿಗೆ ಕಡಿಮೆ. .... ನಿಮ್ಮ ಸೊಸೆಯ ಜಾತಕದಲ್ಲಿ ವಿಪರೀತ ಕುಜದೋಷವಿದೆ. ಈ ಹುಡುಗಿಗೆ ಎರಡು ವಿವಾಹದ ಯೋಗವಿದೆ. ಇದನ್ನು ತಪ್ಪಿಸಲು ಸಾಧ್ಯವೇ ಇಲ್ಲ, ಆದ್ದರಿಂದ ಹೇಳುತ್ತಿದ್ದೇನೆ. ಡೈವೋರ್ಸ್ ಕೊಡಿಸಿ.... ಅವರವರ ಪಾಡಿಗೆ ಅವರ ಸುಖವಾಗಿರುತ್ತಾರೆ.''

ಈ ನುಡಿಗಳು ಗೌರಮ್ಮನಿಗೆ ಸಮಾಧಾನ ನೀಡಲಿಲ್ಲ, ಪಂಡಿತರು ಸುಳ್ಳು ಹೇಳಿದ್ದರೂ ಪರವಾಗಿರಲಿಲ್ಲ, ಇಂಥ ಕಟುಸತ್ಯವನ್ನು ಹೇಳಬಾರದಿತ್ತೆನಿಸಿತು. ಮಗನ ಜಾತಕದಲ್ಲಿ ಎಡರು ತೊಡರುಗಳಿದ್ದರೆ, ಸೊಸೆಯ ಜಾತಕವಾದರೂ ಸರಿಯಾಗಿಬಾರದಾಗಿತ್ತೇ.... ಅವಳ

ಯೋಗಗಳು ಚೆನ್ನಾಗಿ ಪ್ರಬಲವಾಗಿದ್ದರೆ ಇವನಿಗೆ ಅನುಕೂಲಗಳು ಒದಗಿ ಬರುತ್ತಿದ್ದವೇನೋ... ಈಗೇನು ಮಾಡೋದು.... ಇದಕ್ಕೆ ಗಂಡ ಒಪ್ಪುವರೇ..... ?

ಪೆಚ್ಚುಮುಖದಿಂದ ಹಿಂತಿರುಗಿದವಳನ್ನು ಕಂಡೇ ಮೈಲಾರಯ್ಯನವರು ಭವಿಷ್ಯವನ್ನು ಊಹಿಸಿದರು. ಅವಳಾಗಿಯೇ ಹೇಳಲಿ ಎಂದು ಸುಮ್ಮನಾದರು. ಮನದ ದುಗುಡ ಕಡಿಮೆಯಾದ ಮೇಲೆ, ಪಂಡಿತರು ಹೇಳಿದ್ದನ್ನು ಪತಿಯೊಡನೆ ಹೇಳಿದಳು. ಅವರಲ್ಲೂ ಚಿಂತೆಯ ಮೋಡ ಮುಸುಕಿತು.

''ಹೌದು... ಪಂಡಿತರು ಹೇಳುವುದೇ ಸರಿ. ಅವನಲ್ಲಿ.... ಇವಳಿಲ್ಲಿ... ಹೀಗೆ ಎಷ್ಟು ವರ್ಷ ಅಂತ ತಳ್ಳೋಕೆ ಆಗುತ್ತೆ.... ? ಅವನು ಗಂಡಸು.. ಅವನು ಹೇಗೆ ಎಲ್ಲೇ ಇದ್ದರೂ ಜನ ಸುಮ್ಮನಿರುತ್ತಾರೆ... ಈ ಹುಡುಗಿಯ ಬಗ್ಗೆ ಗುಸು ಗುಸು ಮಾತುಗಳು ಪ್ರಾರಂಭವಾಗುತ್ತದೆ. ಆದಷ್ಟು ಬೇಗ ಡೈವೋರ್ಸ್ ಕೊಡಿಸಿ ಬಿಡೋಣ.... ಈ ಹುಡುಗಿಯ ಬಾಳಾದರೂ ಸರಿ ಹೋಗಲಿ.... ''

''ಚಂದ್ರ ಒಪ್ಪದಿದ್ದರೆ ...''

''ಹಾಗಾದರೆ ಇವಳನ್ನು ಕರೆದುಕೊಂಡು ಹೋಗಿ, ಸರಿಯಾಗಿ ಸಂಸಾರ ನಡೆಸಲಿ.. ಅದಕ್ಕೆ ಮೊದಲು ಒಪ್ಪಿಸು, ನೋಡೋಣ. ''

''ಹಾಗಲ್ಲ....ಹೇಗೂ ಈ ಹುಡುಗಿ ಬ್ಯಾಂಕ್ ಕೆಲಸಕ್ಕೆ ಪ್ರಯತ್ನ ಪಡುತ್ತಿದ್ದಾಳೆ. ... ಕೆಲಸ ಸಿಕ್ಕಮೇಲೆ ಎಲ್ಲಾ ಸರಿ ಹೋಗಬಹುದೇನೋ ಅಂತ.''

''ಕೆಲಸ ಸಿಕ್ಕರೆ ಈ ಹುಡುಗಿಗೆ ಸಂಪಾದನೆ ಇರುತ್ತೆ, ಸ್ವತಂತ್ರ ಇರುತ್ತೆ.... ಆಗ ಈ ಸಂಬಂಧ ಇನ್ನೂ ದೂರವಾಗುತ್ತೆ. ... ಈಗಲೇ ದೂರವಾಗಲಿ ನಮಗೂ ನಿಶ್ಚಿಂತೆ.''

''ಏನು ನಿಶ್ಚಿಂತೆಯೋ, ಚಂದ್ರ ನೋಡಿದರೆ ಹೀಗೆ, ಸೊಸೆಯ ಕಾಲ್ಗುಣದಿಂದ ಕೆಲವರಿಗೆ ಒಳ್ಳೆಯದಾಗುತ್ತೆ ಅಂತಾರೆ. ಈ ಹುಡುಗಿಯ ಕಾಲ್ಗುಣ ಏನೂ ಚೆನ್ನಾಗಿಲ್ಲ.''

''ಈ ಹುಡುಗೀನ ದೂಷಿಸಿದರೆ ಏನು ಪ್ರಯೋಜನ ? ಈ ಹುಡುಗಿಗೆ ಒಂದು ಕೆಲಸ ಸಿಗುವವರೆಗೂ ಇಲ್ಲಿರಲಿ. ಆಮೇಲೆ ಎಲ್ಲಿಗೆ ಬೇಕಾದರೂ ಹೋಗಿ ಇರಲಿ. ಈಗಲೇ ಯಾರಿಗೂ ಏನನ್ನೂ ಹೇಳಬೇಡ....'

''ಇವಳಮ್ಮ.... ಶ್ರೀಮತಿ .... ಊರಿಗೆ ಬಂದಿದ್ದಳು. ನಮ್ಮ ಮನೆ ಕಡೆ ಇಣುಕಿ ನೋಡಲಿಲ್ಲ.... ಇವಳೇ ಹೋಗಿ ಅದೇನು ಮಾತನಾಡಿಕೊಂಡು ಬಂದಳೋ ..... ನನಗಂತೂ ಒಂದೂ ತಿಳಿಯಲಿಲ್ಲ.....''

''ಅವರುಗಳ ಮನಸ್ಸಿನಲ್ಲಿ ಏನು ದುಗುಡವೋ ...? ಹಿರಿಯರು ನಿಂತು ಜಾತಕನೋಡಿ, ಸರಿಯಾದ ಮುಹೂರ್ತದಲ್ಲಿ ನೆರವೇರಿಸಿದ ಮದುವೆಗಳೇ ಬಿದ್ದು ಹೋಗ್ತಿದೆಯಂತೆ... ಈ ಕಾಲದಲ್ಲಿ.... ಅಂಥಾದ್ದರಲ್ಲಿ ಈ ಮದುವೆ ಮುರಿದು ಹೋದರೆ ಅದರಲ್ಲಿ ಅಚ್ಚರಿ ಏನೂ ಇಲ್ಲ. ''

''ಹೀಗೆ ಅಂತ ವಿಷಯ ತಿಳಿದ ಮೇಲೆ , ನನಗ್ಯಾಕೋ ಈ ಹುಡುಗಿ ನಮ್ಮ ಮನೇಲಿ ಇರೋದು ಸರಿಯಲ್ಲ ಅಂತ ಅನ್ನಿಸುತ್ತೆ..... ''

''ಸೊಸೆ ಅನ್ನೋ ಹಕ್ಕಿನ ಮೇಲೆ ಅವಳು ಇಲ್ಲಿದ್ದಾಳೆ..... ಈಗ ಅವಳು ತವರು ಮನೆಗೆ ಹೋಗಿರುವುದು ಸರಿಯಲ್ಲ''

''ಗಂಡ ಹೆಂಡತಿಯರಲ್ಲಿ ವಿರಸ ಇತ್ತು.... ಹೆಂಡತಿಯೇ ಗಂಡನಿಂದ ದೂರ ಹೋಗಿ ತವರಿನಲ್ಲಿ ಇದ್ದಳು... ಅದಕ್ಕೆ ಡೈವೋರ್ಸ್ ಆಯ್ತು.. ಅಂತಾನಾದ್ರೂ ಮಾತು ಬಂದರೆ.... ಪರವಾಗಿಲ್ಲ. ''

''ಚೆನ್ನಾಗಿದೆ ನಿನ್ನ ಮಾತು. ... ಒಟ್ಟಿನಲ್ಲಿ ಈ ಹುಡುಗಿಯದೇ ತಪ್ಪು ಅಂತ ನೀನು ನಿರ್ಧರಿಸಿರಬೇಕು. ಜನ ಆಡಿಕೊಳ್ಳಬೇಕು.... ಅಲ್ಲ ಒಂದು ವೇಳೆ ನಮ್ಮ ಚಿಂಪಿಗೆ ಹೀಗಾಗಿ– ಏನು ಮಾಡ್ತಿದ್ದೆ? ''

''ಒಟ್ಟಿನಲ್ಲಿ ನಮ್ಮ ಚಂದ್ರನ ಬಾಳು ಹಾಳಾಯ್ತು''

''ಅದಕ್ಕೆ ಸ್ವತಃ ಅವನೇ ಕಾರಣ.... ನಮ್ಮದಾಗಲೀ, ಆ ಹುಡುಗಿಯದಾಗಲೀ ತಪ್ಪಿಲ್ಲ. ಏನೂ ತಪ್ಪಿಲ್ಲದ ಈ ಹುಡುಗಿಯನ್ನೇಕೆ ಗೋಳು ಹುಯ್ದುಕೊಳ್ಳಬೇಕು. ಅವಳ ಪಾಡಿಗೆ ಅವಳು ಸುಖವಾಗಿರಲಿ. ''

''ನಾನಂತೂ ಈ ಸುದ್ದೀನ ಎತ್ತುಲ್ಲ... ನಾನಾಗಿಯೇ ಮಗ ಸೊಸೆಯರ ಮಧ್ಯೆ ಬಿರುಕನ್ನೇಕೆ ತರಲಿ ? ''

''ಈಗಾಗಲೇ ಬಿರುಕು ಕಂಡಿದೆ. ಅದನ್ನು ಸರಿಪಡಿಸೋಕೆ ಆಗೋದಿದ್ರೆ ಇಷ್ಟು ಹೊತ್ತಿಗೇ ಸರಿಹೋಗುತ್ತಿತ್ತು. ಬಿರುಕು ಇನ್ನೂ ದೊಡ್ಡದಾಗುತ್ತಿದೆ. ನಾನೇ ನಿನ್ನ ಮಗನ ಹತ್ತಿರ ಮಾತಾಡ್ತೀನಿ.''

''ಬೇಡ..... ಬೇಡ.... ನಾವಾಗಿಯೇ ಕೈಯಾರೆ ಇಬ್ಬರನ್ನೂ ದೂರ ದೂರ ಮಾಡುವುದು ಬೇಡ. ಹಾಗೇ ಆಗಬೇಕೂಂತ ಇದ್ದರೆ, ಅದನ್ನು ಅವರುಗಳೇ ಮಾಡಿಕೊಳ್ಳಲಿ....'' ಗಂಡನಿಗೆ ಕೈ ಮುಗಿದು ಹೇಳಿದಳು. ಮೈಲಾರಯ್ಯನವರು ಮೆತ್ತಗಾದರು.

ಎಲ್ಲರೂ, ಒಳ ದುಗುಡವನ್ನು ಮುಚ್ಚಿಟ್ಟು, ತೋರಿಕೆಯ ಮುಖವಾಡವನ್ನು ಧರಿಸಿ, ಆದಷ್ಟು ಸಮಾಧಾನವಾಗಿರಲು ಪ್ರಯತ್ನಿಸುತ್ತಿದ್ದರು. ಪೂರ್ಣಿಮಾ ಬ್ಯಾಂಕ್ ಪರೀಕ್ಷೆಯನ್ನು ಮುಗಿಸಿ ಬಂದ ದಿನ ನೆಮ್ಮದಿ ಉಂಟಾಗಿತ್ತು. ಬ್ಯಾಂಕ್‌ನಲ್ಲಿ ಕೆಲಸ ಸಿಕ್ಕಿದರೆ ಸಾಕು, ಇನ್ನು ಏನೇ ನಡೆದರೂ ಆತಂಕವಿಲ್ಲ ಎಂದು ಎಲ್ಲರೂ ನಿರ್ಧರಿಸಿದಂತಿತ್ತು.

ಚಂದ್ರನಿಗೆ ಒಂದು ಸಣ್ಣ ಕಂಪನಿಯಲ್ಲಿ ಕೆಲಸ ಸಿಕ್ಕಿತ್ತು. ಸಂಬಳ ಕಡಿಮೆ ಆದರೂ ಸೇರಿಕೊಂಡಿದ್ದ. ಇವನ ಸಹೋದ್ಯೋಗಿಗಳಲ್ಲಿ ಮೂರು ಜನ ಹೆಂಗಸರೂ ಇದ್ದರು. ಅವರುಗಳಲ್ಲಿ ಇಬ್ಬರಿಗೆ ಮದುವೆಯಾಗಿದ್ದಿತು. ಇನ್ನೊಬ್ಬಳು ಅವಿವಾಹಿತೆ. ಅವಳ ಹೆಸರು ಕನಕ. ಅವಳ ಪರಿಚಯವಾಗುವ ಮೊದಲೇ ಒಬ್ಬ ಸಹೋದ್ಯೋಗಿ ಯಿಂದ ಅವಳ ವಿಷಯ ತಿಳಿದಿತ್ತು. ಅವಳಿಗೆ ತಂದೆ ಇಲ್ಲ. ಅವಳೇ ಹಿರಿಯಮಗಳು, ಅವಳ ಸಂಪಾದನೆಯಿಂದಲೇ ಮನೆಯ ಖರ್ಚು ವೆಚ್ಚಗಳು ನಡೆಯುತ್ತಿವೆ. ತಮ್ಮ ತಂಗಿ ಇಬ್ಬರೂ ಓದುತ್ತಿದ್ದಾರೆ. ಇತ್ಯಾದಿ ಇತ್ಯಾದಿ.

ಇವನ ಗಮನ ಅತ್ತ ಸರಿಯಿತು. ತಾನಾಗಿಯೇ ಅವಳ ಸ್ನೇಹವನ್ನು ಬಯಸಿದ. ಇಬ್ಬರಲ್ಲೂ ಸಲುಗೆ ಬೆಳೆಯಿತು. ಆಗ ಈಗ ಅವರ ಮನೆಗೆ ಹೋಗಿ ಬರಲಾರಂಭಿಸಿದ. ಸ್ನೇಹ ಪರಾಕಾಷ್ಠೆಯನ್ನು ಮುಟ್ಟಿತು. ಇವನು ಅವಳ ಸಂಗವನ್ನು ಬಯಸಿದ. ಅವಳು ನಿರಾಕರಿಸಿದಳು.

''ನಾನು ಮರ್ಯಾದಸ್ಥ ಹೆಣ್ಣು. ಸ್ನೇಹಿತೆಯಾದ ಮಾತ್ರಕ್ಕೆ ನನ್ನಿಂದ ನೀವು ಇದನ್ನೆಲ್ಲಾ ಬಯಸುವುದು ಸರಿಯಲ್ಲ'' ಎಂದು ಬುದ್ಧಿವಾದ ಹೇಳಿದಳು.

ಇವನು ತನ್ನ ಕತೆಯನ್ನು ಹೇಳಿಕೊಂಡ. ''ನಮ್ಮಿಬ್ಬರ ಮದುವೆ ಸಕ್ಸಸ್ ಆಗಲಿಲ್ಲ, ನಾನು ಅವಳು ದೂರ ದೂರವಾಗಿದೀವಿ..... ನನಗೂ ಹೆಣ್ಣಿನ ಸಹವಾಸ ಬೇಕೆನಿಸಿದೆ.'' ನಿಜವನ್ನೇ ನುಡಿದ.

''ನಿಮ್ಮ ನಿಮ್ಮಲ್ಲಿ ಹೊಂದಾಣಿಕೆ ಇಲ್ಲದಿದ್ದರೆ ಡೈವೋರ್ಸ್ ಯಾಕೆ ತೆಗೆದುಕೊಳ್ಳಬಾರದು ? '' ಸಲಹೆ ನೀಡಿದಳು.

''ಡೈವೋರ್ಸ್ ಕೊಟ್ಟರೆ ನನಗೆ ನಷ್ಟವಾಗುತ್ತದೆ.''

''ನೀವು ಹೀಗೆ ಯೋಚಿಸುವುದು ತಪ್ಪು. ಪ್ರೀತಿಸಿ ಮದುವೆಯಾದವರು. ಪ್ರೀತಿಯನ್ನು ಇಷ್ಟು ಕಳಪೆ ಮಾಡಬೇಡಿ. ಈಗ ನೀವು ನಿಮ್ಮ ಸುಖದ ಬಗ್ಗೆ ಚಿಂತಿಸುತ್ತಿಲ್ಲವೇ? ಹಾಗೇ ಅವರು ಸುಖವಾಗಿರುವುದಕ್ಕೆ ಬಿಡಬೇಕು. ಡೈವೋರ್ಸಿಗೆ ಅರ್ಜಿ ಹಾಕಿ. ಕೋರ್ಟು ಹೇಗೆ ತೀರ್ಪು ಕೊಡುತ್ತದೋ ಅದನ್ನು ಒಪ್ಪಿಕೊಳ್ಳಿ. ನಿಮಗೆ ಆಕೆ ಬೇಡವಾಗಿರುವಾಗ , ನಿಮ್ಮ ಬಂಧನದಲ್ಲೇಕೆ ಆಕೆಯನ್ನು ಇಟ್ಟು ಕೊಳ್ತೀರಿ. ಆಕೆಗೆ ಬಿಡುಗಡೆಯನ್ನು ಕೊಡಿ. ಎಲ್ಲರಿಗೂ ಸ್ವತಂತ್ರವಾಗಿ ಬಾಳುವ ಆಸೆ ಇರುವುದಿಲ್ಲವೇ ?''

''ಹಾಗಾದರೆ ಗಂಡ ಹೆಂಡತಿಯರ ಸಂಬಂಧವನ್ನು ಬಂಧನ ಅಂತ ಅಂತೀರಾ?''

''ಸಾಮರಸ್ಯವಿದ್ದರೆ ಅದು ಅನುರಾಗ ಬಂಧನ ಇಲ್ಲದಿದ್ದರೆ ಅದು ಸೆರೆಮನೆವಾಸಕ್ಕಿಂತ ಹೇಯವಾಗಿರುತ್ತದೆ. ಅಂತಹ ಬಂಧನಕ್ಕೆ ಬಿಡುಗಡೆ ಒಂದೇ ಮಾರ್ಗ''

''ನೀವು ಏನೇನೋ ಹೇಳಿ ನನ್ನ ತಲೆಯನ್ನು ಕೆಡಿಸುತ್ತಿದ್ದೀರಿ.''

''ನಿಮ್ಮ ತಲೆ ಈಗಲೇ ಕೆಟ್ಟಿದೆ. ಅದನ್ನು ಸರಿ ಮಾಡಿಸುವ ಪ್ರಯತ್ನ ಮಾಡುತ್ತಿದ್ದೇನೆ. ನಿಧಾನವಾಗಿ ನೀವೇ ಯೋಚಿಸಿ , ನೀವು ಹ್ಯಾಪಿಯಾಗಿದ್ದೀರಾ ? ''

''ಇಲ್ಲ.... '' ತಲೆಯಾಡಿಸಿದ. ಒಂದು ಗಳಿಗೆ ನಿಧಾನಿಸಿ, ಪ್ರಶ್ನಿಸಿದ.

''ನಾನು ವಿಚ್ಛೇದನ ತೆಗೆದುಕೊಂಡರೆ ನನ್ನನ್ನು ಮದುವೆಯಾಗ್ತೀರಾ ?''

''ನಾನು ನಿಮ್ಮನ್ನು ಮದುವೆಯಾಗುವ ಆಸೆಗೆ ಈ ಸಲಹೆಯನ್ನು ಕೊಡುತ್ತಿಲ್ಲ. ನನಗೆ ಮದುವೆಯಾಗುವ ಆಸೆ ಇಲ್ಲ. ನನಗೆ ನನ್ನದೇ ಆದ ಜವಾಬ್ದಾರಿಗಳಿವೆ ನನ್ನ ತಮ್ಮ ಹಾಗೂ ತಂಗಿಗೆ ನಾನೇ ಸರ್ವಸ್ವ... ನನ್ನ ತಾಯಿಗೆ ನಾನೇ ದಿಕ್ಕು. ಇದನ್ನೆಲ್ಲ ಬದಿಗೆ ಸರಿಸಿ ಬರೀ ನನ್ನ ಆಸೆಯನ್ನು ಮಾತ್ರ ಪೂರೈಸಿಕೊಳ್ಳುವಷ್ಟು ಸ್ವಾರ್ಥಿ ನಾನಾಗಲಾರೆ...''

''ನಿಮಗೆ ನೀವು ಮೋಸ ಮಾಡಿಕೊಳ್ತಿದೀರಿ ಅಷ್ಟೇ....''

''ನಿಮಗಿಂತ ? ನೀವು, ನಿಮಗೂ ಮೋಸ ಮಾಡಿಕೊಳ್ತಿದೀರಿ. ನಿಮ್ಮ ಹೆಂಡತಿಗೂ

ಮೋಸ ಮಾಡ್ತಿದೀರಿ....''

''ಅವಳು ಮೋಸಗಾತಿ. ಅವಳು ನನಗೆ ಮೋಸ ಮಾಡಿದಳು.''

''ಅದು ನಿಮ್ಮ ಮನಸ್ಸಿನ ಭ್ರಮೆ. ನಿಜವಿರಲಾರದು. ಅಂತಲೇ ಅನ್ನಿಸುತ್ತೆ ನನಗೆ... '' ಅವಳು ನಕ್ಕಾಗ ಇವನು ಎದ್ದುನಿಂತ. ಕೋಪದಿಂದ ಅವನ ಮುಖ ಕೆಂಪಾಗಿತ್ತು. ಅವಳು ಕೈಹಿಡಿದು ಅವನನ್ನು ಕೂಡಿಸಿದಳು.

''ನೋಡಿ, ನಿಮಗೆ ಎಷ್ಟು ಬೇಗ ಕೋಪ ಬರುತ್ತೆ. ನಿಮ್ಮದು ಅತೀ ದುಡುಕಿನ ಸ್ವಭಾವ. ಬಹಳ ಬೇಗ ಉದ್ವೇಗಗೊಂಡು, ಸಂಯಮವನ್ನೇ ಕಳೆದುಕೊಳ್ತೀರಿ. ಅದು ತಪ್ಪು.''

''ನನಗೆ ಇದನ್ನೆಲ್ಲ ಹೇಳೋಕೆ ನೀವ್ಯಾರು ..?''

''ನೋಡಿ.... ನೀವ್ಯಾರು ಅಂತ ನನ್ನನ್ನೇ ಕೇಳ್ತೀದೀರಿ. ಈ ಮೊದಲು ನಾನೊಬ್ಬಳು ಒಳ್ಳೆಯ ಸ್ನೇಹಿತೆಯಾಗಿದ್ದೆ. ನಮ್ಮಿಬ್ಬರಲ್ಲೂ ಸಲುಗೆಯಿತ್ತು. ನನ್ನನ್ನು ಮದುವೆಯಾಗುವ ಆಸೆಯನ್ನು ಸಹ ವ್ಯಕ್ತಪಡಿಸಿದ್ದಿರಿ.... ಈಗ ಇದ್ದಕ್ಕಿದ್ದಂತೆ ಏನಾಯ್ತು?''

ಅವನು ಅತ್ತ ಮುಖ ತಿರುಗಿಸಿಕೊಂಡ. ಇವಳು ಬಲವಂತವಾಗಿ ಅವನ ಮುಖವನ್ನು ತನ್ನೆಡೆಗೆ ತಿರುಗಿಸಿಕೊಂಡಳು.

''ನಿಮ್ಮ ಈ ವರ್ತನೆಯನ್ನು ನೀವಾಗಿಯೇ ಸರಿಪಡಿಸಿಕೊಳ್ಳಲು ಸಾಧ್ಯವಿಲ್ಲ ನಿಮಗೆ ಸೈಕಿಯಾಟ್ರಿಸ್ಟರ ಸಲಹೆಯ ಅಗತ್ಯವಿದೆ ಹೀಗೆ ಮುಂದುವರೆದರೆ ನೀವು ಮನೋರೋಗಿಯಾಗಿ ಬಿಡ್ತೀರಿ. ಆಗ ಸರಿಪಡಿಸುವುದು ಕಷ್ಟವಾಗುತ್ತದೆ. ನಾನು ನಿಮಗೆ ಸಹಾಯಕಳಾಗಿರುತ್ತೀನಿ.....'' ಅವನ ಭುಜವನ್ನು ಹಗುರವಾಗಿ ಒತ್ತಿ ವಿಶ್ವಾಸವನ್ನು ತೋರಿಸಿದಳು. ಏಕೋ ಏನೋ ಅವನಿಗೆ ದುಃಖವನ್ನು ತಡೆಯಲಾಗಲಿಲ್ಲ. ಅವಳ ಭುಜಕ್ಕೊರಗಿ ಗಳಗಳನೆ ಅತ್ತುಬಿಟ್ಟ. ಅವಳಿಗೂ ಅವನ ಸ್ಥಿತಿಯ ಬಗ್ಗೆ ಮರುಕವೆನಿಸಿತು. ಅವನನ್ನು ಅಪ್ಪಿಕೊಂಡು ತಾನೂ ಅತ್ತಳು.

''ನಾನೂ ಒಂದು ತರಹ ನಿಸ್ಸಹಾಯಕಿ, ನೀವೂ ನಿಸ್ಸಹಾಯಕರು. ನಾವು ಒಬ್ಬರಿಗೊಬ್ಬರು ಸಹಾಯಕರಾಗಿರಲೆಂದೇ ದೇವರು ನಮ್ಮಿಬ್ಬರನ್ನು ಭೇಟಿ ಮಾಡಿಸಿರಬಹುದು. ಇನ್ನು ಮುಂದೆ ನಿಮ್ಮ ನೋವೆಲ್ಲ ನನ್ನದು.... ಆದರೆ ಒಂದು ಕಂಡೀಷನ್... ನೀವು ಅದಕ್ಕೆ ಒಪ್ಪಬೇಕು.''

''ಏನದು ?''

''ಮೊದಲು ನಾನು ನಿಮ್ಮ ಪತ್ನಿಯೊಡನೆ ಮಾತನಾಡಬೇಕು. ''

''ಅವಳ ಹತ್ತಿರ ಏನು ಮಾತು ? ಅವಳಿಗೆ ನನ್ನ ಕಂಡರೇ ಆಗುಲ್ಲ. ''

''ಹಾಗ್ಯಾಕೆ ಅಂದುಕೊಳ್ತೀರಿ ? ''

''ಇದಕ್ಕೆ ನಾನು ಒಪ್ಪುಲ್ಲ''

''ಹೋಗಲಿ ಬಿಡಿ,... ಇನ್ನೊಂದು ಮಾತು. ಇದಕ್ಕಾದರೂ ನೀವು ಒಪ್ಪಲೇ ಬೇಕು. ಇಲ್ಲದಿದ್ದರೆ ನನಗೆ ಬೇಸರವಾಗುತ್ತದೆ.''

"ಏನದು ?..." ಸಿಡುಕಿದ.

"ನೀವು ಹೀಗೆ ಸಿಡುಕಿದರೆ, ನಾನು ನಿಮ್ಮ ಹತ್ತಿರ ಮಾತನ್ನೇ ಆಡುವುದಿಲ್ಲ. ನನ್ನ ಸ್ನೇಹವನ್ನು ನೀವು ಕಳೆದುಕೊಳ್ತೀರಿ. "

"ನೀವು ಹೆಂಗಸರು ಹೀಗೇಕೆ ಹೆದರಿಸುತ್ತೀರಿ ?"

"ನಾನು ಹೆದರಿಸುತ್ತಿಲ್ಲ. ಇರೋ ವಿಷಯ ಹೇಳಿದೆ. ನೀವು ಒಂಟಿಯಾಗಿಯೇ ಇರಲು ಬಯಸಿದರೆ, ನಾನು ಏನನ್ನೂ ಹೇಳಲಾರೆ. ನಿಮಗೆ ನನ್ನ ಒಡನಾಟ ಬೇಕಾಗಿದ್ದರೆ , ನಾನು ಹೇಳಿದಂತೆ ಕೇಳಬೇಕು. ಅದರಿಂದ ನಮಗೆ ಒಳ್ಳೆಯದೇ " ಅವನ ತಲೆಯ ಕೂದಲೊಳಗೆ ಕೈಆಡಿಸಿದಳು. ಅವನು ಮಂಕುಬೂದಿ ಎರೆಚಿಸಿ ಕೊಂಡವನಂತೆ ಮೆತ್ತಗಾದ.

ಚಂದ್ರನಿಗೆ ಇವಳ ಒಡನಾಟ ಹಿತವೆನಿಸತೊಡಗಿತು. ಅವಳ ಮಾತಿಗೆ ಒಪ್ಪಿ, ಡಾಕ್ಟರರ ಬಳಿಗೆ ಹೋಗಿದ್ದ. ಕೂಲಂಕಷವಾಗಿ ಪರಿಶೀಲಿಸಿದ ಡಾಕ್ಟರ್ ಕೆಲವು ಮಾತ್ರೆಗಳನ್ನು ಬರೆದುಕೊಟ್ಟು ಕೆಲವು ಸಲಹೆಗಳನ್ನು ನೀಡಿದರು. ಕ್ಲಿನಿಕ್‌ನಿಂದ ಹೊರ ಬಂದಾಗ ಬೇಸರದಿಂದ ನುಡಿದ.

"ಅಂತೂ ನನ್ನನ್ನು ಹುಚ್ಚನ ಸಾಲಿಗೆ ನಿಲ್ಲಿಸುವ ಪ್ರಯತ್ನ ಮಾಡ್ತಿದೀರಿ. "

"ಈ ಹುಚ್ಚನೇ ನನ್ನ ಆಪ್ತ ಸ್ನೇಹಿತ" ಎನ್ನುತ್ತಾ ರಸ್ತೆ ಎನ್ನುವುದನ್ನು ಮರೆತು ಅವನಿಗೆ ಒತ್ತಿಕೊಂಡಳು. ಅವನಿಗೂ ಹಿತವೆನಿಸಿತು. ಅವಳ ಸೊಂಟವನ್ನು ಬಳಸಿ ಹತ್ತಿರಕ್ಕೆ ಎಳೆದುಕೊಂಡ.

"ರೀ ಮಿಸ್ಟರ್ ಇದು ರಸ್ತೆ ನೆನಪಿರಲಿ.... " ಮುಗುಳ್ನಗುತ್ತಾ ಎಚ್ಚರಿಸಿದಳು.

"ಹುಚ್ಚರಿಗೆ ರಸ್ತೆ ಯಾವುದು, ಮನೆ ಯಾವುದು, ಒಂದೂ ತಿಳಿಯುವುದಿಲ್ಲ, ನೀವೇ ದಾರಿ ತೋರಿಸಬೇಕು" ಅವನೂ ನಗುತ್ತಾ ನುಡಿದ.

"ನಿಮ್ಮ ಹುಚ್ಚು ನನಗೂ ಹಿಡಿತಾ ಇದೆ. ಆದಷ್ಟು ಬೇಗ ನಾವಿಬ್ಬರೂ ಮದುವೆಯಾಗುವುದೇ ಒಳ್ಳೆಯದು" ಅವಳು ಮತ್ತೆ ನಗುತ್ತಾ ನುಡಿದಳು.

"ಅಂತೂ ಸದ್ಯ ನನ್ನ ದಾರಿಗೆ ಬಂದ್ರಲ್ಲಾ. ನೀವೆಲ್ಲಿ ನನ್ನ ಕೈ ಬಿಟ್ಟು ಬಿಡ್ತೀರೋ ಅಂತ ಹೆದರಿದ್ದೆ. "

"ನನ್ನ ಪಾಡಿಗೆ ನಾನು ಹಾಯಾಗಿದ್ದೆ ಚಂದ್ರ.... ನಿಮ್ಮ ದಾರಿಗೆ ನನ್ನನ್ನು ಎಳೆದೋರು ನೀವೆ. ಈಗ ನಮ್ಮಿಬ್ಬರ ಮಾರ್ಗ ಸುರಕ್ಷಿತವಾಗಿರಬೇಕಾದ್ರೆ ನಾವಿಬ್ರೂ ಆದಷ್ಟು ಬೇಗ ಮದುವೆಯಾಗಬೇಕು." ಅವಳು ಮತ್ತೆ ನುಡಿದಾಗ ಅವನೂ ಅದನ್ನೇ ಯೋಚಿಸುತ್ತಿದ್ದ.

ನಾನು ಆದಷ್ಟು ಬೇಗ ಒಬ್ಬ ಲಾಯರನ್ನು ಕಂಡು ಮಾತಾಡ್ತೀನಿ. ಅಲ್ಲಿಯವರೆಗೂ ಈ ಹುಚ್ಚನ ಮೇಲೆ ಕೃಪೆ ಇರಲಿ. ಅವಳ ಮುಂದೆ ತಲೆ ಬಾಗಿಸಿ ನುಡಿದ. ಅವಳು ನಗುತ್ತಾ ತಲೆಗೂದಲಲ್ಲಿ ಕೈಯಾಡಿಸಿದಳು.

  

ದಿಢೀರನೇ ಬಂದಿಳಿದ ಮಗನನ್ನು ಕಂಡು ಗೌರಮ್ಮ ತನ್ನ ಕಣ್ಣುಗಳನ್ನು ತಾನೇ ನಂಬದಾದಳು. ಇದೇನು ನಿಜವೇ, ಕನಸೇ ಎಂದು ಸಂದೇಹ ಪಡುವಂತಾಗಿತ್ತು. ಒಳಗೆ ಹೋಗಿ ಗಂಡನಿಗೆ ಸುದ್ದಿ ಮಟ್ಟಿಸಿದಳು. ಒಳಗಿನಿಂದ ಬಂದ ಪೂರ್ಣಿಮಾ ಅವನನ್ನು ನೋಡಿ ಹಾಗೆ ಕಂಭದಂತೆ ನಿಂತು ಬಿಟ್ಟಳು. ಅವಳನ್ನು ಕಂಡು ಇವನ ಮುಖ ಹುಳ್ಳಗಾಗಿತ್ತು ಅವಳಿಗೂ, ನಿಜವೋ ಸುಳ್ಳೋ ನಿರ್ಧರಿಸಲಾಗಲಿಲ್ಲ.

ಪೂರ್ಣಿಮಾಳನ್ನು ಹೀಗೆ ತನ್ನ ಮನೆಯಲ್ಲಿ ತನ್ನ ಎದುರಿಗೇ ಏಕಾಏಕಿ ಕಾಣುತ್ತೇನೆಂದು ಅವನು ಊಹಿಸಿರಲೇ ಇಲ್ಲ. ಅವಳ ಕಡೆ ಕಣ್ಣೆತ್ತಿ ನೋಡಿ ಮಾತನಾಡಿಸುವುದು ಅವನಿಂದ ಅಸಾಧ್ಯವಾಯಿತು. ಅವಳು ಅತ್ತೆಯನ್ನು ಕರೆಯಲೆಂದು ಒಳಗೆ ಓಡಿದಳು. ಮತ್ತೆ ತಕ್ಷಣವೇ ಅವನ ಎದರಿಗೆ ಬಂದು ನಿಲ್ಲುವುದಕ್ಕೆ ಸಂಕೋಚ ಅಡ್ಡಿ ಬಂದಿತು.

ತಾಯಿಯಾಗಲೀ, ಹೆಂಡತಿಯಾಗಲೀ ತನ್ನ ಕುಶಲವನ್ನು ವಿಚಾರಿಸದೇ ಹಾಗೇ ಒಳಗೆ ಹೊರಟು ಹೋದದ್ದು ಅವನ ಅಭಿಮಾನಕ್ಕೆ ಬರೆ ಎಳೆದಂತಾಗಿತ್ತು. 'ಸೊಕ್ಕು ಇವರುಗಳಿಗೆ' ತನ್ನಲ್ಲೇ ಬೈದುಕೊಂಡ . ತಂದೆ ರೂಮಿನಿಂದ ಹೊರಬಂದು ಕೈ ಕಟ್ಟಿನಿಂತು ಪ್ರಶ್ನಿಸಿದರು.

''ಅದೇನು ಈಗ ಹೀಗೆ ? ಇದ್ದಕ್ಕಿದ್ದಂತೆ ಬಂದದ್ದು?'' ಅವರ ಧ್ವನಿ ಗಡುಸಾಗಿತ್ತು.

''ಹೀಗೆ ನಿಮ್ಮನ್ನೆಲ್ಲಾ ನೋಡಬೇಕೆನಿಸಿತು... ಅದಕ್ಕೆ ಬಂದೆ...'' ಅವನ ಧ್ವನಿ ಕ್ಷೀಣವಾಗಿತ್ತು.

''ನಿಜ ಹೇಳ್ತಿದೀಯಾ ಅಂತ ನಂಬಬಹುದೋ ?'' ಅವನು ಬೆದರಿದ.

''ಮೊದಲ್ನಿಂದಲೂ ಹೀಗೆ.... ನಿಮಗೆ ನನ್ನ ಮಾತಿನಲ್ಲಿ ವಿಶ್ವಾಸವಿಲ್ಲ... ಅಮ್ಮ ನಿನಗೇನನ್ನಿಸುತ್ತೆ! '' ತಾಯಿಯ ಕಡೆ ನೋಡಿದ.

''ನಾನೇನು ಹೇಳಲಪ್ಪಾ.... ? ನಮ್ಮನ್ನೆಲ್ಲಾ ಮರೆತೇ ಬಿಟ್ಟಿದ್ದೀಯಾಂತ ಅಂದುಕೊಂಡೆವು. ಹೋಗಿ ಕೈಕಾಲು ತೊಳೆದುಕೊಂಡು ಬಾ. ಕಾಫಿ ಕೊಡ್ತೀನಿ.'' ತಾಯಿ ಅಕ್ಕರೆಯಿಂದ ನುಡಿದಾಗ ಅವನು ತಲೆ ತಗ್ಗಿಸಿ ಎದ್ದ. ಒಳ ಬಾಗಿಲಿನಲ್ಲಿ ನಿಂತಿದ್ದ ಪೂರ್ಣಿಮಾ ಬಚ್ಚಲು ಮನೆಗೆ ಓಡಿದಳು. ಕೈಕಾಲು ತೊಳೆಯಲು ಹದವಾದ ಬಿಸಿನೀರನ್ನು ತುಂಬಿಟ್ಟು ಕೈ ಒರೆಸಿಕೊಳ್ಳಲು ಟವೆಲನ್ನು ಇಟ್ಟು ಹೊರ ಬಂದಳು. ಚಂದ್ರ ಗಮನಿಸಿದರೂ ಗಮನಿಸದವನಂತೆ ಕೈಕಾಲು ತೊಳೆದು ಒಳ ಬಂದ. ಪೂರ್ಣಿಮಾಳೇ ಬಿಸಿ ಬಿಸಿಯಾದ ಘಂ ಎನ್ನುವ ಕಾಫಿಯನ್ನು ತಂದಿತ್ತಳು ಸುಮ್ಮನೆ ಎಂಬಂತೆ ಅವಳ ಕಡೆ ನೋಡಿದ. 'ಹೇಗೀದೀರಿ?' ಪ್ರಶ್ನಿಸಿದಳು

''ಹೂಂ.... ಹೀಗೀದೀನಿ'' ಎಂದ. ''ನೀನು ಹೇಗಿದೀಯ '' ಎಂದು ಕೇಳಲಿಲ್ಲ. ಅದನ್ನು ಗಮನಿಸಿದಳು, ಕಣ್ಣುಗಳು ತುಂಬಿ ಬಂದವು ಒಳಗಡೆಗೆ ಹೊರಟು ಹೋದಳು. ಮತ್ತೆ ಅವನ ಕಣ್ಣೆದುರಿಗೆ ಬರಲಿಲ್ಲ.

ಭಾನುವಾರವಾದುದರಿಂದ ಯಾರಿಗೂ ಹೊರಗಡೆ ಹೋಗುವ ಅವಾಂತರ ವಿರಲಿಲ್ಲ. ಊಟವಾದ ಬಳಿಕ ಚಂದ್ರ ಮಹಡಿ ಏರಿದ. ಮೆಟ್ಟಿಲು ಹತ್ತುವ ಮೊದಲು

ತಾಯಿಗೆ ಹೇಳಿದ್ದ.

''ಪೂರ್ಣಿಮಾಳನ್ನು ನನ್ನ ರೂಮಿಗೆ ಕಳಿಸು.... ನಾನು ಅವಳ ಹತ್ತಿರ ಮಾತನಾಡಬೇಕು'' ಎಂದಿದ್ದ. ಅತ್ತೆಯ ಮಾತುಗಳನ್ನು ಕೇಳಿ ಪೂರ್ಣಿಮಾ ನಡುಗಿದಳು. ಮೈ ಬೆವರುವಂತಾಗಿತ್ತು.

''ಈಗ ನಾನು ಬೇಕಾದೆನೆ ? ಇಷ್ಟು ದಿನ ಎಲ್ಲಿ ಹೋಗಿತ್ತು ಇವನ ಪ್ರೀತಿ ? ತಾನು ಅವನನ್ನು ಕಾಡಿಸಬೇಕು '' ಎಂದು ತನ್ನಲ್ಲಿಯೇ ನಿರ್ಧರಿಸಿಕೊಂಡು ನಡುಗುವ ಕಾಲುಗಳನ್ನು ಎತ್ತಿಡುತ್ತಾ ಮೆಟ್ಟಿಲನ್ನು ಹತ್ತಿದಳು.

ರೂಮಿಗೆ ಬಂದವಳೇ ಮೊದಲು ಬಾಗಿಲನ್ನು ಭದ್ರಪಡಿಸಲು ನೋಡಿದಳು. ''ಬಾಗಿಲು ತೆಗೆದೇ ಇರಲಿ'' ಅವನು ಒರಟಾಗಿ ನುಡಿದ. ಅವಳು ಹಾಗೆಯೇ ನಿಂತಳು. ''ಹತ್ತಿರಕ್ಕೆ ಬಾ'' ಎಂದು ಅವನು ಕರೆಯಲಿಲ್ಲ. ಇವಳೂ ಹೋಗಲಿಲ್ಲ. ತನ್ನ ಕೈಯಲ್ಲಿದ್ದ ಪೇಪರನ್ನು ಅವಳೆಡೆಗೆ ನೀಡಿದ.

''ಇವಕ್ಕೆ ನಿನ್ನ ಸಿಗ್ನೇಚರ್ಸ್ ಹಾಕು'' ಆರ್ಡರ್ ಮಾಡಿದ.

''ಏನದು ? ಎಂದು ಅವಳು ಕೇಳಲಿಲ್ಲ. ಅವನು ಹೇಳದೆಯೇ ಅವಳಿಗೆ ಅರ್ಥವಾಗಿತ್ತು. ನಿಂತ ನೆಲ ಕುಸಿದಂತಾಗಿತ್ತು. ಅಂತೂ ಕಡೆಗೂ ತನಗೆ ಕೈ ಕೊಟ್ಟ ತಾನೀಗ ತನ್ನ ವೀಕ್‌ನೆಸ್‌ನ್ನು ತೋರಿಸಿಕೊಳ್ಳಬಾರದು ಎಂದುಕೊಂಡು, ಅಲ್ಲಿದ್ದ ಪೆನ್ನನ್ನು ಕೈಗೆತ್ತಿಕೊಂಡು, ಬೇಕಾದ ಜಾಗದಲ್ಲಿ ತನ್ನ ಸಹಿ ಹಾಕಿದಳು. ಅವನು ಅವಳನ್ನೇ ತದೇಕವಾಗಿ ನೋಡುತ್ತಿದ್ದ. ಅದು ಅವಳ ಗಮನಕ್ಕೆ ಬಂದಿತ್ತು.''

''ಥ್ಯಾಂಕ್ಯೂ ಪೂರ್ಣಿಮಾ... ನೀನೆಲ್ಲಿ ಸತಾಯಿಸ್ತೀಯೋ ಅಂತ ಹೆದರಿದ್ದೆ'' ಎಂದ.

''ನಾನ್ಯಾಕೆ ಸತಾಯಿಸಲಿ ? ನಿಮಗೆ ಹೇಗೆ ನನ್ನಿಂದ ಬಿಡುಗಡೆ ಬೇಕೋ ಹಾಗೆ ನನಗೂ ನಿಮ್ಮಿಂದ ಬಿಡುಗಡೆ ಬೇಕಾಗಿದೆ.''

''ನನ್ನ ಕೈಲಾದಷ್ಟು ಜೀವನಾಂಶದ ಹಣವನ್ನು ಕೊಡುತ್ತೀನಿ. ನಿನಗೆ ಏನೂ ಕಷ್ಟವಾಗುಲ್ಲ....''

''ನಿಮ್ಮ ಜೀವನಾಂಶದ ಭಿಕ್ಷೆ ಹಣ ನನಗೆ ಬೇಡ. ಅದನ್ನು ತಗೆದುಕೊಂಡರೆ, ನನ್ನ ಕಷ್ಟ ಜಾಸ್ತಿಯಾಗುತ್ತದೆಯೇ ಹೊರತು ಕಡಿಮೆ ಆಗುವುದಿಲ್ಲ. ನನ್ನನ್ನು ನಾನು ನೋಡಿಕೊಳ್ಳಬಲ್ಲೆ.''

''ಓ.... ಹಾಗಾದರೆ, ಈ ಮೊದಲೇ ನೀನು ಹೀಗಾಗಬಹುದು ಅಂತ ಊಹಿಸಿದ್ದೆಯಾ ?''

''ಇವತ್ತು ನೀವು ಬಂದಾಗ ಬಹುಶಃ ನನ್ನನ್ನುವಾಪಸ್ಸು ಕರೆದೊಯ್ಯಲು ಬಂದಿರಬಹುದು ಅಂತ ಊಹಿಸಿದ್ದೆ. ಅದು ತಪ್ಪಾಯಿತು. ಹೀಗೆ ಏನೇನೋ ಕಲ್ಪನೆಗಳನ್ನಿಟ್ಟುಕೊಂಡು ಬದುಕುವುದು ಮೂರ್ಖತನ ಅಂತ, ಈಗ ತಾನೇ ಈ ರೂಮಿಗೆ ಬಂದ ಮೇಲೆ ಅರ್ಥವಾಯಿತು. ಹೀಗೆ ಅರ್ಥಹೀನವಾಗಿ ಬದುಕುವುದಕ್ಕಿಂತ ನಮ್ಮ ಪಾಡಿಗೆ ನಾವು ದೂರ ದೂರ ಇರುವುದೇ ಸರಿ ಅಂತ ನಾನು ಈ ಕ್ಷಣದಲ್ಲಿ ನಿರ್ಧರಿಸಿಬಿಟ್ಟೆ.....''

‘‘ಓ... ಬಹಳ ಜಾಣೆ ನೀನು.... ಇರಲಿ, ನಾನೇಕೆ ಡೈವೋರ್ಸ್ ತಗೋತಿದೀನಿ ಅಂತ ಕಾರಣ ತಿಳಿದುಕೊಳ್ಳುವ ಆಸೆ ನಿನಗಿಲ್ಲವಾ ? ’’

‘‘ಇಲ್ಲ, ನನಗೀಗ ನಿಮ್ಮ ಯಾವ ಮಾತನ್ನೂ ಕೇಳುವ ಆಸೆ ಇಲ್ಲ. ಒಮ್ಮೆ, ನೀವು ನನ್ನನ್ನು ಪ್ರೀತಿಸಿ ಮದುವೆಯಾದವರು, ಅಂತ ನೆನಪಿಸಿಕೊಳ್ಳಲೂ ಹೀನಾಯವೆನಿಸುತ್ತೆ. ತನ್ನ ಪತ್ನಿಯ ಮೇಲೆ ನಂಬಿಕೆ ಇಲ್ಲದೆ, ಅವಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗದ ನೀವೆಂತಹ ಗಂಡ... ನೀವು ಗಂಡಸೇ ಅಲ್ಲ..... ಹೇಡಿ... ಎಂದು ಬಿಟ್ಟಳು. ರೋಷದಿಂದ ಬಾಗಿಲನ್ನು ತೆರೆಯುವುದರಲ್ಲಿದ್ದವಳನ್ನು ಹಿಡಿದ....’’

‘‘ಏನಂದೆ ? ನಾನು ಹೇಡಿ..... ಗಂಡಸೇ ಅಲ್ಲ, ಅಲ್ಲವಾ ? ನೀನು ಹೆಂಗಸಾ? ....ನೀನು ಸರಿಯಾದ ಹೆಂಗಸೇ ಆಗಿದ್ದರೆ... ನನ್ನೊಡನೆ ಶರೀರ ಸಂಬಂಧವಿತ್ತಲ್ಲ ನೀನೇಕೆ ಬಸಿರಿಯಾಗಲಿಲ್ಲ.... ನೀನೇಕೆ ಬಸಿರಿಯಾಗಲಿಲ್ಲ! ನೀನು ಹೆಂಗಸೇ ಅಲ್ಲ... ಅವಳನ್ನು ಅಲುಗಾಡಿಸಿ ನುಡಿದ. ಅವಳು ಅವನ ಕೆನ್ನೆಗೆ ಛಟೀರನೇ ಹೊಡೆದಳು.’’

‘‘ಏನಂದ್ರಿ ! ನಾನು ಹೆಂಗಸಲ್ಲ ಅಂತ ಅಂದ್ರಾ ?.... ಇಂಥ ಮಾತನ್ನು ಷಂಡನೇ ಹೇಳೋದು.... ನೀನೇ ಸರಿಯಾದ ಗಂಡಸಲ್ಲ, ನೀನು ಗಂಡಸಲ್ಲ.’’

‘‘ಎಷ್ಟೇ ಧೈರ್ಯ ನಿನಗೆ. ಹೀಗೆಲ್ಲ ಮಾತನಾಡೋಕೆ... ಕೋರ್ಟಿನಲ್ಲಿ ನೀನು ಹೆಂಗಸೇ ಅಲ್ಲ ಅಂತ ಸಾಬೀತು ಮಾಡ್ತೀನಿ. ನೀನು ನನಗೆ ತಿಳಿಯದ ಹಾಗೆ ಹತ್ತು ಜನ ಗಂಡಸರೊಂದಿಗೆ ಮಲಗಿದರೂ, ನಿನಗೆ ಮಕ್ಕಳಾಗುಲ್ಲ ತಿಳೀತಾ ? ನೀನು ಬಂಜೆ... ನೀನು ಬಂಜೆ.... ’’ಅವನು ಹಂಗಿಸಿ ನುಡಿದಾಗ ಅವಳು ತಣ್ಣಗಾದಳು. ಕಣ್ಣೀರು ಕೋಡಿಯಾಗಿ ಹರಿಯಿತು.

ಇವನಂತೂ ಮರ್ಯಾದೆ ಇಲ್ಲದವನು. ಇವನೊಂದಿಗೆ ಮಾತನಾಡಿ ನಾನೂ ನನ್ನ ನಾಲಿಗೆಯನ್ನು ಹೊಲಸು ಮಾಡಿಕೊಂಡೆ. ಇವನಂತೆಯೇ ಕೆಳಮಟ್ಟಕ್ಕೆ ಇಳಿಯಲು ನನ್ನ ತಲೆ ಏನೂ ಕೆಟ್ಟಿಲ್ಲ. ಇವನ ಆರೋಗ್ಯ ಚೆನ್ನಾಗಿಲ್ಲ. ಹೇಗೂ ಡೈವೋರ್ಸ್ ಸಿಗುತ್ತದೆ. ಇವನ ಪಾಡು ಇವನಿಗೆ. ನನ್ನ ಪಾಡು ನನಗೆ. ... ಎಂದುಕೊಂಡು ಕೆಳಗಿಳಿದು ಬಂದು, ಅಜ್ಜಿಯ ಮನೆಗೆ ಹೊರಟುಹೋದಳು. ಇನ್ನು ಈ ಮನೆಗೂ ತನಗೂ ಯಾವ ಸಂಬಂಧವೂ ಇಲ್ಲ ಎಂದು ನಿರ್ಧರಿಸಿ ಬಿಟ್ಟಳು.

ಮಗ ಸೊಸೆಯರ ಮಾತಿನ ಚಕಮಕಿ ಸ್ವಲ್ಪ ಕೇಳಿಸಿದ್ದರೂ ಗೌರಮ್ಮ ತೆಪ್ಪಗಿದ್ದಳು. ಎಷ್ಟೋ ತಿಂಗಳುಗಳನಂತರ ಭೇಟಿಯಾಗಿದ್ದಾರೆ. ಇಬ್ಬರ ಮನಸ್ಸಿನಲ್ಲೂ ಕಹಿ ತುಂಬಿಕೊಂಡಿದೆ. ಇಬ್ಬರೂ ಕಹಿಯನ್ನು ಕಕ್ಕಿದ ಮೇಲೆ ಒಂದಾಗುತ್ತಾರೆ ಎಂದು ಭಾವಿಸಿದ್ದಳು. ಆದರೆ ಪೂರ್ಣಿಮಾ ಸೀದಾ ತನ್ನ ಅಜ್ಜಿಯ ಮನೆಗೆ ಹೊರಟು ಹೋದಾಗ ಅವಳಿಗೆ ಗಾಬರಿಯೂ ಆಗಿತ್ತು. ಮಗನ ಮೇಲೆ ಕೋಪವೂ ಬಂದಿತ್ತು. ಆದರೆ ಮಗನನ್ನು ಕೇಳಲು ಹೆದರಿದಳು. ಆ ರಾತ್ರಿ ಅವನು ಹೊರಡುವ ಸಮಯವಾದರೂ ಸೊಸೆ ಮನೆಗೆ ಬರಲಿಲ್ಲವಾದ್ದರಿಂದ ಅವಳ ತಳಮಳ ಹೆಚ್ಚಿತ್ತು.

‘‘ಇದೇನೋ ಇವತ್ತೇ ಹೊರಟು ಬಿಟ್ಯಾ ? ಇನ್ನೊಂದೆರಡು

ದಿನವಾದ್ರೂ ಇರಬಾರದೇ ?'' ಕೇಳಿದ್ದಳು.

''ಬಂದ ಕೆಲಸ ಆಯ್ತಲ್ಲಾ... ಇನ್ನು ಇಲ್ಲಿದ್ದು ಏನು ಮಾಡಲಿ ?''

''ಅಂದ್ರೆ .... ನಿನ್ನ ಜೊತೆಗೆ ಪೂರ್ಣಿಮಾಳನ್ನು ಕರೆದುಕೊಂಡು ಹೋಗ್ತಾ ಇದ್ದೀಯ ಅನ್ನು ಹಾಗಾದ್ರೆ ....''

''ಇಲ್ಲ..... ಅವಳ ನನ್ನ ಸಂಬಂಧ ಮುಗೀತು... ಡೈವೋರ್ಸ್ ಪೇಪರ್‌ಗೆ ಸೈನ್ ಹಾಕಿಸಿಕೊಳ್ಳೋಕೆ ಬಂದಿದ್ದೆ .... ''

''ಅಂದ್ರೆ.... ಗೌರಮ್ಮನ ಮುಖ ಬಿಳುಪೇರಿತ್ತು... ಅಂದ್ರೇ ... ಆ ಹುಡುಗಿ ಸೈನ್ ಹಾಕ್ತು?....''

''ಹಾಕ್ದೇ ಏನು ಮಾಡ್ತಾಳೆ ?.... ಅವಳಿಗೆ ನನ್ನ ಸಹವಾಸ ಬೇಡವಾಗಿತ್ತು. ಇನ್ಯಾರ ಸಹವಾಸಬಿದೆಯೋ......?''

''ಚಂದ್ರಾ.... ಹಾಗೆಲ್ಲಾ ಏನೇನೋ ಆಡ್ಬೇಡ.... ನಾಲಿಗೇಲಿ ಹುಳು ಬಿದ್ದೀತು. ಆ ಹುಡುಗಿ ನಮ್ಮ ಮನೇಲಿ ಇದ್ದಳು. ಕೆಟ್ಟ ಹುಡುಗಿಯಂತೂ ಖಂಡಿತಾ ಅಲ್ಲ. ನನಗೆ ನಿನ್ನ ಮೇಲೆ ಅನುಮಾನ....''

''ಹೌದು.... ಹೌದು.... ಮೊದಲಿಂದಲೂ ಅಷ್ಟೇ... ನಾನೇ ಸರಿಯಿಲ್ಲ ನಿನಗೆ.... ಚಿಂಪಿಯ ಅಣ್ಣನಾಗಿ ಬೈಸಿಕೊಂಡಿದ್ದಾಯಿತು. ಈಗ ಅವಳು ತೊಲಗಿದ್ಲು... ಈಗ ಇವಳ ಗಂಡನಾಗಿ ಅನ್ನಿಸಿಕೊಳ್ಳುತ್ತಿದೀನಿ ಈಗ ಇವಳೂ ತೊಲಗಲಿ. ಆಗ ನಾನೇ ಬೇಕಾಗುತ್ತೆ ನಿಮಗೆ....''

''ಯಾಕೆ ಹೀಗೆ ಹೊಟ್ಟೆ ಉರಿಸ್ತೀಯೋ.... ಪ್ರೀತಿಸಿ ಮದುವೆ ಆದಮೇಲೆ ಅವಳನ್ನು ಬಾಳಿಸಬೇಕಾದ್ದು ನಿನ್ನ ಕರ್ತವ್ಯ ಕಣೋ... ಹೀಗೆ ಕೈ ಬಿಡಬಾರದು.''

''ನಾನೇನು ಅವಳಿಗೆ ಅನ್ಯಾಯ ಮಾಡ್ತಿಲ್ಲ. ಜೀವನಾಂಶದ ಹಣವನ್ನು ಕೊಡ್ತೀನಿ. ಅವಳಿಗೆ ಹೇಗೆ ಬೇಕೋ ಹಾಗಿರಲಿ. ಬೇಕಾದ್ರೆ ಇನ್ನೊಂದು ಮದುವೆ ಯಾಗಲಿ... ಅವಳು ಬಯಸಿದ್ರೂ ಅವಳನ್ನು ಯಾರು ಮದುವೆಯಾಗ್ತಾರೆ ? '' ನಕ್ಕ.

''ಅವಳು ನಿನ್ನ ಹಣವನ್ನು ತೆಗೆದುಕೊಂಡು ಏನು ಸುಖವಾಗಿರುತ್ತಾಳೆ ? ನಿನಗೇ ಹಣದ ತಾಪತ್ರಯ ಹೆಚ್ಚು ... ಈಗ ಅವಳಿಗೂ ಕೆಲಸ ಸಿಗುವ ಹಾಗಿದೆ. ಇಬ್ಬರ ಸಂಪಾದನೆಯಿಂದ ಹಾಯಾಗಿರಬಹುದು....''

''ಅಂ.... ಏನೆಂದ ? ಅವಳಿಗೆ ಕೆಲಸ ಸಿಗ್ತಿದೆಯಾ ? ಆ ಮಳ್ಳಿ ನನಗೆ ಹೇಳಲೇ ಇಲ್ಲ.... ಅದಕ್ಕೇ ಅಷ್ಟು ಸುಲಭವಾಗಿ ಸೈನ್ ಮಾಡಿದ್ದು. ಯಾವ್ನೋನು ಇವಳ ಮುದ್ದು ಮುಖವನ್ನು ನೋಡಿ ಕೆಲಸ ಕೊಡ್ತಿದಾನಪ್ಪಾ ?''

''ನಾಲಿಗೆ ಬಿಗಿ ಹಿಡಿದು ಮಾತನಾಡು ಚಂದ್ರ..... ಅವಳು ನಿನ್ನ ಹೆಂಡತಿ. ಬೀದೀಲಿ ಬಿದ್ದವಳಲ್ಲ... ಯಾಕೆ ಇಷ್ಟು ನೀಚ ಮಟ್ಟಕ್ಕೆ ಇಳಿದಿದೀಯ. ಆ ಹುಡುಗೀಯದೇನು ತಪ್ಪೂಂತ ?''

ಅದನ್ನೆಲ್ಲಾ ಕೋರ್ಟಿನಲ್ಲಿ ತಿಳಿಸ್ತೀನಿ. ಈಗ ಹೊತ್ತಾಯ್ತು. ಹೊರಡ್ತೀನಿ ಎನ್ನುತ್ತಾ ಹೊರಟೇ ಬಿಟ್ಟ. ಆ ರಾತ್ರಿ ಪೂರ್ಣಿಮಾ ಮನೆಗೆ ವಾಪಸ್ಸು ಬರದಿದ್ದಾಗ ಅವಳಿಗೆ ಎಷ್ಟು ಆಘಾತವಾಗಿದೆ ಎಂದು ಅರ್ಥವಾಗಿತ್ತು. ಬೆಳಗಾದ ನಂತರ ತಾನೇ ಕರೆಯಲು ಹೋದಳು. ಅತ್ತೆಯ ಮುಖವನ್ನು ನೋಡಿ, ಎದುರುತ್ತರ ಕೊಡಲಾಗದೇ ಅವಳ ಜೊತೆಗೇ ಬಂದಳು. ಸೊಸೆಯೊಡನೆ ಮಾತನಾಡಲು ಯಾವ ವಿಷಯವೂ ಉಳಿದಿಲ್ಲವೆಂದೆನಿಸಿತ್ತು ಮೈಲಾರಯ್ಯನಿಗೆ. ಗಂಡ ಆಫೀಸಿಗೆ ಹೊರಟ ನಂತರ ಗೌರಮ್ಮ ಮಾತು ತೆಗೆದಳು.

''ನಿನಗಾದ್ರೂ ವಿವೇಕ ಇದೆ ಅಂತ ಅಂದ್ಕೊಂಡಿದ್ದೆ ಪೂರ್ಣಿಮಾ... ನೀನು ಸೈನ್ ಹಾಕಬಾರದಾಗಿತ್ತು. .....''

''ನಾವು ಜೊತೆಯಾಗಿ ಇರುಕ್ಕೆ ಖಂಡಿತಾ ಆಗ್ತಿರಲಿಲ್ಲ ಅತ್ತೆ..... ಅದಕ್ಕೆ ಒಪ್ಪಿ ಸೈನ್ ಮಾಡಿದೆ.''

''ನನ್ನನ್ನೊಂದ್ಮಾತು ಕೇಳಬೇಡ್ವೇನಮ್ಮಾ ನೀನು ? ಹಿರಿಯೋರುಅಂತ ನಾವು ಗಳು ಇದ್ದೆವಲ್ಲಾ..... ನಿಮ್ಮ ಕೇಶವ ಮಾವನ್ನಾದ್ರೂ ಕೇಳಬಹುದಿತ್ತು.''

''ನೀವು ಯಾರೂ ಸೈನ್ ಹಾಕಬೇಡಾಂತ ಹೇಳಿದ್ರೂ ನಾನು ಸೈನ್ ಹಾಕ್ತಿದ್ದೆ ... ನಿಮ್ಮ ಮಗ ಏನೇನಂದ್ರು ಅಂತ ನಿಮಗೆ ತಿಳೀದು ಅತ್ತೆ.''

''ಅವನು ಅವಿವೇಕಿ, ನಿನಗಾದ್ರೂ ವಿವೇಕ ಬೇಡ್ವೇನಮ್ಮ? ''

''ನನ್ನ ವಿವೇಕ, ನನ್ನ ಸಹನೆಗೆಲ್ಲ ಒಂದು ಮಿತಿ ಇತ್ತು. ಅತ್ತೆ ಇವತ್ತು ಅದೂ ಮುಗಿದು ಹೋಯ್ತು.''

''ಅಂತಾದ್ದೇನು ಆಡಿದ ಅವನು ?''

''ನಾನು ಬಂಜೆಯಂತೆ..... ನಾನು ಹೆಂಗಸೇ ಅಲ್ಲವಂತೆ... ಇಂಥ ಮಾತುಗಳನ್ನು ಕೇಳಿಸಿಕೊಂಡು ಯಾವ ವಿವೇಕಿಯೂ ತನ್ನ ಸಹನೆಯನ್ನು ಕಳೆದುಕೊಳ್ಳದೇ ಇರುವುದಿಲ್ಲ.... '' ಗೌರಮ್ಮ ಮೂಕಿಯಾದಳು. ಮಗ ಇಂಥ ದ್ದೊಂದು ಮಾತನ್ನ ಸೊಸೆಗೆ ಅಂದಿರಬಹುದು ಅಂತ ಊಹಿಸಲೂ ಸಾಧ್ಯವಿಲ್ಲ. ಸೊಸೆ ಸುಳ್ಳು ಹೇಳುತ್ತಿರಬಹುದೇ ....?

''ನಿಜವಾಗ್ಲೂ ಇಂಥ ಮಾತುಗಳನ್ನಾಡಿದನೇನಮ್ಮಾ .... ಅವನಿಗೇನು ಕೇಡುಗಾಲ ಬಂತೂಂತ ? ''

''ಯಾಕತ್ತೆ ನನ್ನ ಮಾತಿನ ಮೇಲೆ ನಂಬಿಕೆ ಇಲ್ಲವಾ ? ಡೈವೋರ್ಸ್ ಕೇಸು ಕೋರ್ಟಿಗೆ ಬಂದಾಗ, ಈ ವಿಷಯಗಳನ್ನೆಲ್ಲಾ ಕಟಕಟೆಯಲ್ಲಿ ನಿಂತು ಆಡ ಬೇಕಾಗುತ್ತದೆ. ಆಗ ಭಗವದ್ಗೀತೆಯ ಮೇಲೆ ಆಣೆಯನ್ನಿಟ್ಟು ನಿಜವನ್ನೇ ನುಡಿಯುತ್ತೀವಿ ಅಲ್ವಾ ?''

''ಸಾಕು ನಿಲ್ಲಿಸಮ್ಮ..... ಇಂಥ ಮಾತನ್ನೆಲ್ಲಾ ಆಡುವುದಕ್ಕೆ ಅವನಿಗೆ ಯಾವ ಹಕ್ಕು ಇಲ್ಲ..... ಗಂಡ ಹೆಂಡತಿಯರಲ್ಲಿ ಮನಸ್ತಾಪ ಬಂದ್ರೂ, ಇಂಥ ಮಾತನ್ನೆಲ್ಲಾ ಆಡಿ ಹೀಗೆಲ್ಲ ಬೈದಾಡುವುದು ಚೆನ್ನವಾ ? ''

''ನನಗೆ ಅವಮಾನ ಮಾಡುಕ್ಕೆ ನಿಮ್ಮ ಮಗ ಮಾಡಿರುವ ಪ್ಲಾನ್ ಇದು.

ಇಂಥೋರ ಜೊತೆ ನಾನು ಹೇಗೆ ಸಂಸಾರ ಮಾಡಲಿ ? ನನ್ನಿಂದ ಸಾಧ್ಯವಿಲ್ಲ...... ''

''ಅಂತೂ ಈಗಿನ ಕಾಲದೋರು ನೀವು.... ನೀವೇ ಎಲ್ಲಾ ನಿರ್ಧರಿಸಿಕೊಳ್ತೀರಿ. ನಾವುಗಳು ಇರೋದು ಸಹ ಮರೆತು ಹೋಗುತ್ತೆ ಅಲ್ವಾ ? ಕಡೆಗೂ ಬಹಳ ಮರ್ಯಾದೆ ತಂದ ನಮಗೆ '' ಆಕೆ ಕುಸಿದು ಕುಳಿತಾಗ ಅವಳಿಗೂ ದುಃಖ ಉಕ್ಕಿತು. ಅತ್ತೆ ಸೊಸೆ ಇಬ್ಬರೂ ಮನಸಾರೆ ಅತ್ತರು.

ಕೆಲ ಸಮಯದ ನಂತರ ಸಮಾಧಾನಗೊಂಡರು. ಬಹುಶಃ ಹೀಗಾಗ ಬಹುದೆಂದು ಊಹಿಸಿದ್ದವು. ಆದರೂ ಈ ದಿನ ಏಕೆ ಇಷ್ಟು ದುಃಖವಾಗ್ತಿದೆ ಎಂದು ಇಬ್ಬರಿಗೂ ಅರ್ಥವಾಗಿರಲಿಲ್ಲ. ಇಬ್ಬರಲ್ಲೂ ಏನೋ ದುಗುಡ, ಏನೋ ಸಂಕಟ, ಏನೋ ತಳಮಳ. ಪೂರ್ಣಿಮಾ ತನ್ನ ಬಟ್ಟೆಗಳನ್ನು ಜೋಡಿಸಿಟ್ಟುಕೊಳ್ಳುವಾಗ, ಗೌರಮ್ಮ ನೊಂದುಕೊಂಡು ನುಡಿದಳು.

''ಅಂತೂ, ನೀನೂ ನನ್ನನ್ನು ಬಿಟ್ಟು ಹೋಗುವುದೆಂದು ನಿರ್ಧರಿಸಿ ಬಿಟ್ಟಿದೀಯಾ ಅಂತನ್ನು. ''

''ಇಲ್ಲೇ ಪಕ್ಕದ ಮನೇಲಿ ಇರ್ತೀನಲ್ಲ....ನೀವು ಕರೆದಾಗಲೆಲ್ಲಾ ಓಡಿ ಬರ್ತೀನಿ. ಅತ್ತೆ... ''

''ಅತ್ತೆ ಅತ್ತೆ ಅಂತ ಬಾಯ್ತುಂಬಾ ಕರೀತೀಯ.... ಈ ಅತ್ತೇನ ಬಿಟ್ಟು ಹೊರಟಿದೀಯಲ್ಲ.... ನನ್ನ ಗತಿ ಏನೂಂತ ಯೋಚಿಸ್ತಿಲ್ಲ ನೀನು.''

''ನಿಮ್ಮನ್ನು ಒಂಟಿಯಾಗಿ ಬಿಟ್ಟು ಹೋಗುವ ಆಸೆ ನನಗೂ ಇಲ್ಲ ಅತ್ತೆ. ಆದರೆ, ಈಗ ಡೈವೋರ್ಸಿನ ಮಾತು ಬಂದಿರುವಾಗ, ನಾನು ಈ ಮನೆಯಲ್ಲಿರಬಾರದು....''

''ಈಗಲೂ ದುಡುಕಬೇಡಿ. ನಿಧಾನವಾಗಿ ಮತ್ತೆ ಯೋಚಿಸಿ... ಯಾವುದೇ ತೀರ್ಮಾನಕ್ಕೆ ಬರುವ ಮೊದಲು ಹತ್ತಾರು ಬಾರಿ ಆಲೋಚಿಸಬೇಕು. ''

''ನಿಮ್ಮ ಮಗ, ಎಲ್ಲದನ್ನು ಸರಿಯಾಗಿಯೇ ಆಲೋಚಿಸಿ, ಇಲ್ಲಿಗೆ ಬಂದಿದ್ದರು. ಮದುವೆಯಾದ ನಂತರ, ಎರಡೇ ತಿಂಗಳು ನಾವು ಒಟ್ಟಿಗೆ ಇದ್ದುದ್ದು. ಎರಡು ಮೂರು ತಿಂಗಳುಗಳಿಂದ ಅವರು ಸಾಕಷ್ಟು ಈ ಬಗ್ಗೆ ಆಲೋಚಿಸಿಯೇ ತೀರ್ಮಾನ ತಗೊಂಡಿರಬಹುದು....'' ಅವಳು ಸರಸರನೆ ಬಟ್ಟೆಗಳನ್ನು ಸೂಟ್‌ಕೇಸ್ ಗಳಿಗೆ ತುಂಬಿಕೊಂಡು ಹೊರಟಳು.

''ಇವತ್ತೊಂದು ದಿನ ಇಲ್ಲಿರು ಪೂರ್ಣಿಮಾ.... ನಾಳೆ ಹೋಗೂವಂತೆ.''

ಅತ್ತೆಯ ಮಾತಿಗೆ ಇಲ್ಲವೆನ್ನಲಾಗದೇ ಪೂರ್ಣಿಮಾ ಒಪ್ಪಿಕೊಂಡಳು.

  

ಪೂರ್ಣಿಮಾಳ ತಲೆಯಲ್ಲಿ ಒಂದೇ ಮಾತು ಕೊರೆಯಲಾರಂಭಿತು. ಬಂಜೆ.... ಬಂಜೆ.... ತಾನು ಬಂಜೆಯೇ ? ಚಂದ್ರ ಇಂಥ ಮಾತನ್ನು ಆಡುವುದೆ ? ಮದುವೆಯಾಗಿ

ಐದಾರು ವರ್ಷಗಳು ಕಳೆದರೂ ಮಕ್ಕಳಾಗದಿರುವವರನ್ನು ಅತ್ತೆ ಮಾವ ಬಂಜೆ ಅಂತ ಹೀಯಾಳಿಸುವ ಸಾಧ್ಯತೆ ಇದೆ. ಅಂಥಾದ್ದರಲ್ಲಿ ಸ್ವತಃ ಪತಿಯಾದವನೇ ಹೀಗೆ ಹೀಯಾಳಿಸಬಹುದೇ ? ಅವನ ಪ್ರೀತಿ ಎಲ್ಲಾ ಎಲ್ಲಿ ಹೋಯಿತು ? ಅದೂ ಇಷ್ಟು ಬೇಗ ? ನನ್ನಿಂದ ಮಗುವನ್ನು ಅಪೇಕ್ಷಿಸಿದ್ದರೆ, ಅದನ್ನು ಬಾಯಿಬಿಟ್ಟು ಹೇಳಬೇಕಾಗಿತ್ತು. ಅದನ್ನು ಬಿಟ್ಟು ಯಾವ ಹೀನಾಯವೂ ಇಲ್ಲದೇ ನನ್ನನ್ನೇ ಬಂಜೆ ಎನ್ನುವುದೇ ಕೋರ್ಟಿನಲ್ಲಿ ಎಲ್ಲರೆದುರಿಗೆ ಇಂಥ ಮಾತನ್ನು ಹೇಳಿ, ನನಗೆ ಅವಮಾನ ಮಾಡಲೇ ಬೇಕೆಂದು ನಿರ್ಧರಿಸಿದ್ದಾನೇನೋ. ಏನಾಗಿದೆ ಇವನಿಗೆ ? ಯಾರು ಹೇಳಿಕೊಟ್ಟಿದ್ದಾರೆ .....ಇದ್ದಕ್ಕಿದ್ದಂತೆ ತನ್ನನ್ನು ದೂರ ಮಾಡುವ ಕೆಟ್ಟ ಬುದ್ಧಿ ಏಕೆ ಬಂತು ? ಈಗ ಬೇರೆ ಯಾರಾದರೂ ಹೆಣ್ಣಿನ ಸಹವಾಸ ಮಾಡಿರಬಹುದೇ ? ... ಈ ಯೋಚನಾ ಸರಣಿಗೆ ಕೊನೆ ಇಲ್ಲವೇನೋ ಅಂತೆನಿಸಿತು.

ನನ್ನನ್ನು ಬಂಜೆ ಅಂತ ಅಂದನಲ್ಲವೆ ? ನಾನು ಬಂಜೆ ಅಲ್ಲ ಎನ್ನುವುದನ್ನು ಅವನಿಗೆ ತಿಳಿಸಬೇಕು.. ಆದಷ್ಟು ಬೇಗ ತಾನು ತಾಯಿ ಆಗಬೇಕು. ಆದರೆ ಹೇಗೆ ? ತಾನೀಗ ಗಂಡನಿಂದ ದೂರವೇ ಇದ್ದೇನೆ. ಈ ಮೊದಲು ಸಹ ಅವನು ಮಾಡಿದ್ದು ಬಲಾತ್ಕಾರವೇ ... ಒಂದು ಅನುನಯದ ಮಾತಿಲ್ಲ... ಪ್ರೀತಿಯಂತೂ ಇಲ್ಲವೇ ಇಲ್ಲ, ತನಗೆ ಬೇಕೆನ್ನಿಸಿದಾಗ, ಪಶುವಿನಂತೆ ವರ್ತಿಸಿದ್ದ. ಆ ಸಂಬಂಧದಲ್ಲಿ ಅಸಹ್ಯವಿತ್ತೇ ಹೊರತು ಆಸೆ ಎನ್ನುವುದು ಬರಲಿಲ್ಲ. ಆ ಕಾರಣವೋ ಏನೋ ತನಗೆ ತಾಯಿಯಾಬೇಕೆಂಬ ಆಲೋಚನೆಯೇ ಬರಲೇ ಇಲ್ಲ. ಆದರೆ ಈಗ ಈ ಆಪಾದನೆ ಹೊರಿಸುವನೆಂಬ ಸಂಶಯ ಕೂಡಾ ತನಗೆ ಬರಲಿಲ್ಲ.... ಈಗ ಇವನ ಪತ್ನಿಯಾಗಿ ತಾಯಿಯಾಗುವುದು ಆಗದ ಮಾತು. ತಾನು ಮರು ಮದುವೆಯಾಗಬೇಕು. ಆಗಲೇ ತಾನು ತಾಯಿಯಾಗುವುದು ಸಾಧ್ಯ . ....

ಆದರೆ ... ಆದರೆ... ಒಂದು ವೇಳೆ ಇವನು ನುಡಿದಂತೆ, ತನಗೆ ತಾಯಿಯಾಗುವ ಅರ್ಹತೆಗಳೇ ಇಲ್ಲದಿದ್ದರೆ.... ಈ ಅನಿಸಿಕೆಯೇ ಅವಳನ್ನು ಬಡಿದೆಬ್ಬಿಸಿತು. ಎದ್ದು ಕುಳಿತಳು. ಮೈಯೆಲ್ಲಾ ಉರಿದು ಹೋಗುತ್ತಿರುವ ಅನುಭವ ವಾಯಿತು ಎದ್ದು ಹೋಗಿ ಗಟಗಟನೆ ತಣ್ಣೀರನ್ನು ಕುಡಿದು ಬಂದಳು. ಮತ್ತೆ ಮಲಗಿದರೂ, ಅವ್ಯಕ್ತ ಭಯ ಅವಳಿಗೆ ಕಣ್ಣು ರೆಪ್ಪೆಗಳನ್ನು ಅಂಟಿಸಿಕೊಂಡಿರಲು ಬಿಡಲಿಲ್ಲ. ಮಗ್ಗುಲು ಬದಲಾಯಿಸುತ್ತಾ ಹೊರಳಾಡುತ್ತಿದ್ದವಳನ್ನು ತಾಯಿ ಪ್ರಶ್ನಿಸಿದಳು.

''ಏನೇ ಪೂರ್ಣಾ.... ನಿದ್ದೆ ಬರ್ತಿಲ್ಲವೇನೇ....'' ಏಕೋ ಏನೋ ತಾಯಿಗೆ ಉತ್ತರಿಸಬೇಕೆನಿಸಲಿಲ್ಲ. ನಿದ್ದೆ ಬಂದವಳಂತೆ ನಟಿಸಿದಳು. ಆದರೂ, ಯೋಚನಾ ಲಹರಿ ಹರಿಯಿತು.

ತನ್ನ ಪ್ರಿಯಕರನಾಗಿದ್ದವನು, ತನ್ನ ಪತಿಯಾಗಿದ್ದವನು ತನ್ನನ್ನು ಹಂಗಿಸಿ ಆಡಿದ ಮಾತನ್ನು ತಾಯಿಗೆ ಹೇಗೆ ಹೇಳಿಯಾಳು ? ಅತ್ತೆಯೊಡನೆ ಅವರ ಮಗನ ನಡವಳಿಕೆ ಅವರಿಗೆ ತಿಳಿದಿರಲಿ ಎಂದು ತಿಳಿಸಿದ್ದೇ ಸರಿಯಲ್ಲ. ಈಗ ತಾಯಿಗೆ, ತಂದೆಗೆ, ಕೇಶುಮಾವನಿಗೆ ಯಾರಿಗೂ ಈ ವಿಷಯ ತಿಳಿಯದಿರಲಿ ಎಂದೆನಿಸಿತ್ತು.

ಒಬ್ಬ ಹೆಣ್ಣಿಗೆ ಹೆಣ್ತನಕ್ಕೇ ಕುಂದು ಬರುವಂತಹ ಮಾತುಗಳಿಂದ ಇರಿದು ನೋಯಿಸಿದ್ದಾನಲ್ಲವೇ ? ಅವನಿಗೆ ಬುದ್ಧಿ ಕಲಿಸದೇ ಬಿಡಬಾರದು ಎಂದು ಪದೇ ಪದೇ ಅನ್ನಿಸತೊಡಗಿತ್ತು. ಹಾಗಾದರೆ, ಮೊದಲು ತಾನು ಬಂಜೆಯಲ್ಲ, ತನ್ನಲ್ಲಿ ತಾಯಿಯಾಗುವ ಅರ್ಹತೆಗಳಿವೆ ಎಂದು ಖಚಿತ ಪಡಿಸಿಕೊಳ್ಳಲು ಒಬ್ಬ ಲೇಡಿ ಡಾಕ್ಟರನ್ನು ಕಾಣಬೇಕು. ಆದಷ್ಟು ಬೇಗ ಈ ಕೆಲಸವನ್ನು ಮಾಡಲೇಬೇಕು ಎಂದು ತನ್ನಲ್ಲೇ ನಿರ್ಧರಿಸಿಕೊಂಡಳು. ಆನಂತರ ನಿಧಾನವಾಗಿ ನಿದ್ದೆಯ ಜೊಂಪು ಹತ್ತಿತು. ಬೆಳಗಿನ ಝಾವದಲ್ಲಿ ಎಚ್ಚರವಾದಾಗ, ನೆನಪುಗಳು ಹಿಂತಿರುಗಿದವು.

ಸ್ನಾನ, ತಿಂಡಿಯ ನಂತರ ತಾಯಿಗೆ ಸ್ನೇಹಿತೆಯ ಮನೆಗೆ ಹೋಗಿ ಬರುತ್ತೇನೆಂದು ಹೇಳಿ ಸೀದಾ ಒಬ್ಬ ಲೇಡಿ ಡಾಕ್ಟರ್‌ರ ಬಳಿಗೆ ಬಂದಳು. ಡಾಕ್ಟರು ಕೇಳಿದ ಪ್ರಶ್ನೆಗಳಿಗೆಲ್ಲ ನಿಧಾನವಾಗಿ, ವಿವರವಾಗಿ ಉತ್ತರ ನೀಡಿದಳು.ಕೂಲಂಕಷವಾಗಿ ಚೆಕಪ್ ನಡೆಸಿದ ಡಾಕ್ಟರು, ವಿವಾಹಿತ ಯುವತಿಯೊಬ್ಬಳಿಗೆ ನೀಡಬೇಕಾದ ಅವಶ್ಯಕ ಸಲಹೆಗಳನ್ನು ನೀಡಿದಳು.

ನಾವು ಇಬ್ಬರೂ ಸುಮಾರು ಎರಡು ಮೂರು ತಿಂಗಳಿಂದ ಒಟ್ಟಿಗೇ ವಾಸ ಮಾಡುತ್ತಿಲ್ಲ. ಡೈವೋರ್ಸ್ ಕೇಸು ನಡೆಯುತ್ತಿದೆ ಸಂಕೋಚದಿಂದ ನುಡಿದಳು.

ಡಾಕ್ಟರರಿಗೆ ಕೆಡುಕೆನಿಸಿತು. ಆದರೂ ಪ್ರಶ್ನಿಸಿದಳು.

''ಗರ್ಭಿಣಿಯಾಗಲಿಲ್ಲ ಎನ್ನುವ ಕಾರಣಕ್ಕೆ ಡೈವೋರ್ಸ್‌ಗೆ ಹಾಕಿದ್ದಾರಾ ? ''

''ನನಗೆ ಸರಿಯಾಗಿ ಗೊತ್ತಿಲ್ಲ. ಮದುವೆಗೆ ಮೊದಲೇ ನಾವುಗಳು ಒಮ್ಮೆ ಒಂದಾಗಿದ್ದೆವು. ಆದರೆ ಮದುವೆಯಾದ ನಂತರ ನನ್ನ ಗಂಡನಾದವನು ನನ್ನೊಡನೆ, ಪಶುವಿನಂತೆ ವರ್ತಿಸಿ, ನನ್ನ ಮೇಲೆ ಪ್ರತೀಕಾರ ತೆಗೆದುಕೊಳ್ಳುವವನಂತೆ ಬಲಾತ್ಕಾರ ಮಾಡುತ್ತಿದ್ದ. ನನ್ನ ತಪ್ಪಾದರೂ ಏನು, ಅವನ ಸಮಸ್ಯೆಯಾದರೂ ಏನೂಂತ ನನಗೆ ತಿಳಿಯಲೇ ಇಲ್ಲ. ಆದರೆ .... ಆದರೆ...'' ಮುಂದೆ ಹೇಳಲಾಗದೇ ಉಗುಳು ನುಂಗಿದಳು.

''ಹೇಳಮ್ಮ ಪರವಾಗಿಲ್ಲ....''

''ನನ್ನನ್ನು ಬಂಜೆ ಅಂತ ಹೀಯಾಳಿಸಿ ಅಂದು ಬಿಟ್ಟರು... ಡಾಕ್ಟ್ರೇ''

''ಸಿಲ್ಲಿ ಫೆಲೋ..... ಬಹುಶಃ ಅವನೇ ಇಂಪೋಟೆಂಟ್ ಇರಬೇಕು. ಅದಕ್ಕೆ ಹಾಗಾಡಿದಾನೆ... ಕೇಸ್ ನಿನ್ನ ಕಡೆಗೇ ಆಗುತ್ತದೆ.... ನಾನು ಮೆಡಿಕಲ್ ಸರ್ಟಿಫಿಕೆಟ್ ಕೊಡ್ತೀನಿ. ನೀನೇನೂ ವರಿ ಮಾಡ್ಕೋ ಬೇಡ.''

''ಕೋರ್ಟಿನಲ್ಲಿ ಎಲ್ಲರ ಎದುರಿಗೆ ಇದನ್ನೆಲ್ಲಾ ಆಡೋದು ಹೇಗೆ ?''

''ಆಡಲೇ ಬೇಕೂಂತ ಏನಿಲ್ಲ ಲಾಯರ್ರು ಕೇಳುವ ಎಲ್ಲ ಪ್ರಶ್ನೆಗಳಿಗೂ ಸರಿಯಾಗಿ ಉತ್ತರ ಕೊಡಬೇಕಾಗುತ್ತದೆ ಈಗೆಲ್ಲಾ ಡೈವೋರ್ಸ್ ಬಹಳ ಕಾಮನ್ ಆಗಿ ಹೋಗಿದೆ. ಹಾಗೇ ಬಹಳ ಸುಲಭವಾಗಿದೆ. ಆದ್ದರಿಂದ ನೀನೇನೂ ಯೋಚಿಸಲೇ ಬೇಡ.''

''ಡೈವೋರ್ಸ್ ಸಿಗದಿದ್ದರೂ ನನಗೆ ಏನೂ ಚಿಂತೆ ಇಲ್ಲ ಡಾಕ್ಟ್ರೇ ... ನಾನಂತೂ ಮತ್ತೆ ಅವನೊಂದಿಗೆ ಜೀವನ ನಡೆಸುವುದು ಸುಳ್ಳು. ಅವನು ಹೇಳಿದಂತೆ ನನಗೆ

ತಾಯಿಯಾಗುವ ಅರ್ಹತೆ ಇದೆಯೋ ಇಲ್ಲವೋ ಎಂದು ಖಚಿತ ಪಡಿಸಿ ಕೊಳ್ಳುವುದಕ್ಕಾಗಿ ಬಂದೆ ಈಗ ನನಗೆ ಯಾವ ಪರಿಯೂ ಇಲ್ಲ. ನಾನು ಅಪೂರ್ಣ ಅಲ್ಲ ಅಂತ ಖಚಿತವಾಯ್ತಲ್ಲ. ನನಗೆ ಅಷ್ಟೇ ಸಾಕು....."

"ಒಂದು ಹೆಣ್ಣು ಪರಿಪೂರ್ಣತೆಯನ್ನು ಪಡೆಯುವುದು ತಾಯಿಯಾದಾಗ ಮಾತ್ರ. ತಾಯಿಯಾಗುವ ಸಾಧ್ಯತೆ ಹೆಣ್ಣಿಗೆ ಮಾತ್ರ ಮೀಸಲು. ಇದು ದೇವರು ಕೊಟ್ಟ ವರ. ಆದರೆ ಇದು ಕೈಗೂಡಬೇಕಾದರೆ ಪುರುಷನ ಸಾನ್ನಿಧ್ಯ ಅಷ್ಟೇ ಅತ್ಯಗತ್ಯ ಅಲ್ಲವೇ? ಆದುದರಿಂದ ನನ್ನದೊಂದು ಸಲಹೆ, ಡೈವೋರ್ಸ್‌ನ ನಂತರ ಮತ್ತೆ ಮದುವೆಯಾಗು... ನಿನ್ನದೇ ಸ್ವಂತ ಮಕ್ಕಳಿಗೆ ತಾಯಿಯಾಗು. ಆಗ ನಿನ್ನ ಜೀವನ ಸಾರ್ಥಕವಾಗುತ್ತದೆ. ನಿನ್ನನ್ನು ಬಂಜೆ ಎಂದು ಹೀಯಾಳಿಸಿದ ಈ ವ್ಯಕ್ತಿಗೂ ತಿಳಿಯಲಿ, ನಿನ್ನಲ್ಲಿ ಯಾವ ನ್ಯೂನತೆಯೂ ಇಲ್ಲ ಅಂತ. "

"ತನ್ನಲ್ಲಿ ಯಾವ ನ್ಯೂನತೆಯೂ ಇಲ್ಲ. ತಾನು ಪರಿಪೂರ್ಣ ಹೆಣ್ಣಾಗಬೇಕು." ಎಂಬ ಅನಿಸಿಕೆಯೇ ಅವಳಲ್ಲಿ ಒಂದು ತರಹದ ಹಿತವಾದ ಭಾವನೆಯನ್ನು ಮೂಡಿಸಿತು. ಮಂದಹಾಸದಿಂದ ಡಾಕ್ಟರಿಗೆ ಕೈ ಮುಗಿದು, ಥ್ಯಾಂಕ್ಸ್ ಹೇಳಿ ಫೀಸನ್ನು ಕೊಟ್ಟು ಹೊರಬಂದಳು. ಒಂದು ಮಹತ್ತರವಾದ ಕಾರ್ಯವನ್ನು ಮಾಡಿದಷ್ಟು ಹೆಮ್ಮೆ ಉಂಟಾಗಿತ್ತು

ಪೂರ್ಣಿಮಾಳ ವಿರೋಧ ಏನೂ ಇರಲಿಲ್ಲವಾದುದರಿಂದ ಡೈವೋರ್ಸ್ ಸಿಗುವುದು ಕಷ್ಟವಾಗಲಿಲ್ಲ. ಈಗಾಗಲೇ ಚಂದ್ರ ಲಾಯರ್ರ ಫೀಸು ಅಂತ ಸಾಕಷ್ಟು ಹಣ ಖರ್ಚು ಮಾಡಿದ್ದ. ಕೋರ್ಟು, ಲಾಯರ್ರು ಅಂತ ಓಡಾಡಿ ಸ್ವಲ್ಪ ಮಟ್ಟಿಗೆ ಬೇಸರವೂ ಆಗಿತ್ತು. ಇದಕ್ಕೆಲ್ಲ ಪೂರ್ಣಿಮಾಳೇ ಕಾರಣ ಎಂದು ಅವಳನ್ನು ಬೈದು ಕೊಳ್ಳುತ್ತಿದ್ದ. ಡೈವೋರ್ಸ್ ಸಿಗದೇ, ತಾನು ಕನಕಳನ್ನು ಮದುವೆಯಾಗುವಂತಿಲ್ಲ. ಸಲುಗೆಯಿದ್ದರೂ, ಅವಳು ಒಮ್ಮೆಯೂ ಅವನನ್ನು ಹತ್ತಿರ ಸೇರಿಸಿರಲಿಲ್ಲ. ಇದೂ ಅವನ ಅಸಹನೆಯನ್ನು ಹೆಚ್ಚಿಸುತ್ತಿತ್ತು. ಜೊತೆಗೆ ತಪ್ಪದೇ ಮಾತ್ರೆಗಳನ್ನು ನುಂಗಬೇಕಾದುದು ಅವನನ್ನು ರೇಗಿಸುತ್ತಿತ್ತು. ತಾನೇಕೆ ಈ ಕನಕಳ ಮಾತು ನಂಬಿ ಡಾಕ್ಟರರ ಬಳಿಗೆ ಹೋದೆ ಎಂದೇ ಚಿಂತಿಸುತ್ತಿದ್ದ. ಅದರಿಂದ ತನಗೆ ಏನೂ ಲಾಭವಾಗಿಲ್ಲವೆಂದೇ ಅವನ ಅನಿಸಿಕೆ.

ಒಮ್ಮೊಮ್ಮೆ ಕನಕಳಿಗೆ, ಚಂದ್ರನ ಸ್ನೇಹ ಬೇಡವೆಂದು ಅನ್ನಿಸುತ್ತಿತ್ತು. ತಾನೇಕೆ ಇವನಿಗೆ ಒಲಿದೆ ? ಎಂದು ಅಚ್ಚರಿ ಪಟ್ಟುಕೊಳ್ಳುತ್ತಿದ್ದಳು ಇವನಲ್ಲಿ ಆಕರ್ಷಕ ರೂಪವಿಲ್ಲ, ಮೈ ಕಟ್ಟಿಲ್ಲ, ಶ್ರೀಮಂತನಲ್ಲ, ವಿವೇಕಿ ಅಲ್ಲ. ತಾನೇಕೆ ಇವನನ್ನು ಸಹಿಕೊಳ್ಳುತ್ತಿದ್ದೇನೆ ಎಂದು ಅವಳಿಗೇ ಅರ್ಥವಾಗಿರಲಿಲ್ಲ, ಪೂರ್ಣಿಮಾ ಹೇಗೆ ಅನುಸರಿಸಿಕೊಂಡಿರ ಬಹುದು ಅಂತ ಅಂದುಕೊಂಡಾಗ, ಅವಳನ್ನೊಮ್ಮೆ ನೋಡಬೇಕು, ಅವಳೊಡನೆ ಮಾತನಾಡಬೇಕು ಎಂದೆನಿಸುತ್ತಿತ್ತು. ಆದರೆ ಈ ಮನುಷ್ಯನಿಗೆ ತಿಳಿದರೆ ಏನನ್ನುವನೋ ಎಂಬ ದಿಗಿಲು ! ಕೋರ್ಟಿಗೆ ಎಂದೂ ಅವನ ಜೊತೆ ಹೋಗಿರಲಿಲ್ಲ. ಕೋರ್ಟನಲ್ಲಿ ಏನು ವಾದ ನಡೆಯಿತು ಎಂದು ತಾನಾಗಿಯೇ ಕೇಳುತ್ತಿರಲಿಲ್ಲ. ಅವನೇ ಒಮ್ಮೊಮ್ಮೆ ಪ್ರತಿಯೊಂದು ಮಾತನ್ನು ಹೇಳುತ್ತಿದ್ದ.

ಕನಕಳ ತಂದೆ, ಅವಳು ಚಿಕ್ಕವಳಿರುವಾಗಲೇ ತೀರಿಹೋಗಿದ್ದರು. ತಾಯಿಯ

ತಂದೆಯ ಮನೆಯುವರು ಶ್ರೀಮಂತರು ಹಾಗೂ ಒಳ್ಳೆಯುವರಾದುದರಿಂದ ಇವರ ಸಂಸಾರವನ್ನು ನೋಡಿಕೊಳ್ಳುತ್ತಿದ್ದರು. ಇವಳ ಸೋದರ ಮಾವನಿಗೆ ಇವಳನ್ನು ಮದುವೆಯಾಗುವ ಆಸೆ ಇದ್ದಿತು. ಆದರೆ ಕನಕಳೇ ಒಪ್ಪಿರಲಿಲ್ಲ. ''ನೀನು ನನ್ನ ಸಹೋದರನಂತೆ... ನಿನ್ನಲ್ಲಿ ನನಗೆ ಬೇರೆ ಭಾವನೆಗಳು ಬರಲು ಸಾಧ್ಯವಿಲ್ಲ. ದಯವಿಟ್ಟು ಕ್ಷಮಿಸು'' ಎಂದಿದ್ದಳು. ಆ ಸೋದರ ಮಾವನೂ ಮದುವೆಯಾಗದೇ ಹಾಗೇ ಉಳಿದುಕೊಂಡಿದ್ದ. ಈಗ ಮಾವನಿಗೆ ತಿಳಿದರೆ ಏನನ್ನಬಹುದು ಎಂಬ ಅಂಜಿಕೆ ಬೇರೆ. ''ತನ್ನ ಪಾಡಿಗೆ ತಾನು ಹಾಯಾಗಿದ್ದೆ. ಈ ಚಂದ್ರನೇಕೆ ಬಂದನೋ'' ಅಂತ ಅನ್ನಿಸುತ್ತಿತ್ತು.

ಬ್ಯಾಂಕಿನ ಕ್ಲರ್ಕ್ ಕೆಲಸಕ್ಕೆ ಪೂರ್ಣಿಮಾ ಆಯ್ಕೆಯಾಗಿದ್ದಳು. ಆರ್ಡರ್ ಲೆಟರ್‌ನ್ನು ನೋಡಿ ಪೂರ್ಣಿಮಾ ಕುಣಿದಾಡಿಬಿಟ್ಟಳು. ''ಇನ್ನು ನನಗೆ ಯಾವ ಚಿಂತೆ ಇಲ್ಲ. ನನ್ನ ಪಾಡಿಗೆ ನಾನು ಹಾಯಾಗಿರಬಹುದು'' ಎಂದುಕೊಂಡು ತಾನು ಸೆಲೆಕ್ಟ್ ಆದುದು ದೇವರ ಕೃಪೆ ಎಂದುಕೊಂಡು ದೇವರಿಗೆ ಮನಸಾರೆ ವಂದಿಸಿದಳು.

''ಅಜ್ಜೀ ನಾನು ದೇವಸ್ಥಾನಕ್ಕೆ ಹೋಗಿ ಬರ್ತಿನಿ'' ಎಂದು ಹೊರಟಳು. ಪಕ್ಕದ ಮನೆಯಲ್ಲೇ ಇರುವ ಅತ್ತೆಗೆ ಈ ವಿಷಯವನ್ನು ತಿಳಿಸಬೇಕು, ಅವರಿಗೆ ಖಂಡಿತಾ ಸಂತೋಷವಾಗುತ್ತದೆ. ಅವರ ಸಹಕಾರ, ಸಹಾಯ ಇಲ್ಲದೇ ಇದ್ದಿದ್ದರೆ ತಾನು ಬ್ಯಾಂಕ್ ಎಕ್ಸಾಮ್ ತೆಗೆದುಕೊಳ್ಳಲು ಆಗುತ್ತಿತ್ತೋ ಇಲ್ಲವೋ ಎಂದುಕೊಂಡು, ಮೊದಲು ಅಲ್ಲಿಗೆ ಬಂದಳು. ಅತ್ತೆಯ ಕಾಲಿಗೆ ನಮಸ್ಕರಿಸಿ ಆಶೀರ್ವಾದ ಪಡೆದಳು. ಗೌರಮ್ಮನ ಕಣ್ಣುಗಳಿಂದ ಹನಿಗಳು ಉದುರಿದವು.

''ದೇವರು ನಿನ್ನ ಭಾಗಕ್ಕೆ ಖಂಡಿತಾ ಇದಾನೆ ಪೂರ್ಣಿಮಾ. ನಿನ್ನ ಕೆಲಸದಲ್ಲಿ ನಿನಗೆ ಬೇಗ ಬೇಗ ಭಡ್ತಿ ಸಿಗಲಿ.. ಈಗಲಾದ್ರೂ ನಿನ್ನ ಗಂಡನಿಗೆ ಅವನ ತಪ್ಪಿನ ಅರಿವಾಗಿ, ಅವನು ನಿನ್ನ ಬಳಿಗೆ ವಾಪಸ್ಸು ಬರಲಿ ಅಂತ ನನ್ನ ಮನಸ್ಸು ಹಾರೈಸುತ್ತಿದೆ. ಅವನು ಬಂದು ಕರೆದ್ರೆ ನೀನು ಹೋಗ್ತೀಯ ತಾನೇ....'' ತಾಯಿಯ ಈ ವಿಚಿತ್ರ ಆಸೆಗೆ ಪೂರ್ಣಿಮಾ ಉತ್ತರಿಸಲಿಲ್ಲ.

''ಬೇಜಾರು ಮಾಡ್ಕೋಬೇಡಮ್ಮ... ಅವನು ಎಷ್ಟಾಗಲಿ ನನ್ನ ಮಗ. ಅವನೂ ಸುಖವಾಗಿರಲಿ ಅಂತ ನನ್ನ ಮನಸ್ಸು ಹಾರೈಸುವುದು ಸಹಜತಾನೇ ? ''

''ಈ ಮಾತುಗಳು ಈಗ ಏಕೆ ? ಬಹುಶಃ ನಾವಿಬ್ಬರೂ ಮತ್ತೆ ಒಂದಾಗಿ ಬಾಳುವುದು ಸಾಧ್ಯವಿಲ್ಲ, ಹಾಗಿದ್ದಿದ್ದರೆ, ನಾವಿಬ್ಬರೂ ಹೀಗೆ ದೂರವಾಗುತ್ತಲೇ ಇರಲಿಲ್ಲ. ನಾನು ಸದ್ಯದಲ್ಲೇ ಈ ಊರಿನಿಂದ ಹೊರಟು ಹೋಗುತ್ತೇನೆ. ಮತ್ತೆ ಬರುವುದು ಯಾವಾಗಲೋ...? '' ಅವಳ ಕಣ್ಣುಗಳೂ ಹನಿಗಳನ್ನು ಉದುರಿಸಿದ್ದವು.

''ನೀನು ಧೈರ್ಯವಂತೆ ಪೂರ್ಣಿಮಾ. ನಿನ್ನ ಧೈರ್ಯವೇ ನಿನ್ನನ್ನು ಕಾಪಾಡುತ್ತದೆ. ಹೋಗಿ ಬಾಮ್ಮಾ... ನಿನಗೆ ಒಳ್ಳೆಯದಾಗಲಿ ಈ ಬಡ ಅತ್ತೇನ ಮಾತ್ರ ಮರೆಯಬೇಡ.''

''ಛೇ, ಬಿಡ್ತು ಅನ್ನಿ. ನಿಮ್ಮನ್ನು ಈ ಜನ್ಮದಲ್ಲಿ ಮರೆಯೋಕೆ ಆಗುತ್ತಾ ಅತ್ತೆ, ನಿಮ್ಮ ಸಹಕಾರ, ಆಶೀರ್ವಾದ ನನಗೆ ಇಲ್ಲದೇ ಇದ್ದಿದ್ದರೆ ನಾನು ಎಂದೋ ಆತ್ಮಹತ್ಯೆ ಮಾಡಿಕೊಂಡಿರುತ್ತಿದ್ದೆ.''

''ಆತ್ಮ ಹತ್ಯೆ ಹೇಡಿಗಳ ಲಕ್ಷಣ. ನೀನು ಅಂಥವಳಲ್ಲ ಅಂತ ನನಗೆ ಚೆನ್ನಾಗಿ ಗೊತ್ತು. ಅದಿರಲಿ ನನ್ನದೊಂದು ಮಾತನ್ನು ನೀನು ನಡೆಸಿಕೊಡಬೇಕು.'' ಆಕೆ ಕೋರಿಕೆಯ ಧ್ವನಿಯಲ್ಲಿ ಕೇಳಿದಾಗ ಇವಳ ಎದೆ ಧಸಕ್ಕೆಂದಿತು. ಏನು ಕೇಳಿಬಿಡುವರೋ ಎಂದು ತವಕಗೊಂಡಳು.

''ನೀನು ಮತ್ತೆ ಮದುವೆಯಾಗಬೇಕು. ಹೀಗೆ ಒಂಟಿ ಜೀವನವನ್ನು ಮಾತ್ರ ನಡೆಸಬಾರದು.'' ಪೂರ್ಣಿಮಾ ಮೌನಿಯಾದಳು.

''ಅವನು ಗಂಡು ಹುಡುಗ. ಅವನು ಹೇಗೇ ಇದ್ದರೂ, ಸಮಾಜ ಅವನನ್ನು ದೂಷಿಸುವುದಿಲ್ಲ. ಹೆಣ್ಣನ್ನು ಕೆಕ್ಕರಿಸಿ ನೋಡುತ್ತಾರೆ. ಅವನು ಮಾಡಿದ ತಪ್ಪಿಗೆ ನೀನೇಕೆ ಬಲಿಯಾಗಬೇಕು ? ನೀನು ಮತ್ತೆ ಮದುವೆಯಾಗಿ, ಚೊಕ್ಕವಾಗಿ ಸಂಸಾರ ನಡೆಸಬೇಕು. ನಾಲ್ಕು ಮಕ್ಕಳ ತಾಯಿಯಾಗಿ ಹೆಮ್ಮೆಯಿಂದ ಬಾಳಬೇಕು. ಇದೇ ನನ್ನ ಆಸೆ.....'' ಆಕೆಯ ದನಿ ಕೆಟ್ಟಿತು.

''ಮಗ ಎಷ್ಟೇ ಕೆಟ್ಟವನಾದ್ರೂ ತಾಯಿ ಮಗನ ಪರವನ್ನು ವಹಿಸಿ ಸೊಸೆಯನ್ನು ದೂಷಿಸುವುದು ಸಹಜ. ಆದರೆ ಇಲ್ಲಿ ? ಈ ತಾಯಿಯ ಮಾತುಗಳು ವಿಚಿತ್ರ ವೆನಿಸುತ್ತಿದೆಯಲ್ಲ.... ಈ ಮೊದಲು ತಮ್ಮಿಬ್ಬರ ವಿವಾಹಕ್ಕೆ ಈಕೆ ವಿರೋಧ ವ್ಯಕ್ತಪಡಿಸಿದ್ದಳು ಎನ್ನುವುದು ತಿಳಿಯದ್ದೇನಲ್ಲ. ಆದರೆ ಈಗ ? ಮಗನಿಗಿಂತ, ಸೊಸೆಯೇ ಒಳ್ಳೆಯವಳು ಎಂಬ ನಿಜಾಂಶದ ಅರಿವಾಗಿರಬಹುದೇ ?.... '' ಏನುತ್ತರಿಸಬೇಕೆಂದು ತಿಳಿಯದೇ ಬಲಗಾಲು ಹೆಬ್ಬೆಟ್ಟಿನಿಂದ ನೆಲವನ್ನು ಕೆರೆಯತೊಡಗಿದಳು.

''ಏನೇನೋ ಆಡಿ, ನಿನ್ನ ಮನಸ್ಸಿಗೆ ಬೇಜಾರು ಮಾಡಿದೀನೇನೋ... ಹೋಗಲಿ, ನೀನು ಹೊರಡಮ್ಮ. ದೇವಸ್ಥಾನದ ಬಾಗಿಲು ಹಾಕಿ ಬಿಟ್ಟೇತು. .. ದೇವರು ಎಲ್ಲಾ ನೋಡ್ತಿದ್ದಾನೆ. ಅವನು ನಡೆಸಿದ ಹಾಗಾಗುತ್ತೆ'' ಎಂದು ಅತ್ತೆ ಅನುಮತಿ ಕೊಟ್ಟಾಗ ಪೂರ್ಣಿಮಾ ನಿರಾಳಗೊಂಡು ಹೊರಗೆ ಬಂದಳು. ಇಲ್ಲಿಗೆ ಇವಳ ಜೀವನದ ಒಂದು ಅಧ್ಯಾಯ ಮುಗಿದಿತ್ತು. ಮುಂದಿನ ಅಧ್ಯಾಯ ಪ್ರಾರಂಭವಾಗಲಿತ್ತು.

# ಭಾಗ -2

ಮೊದಲು ಟ್ರೈನಿಂಗ್ ಕೋರ್ಸ್‌ಗೆ ಸೇರಬೇಕಾಗಿತ್ತು. ಹಾಗಾಗಿ ಅವಳು ಬೆಂಗಳೂರಿಗೆ ಹೋಗಲೇ ಬೇಕಾಗಿತ್ತು. ಅವಳು ಅಲ್ಲಿ ಎಲ್ಲಿ ಇರುವುದೆಂದು ಮೊದಲಿಗೆ ಜಿಜ್ಞಾಸೆಯಾದರೂ ಕಡೆಗೆ ಇತ್ಯರ್ಥವಾಗಿತ್ತು. ಈಗೇನು ? ಬೇಕಾದಷ್ಟು ಪೇಯಿಂಗ್ ಗೆಸ್ಟ್ ರೂಮುಗಳು ಬಾಡಿಗೆಗೆ ಸಿಗುತ್ತವೆ. ಓದುವ ಹುಡುಗಿಯರು, ಕೆಲಸಕ್ಕೆ ಹೋಗುವ ಹೆಂಗಸರಿಗಾಗಿ ಹಾಸ್ಟೆಲ್‌ಗಳಿರುತ್ತವೆ. ಏನೂ ತೊಂದರೆಯಾಗುಲ್ಲ ಎಂದು ಸ್ನೇಹಿತೆಯೊಬ್ಬಳು ತಿಳಿಸಿದ್ದಳು. ಅವಳ ಸಹಾಯದಿಂದ ಒಬ್ಬರ ಮನೆಯಲ್ಲಿ ಪೇಯಿಂಗ್ ಗೆಸ್ಟ್ ಆಗಿ ಇರಲು ಅನುಕೂಲ ಒದಗಿತ್ತು. ಕೇಶವ ಮಾವನೊಂದಿಗೆ ಅಲ್ಲಿಗೆ ಬಂದಿದ್ದಳು. ಬೆಂಗಳೂರು ಅವಳಿಗೆ ಹೊಸದೇನಲ್ಲ. ಆದರೆ ನೆನಪುಗಳು ಮಾತ್ರ ಸವಿಯಾಗಿರಲಿಲ್ಲ. ಆದರೆ ಆಗಿನ ಪರಿಸ್ಥಿತಿಯೇ ಬೇರೆ, ಈಗಿನ ಪರಿಸ್ಥಿತಿಯೇ ಬೇರೆ.

'ಪೇಯಿಂಗ್ ಗೆಸ್ಟ್' ನಡೆಸುತ್ತಿದ್ದ ಮನೆಯ ಒಡತಿಯೂ ಕನ್ನಡದವಳೇ. ಸೀತಮ್ಮ ಗಂಡನಿಗೆ ಆರೋಗ್ಯ ಸರಿ ಇರಲಿಲ್ಲ, ಪೆರಾಲಿಸಿಸ್ ಸ್ಟ್ರೋಕ್‌ನಿಂದಾಗಿ ಹಾಸಿಗೆ ಹಿಡಿದು ಮಲಗಿದ್ದ. ಮಗ ವಿದ್ಯಾವಂತನಾದರೂ ನಿರುದ್ಯೋಗಿಯಾಗಿದ್ದ. ಮಗಳು ಬೇರೆ ಊರಿನಲ್ಲಿ ತನ್ನ ಪತಿಯೊಂದಿಗೆ ವಾಸವಾಗಿದ್ದಳು. ಈಕೆಗೆ ಮುಖ್ಯವಾದ ಆದಾಯ ಇದೊಂದೇ. ಊಟ, ತಿಂಡಿ, ವಸತಿ ಇತ್ಯಾದಿಗಳನ್ನು ಕೆಲಸಕ್ಕೆ ಹೋಗುವ ಹುಡುಗಿಯರಿಗೆ, ಸಮಯಕ್ಕೆ ಸರಿಯಾಗಿ ಒದಗಿಸಿ ಕೊಡುತ್ತಿದ್ದಳು. ಯಾವ ತಕರಾರೂ ಇರಲಿಲ್ಲ. ಸ್ವಲ್ಪ ಖರ್ಚು ಹೆಚ್ಚು ಎನಿಸಿದರೂ ಎಲ್ಲಾ ಅನುಕೂಲವೂ ಇದ್ದುದರಿಂದ ಯಾರೂ ಚಕಾರ ಎತ್ತುವಂತಿರಲಿಲ್ಲ. ಮನೆಯ ಹೊರಗಿನ ಕೆಲಸ್ಕೆ ಕೆಲಸದವಳಿದ್ದರೂ, ಒಮ್ಮೊಮ್ಮೆ ಅವಳು ಕೈಕೊಡುತ್ತಿದ್ದಳು. ಆಗ ಈ ಪೇಯಿಂಗ್ ಗೆಸ್ಟ್ ಆಂಟಿಯ ಮಗ ತಾಯಿಗೆ ಕೆಲಸಗಳಲ್ಲಿ ಸಹಾಯ ಮಾಡುತ್ತಿದ್ದ. ಉಳಿದಂತೆ ಅವನ ಕೆಲಸವೇನಿದ್ದರೂ ಕತೆ ಪುಸ್ತಕಗಳನ್ನೋದುವುದು, ಟಿ.ವಿ.ಯ ಛಾನೆಲ್‌ಗಳನ್ನು ಬದಲಾಯಿಸುತ್ತಾ ತನಗಿಷ್ಟವಾದ ಕಾರ್ಯಕ್ರಮಗಳನ್ನು ನೋಡುವುದು. ಕುರುಕುಲು ತಿಂಡಿಗಳನ್ನು ತಿನ್ನುತ್ತಾ ಕಾಲ ಕಳೆಯುತ್ತಿದ್ದ. ಕೆಲಸಕ್ಕಾಗಿ ಅರ್ಜಿಹಾಕಿ, ಇಂಟರ್‌ವ್ಯೂಗಳಲ್ಲಿ ಫೇಲಾಗಿ, ಈಗ ಅವನು ಕೆಲಸ ಹುಡುಕುವುದನ್ನೇ ಬಿಟ್ಟು ಬಿಟ್ಟಿದ್ದ. ಯಾವುದೇ ಬಿಸಿನೆಸ್ ಮಾಡಲು ಬಂಡವಾಳವಿರಲಿಲ್ಲ, ಅಂತಹ ಚತುರನೂ ಅಲ್ಲ, ಈ ದಿವಾಕರ.

ಒಮ್ಮೆ ಸೀತಮ್ಮನಿಗೆ ಹುಶಾರಿಲ್ಲದೇ ಮಲಗಿದ್ದಳು. ಆಗ ಈ ದಿವಾಕರನೇ ಅಡಿಗೆಯವನ ಪಾತ್ರಧಾರಿಯಾಗಿ, ಹುಡುಗಿಯರಿಗೆ ತಿಂಡಿ ಕಾಫಿ ಹಾಗೂ ಊಟದ

ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದ. ಕೆಲಸಕ್ಕೆ ಹೋಗುವ ಆತುರದಲ್ಲಿದ್ದ ಹುಡುಗಿಯರಿಗೆ ಯಾವ ಅನುಮಾನವೂ ಬಂದಿರಲಿಲ್ಲ.

ರಾತ್ರಿಯ ಹೊತ್ತು ಎಲ್ಲರೂ ಊಟಕ್ಕೆ ಒಟ್ಟಿಗೆ ಕುಳಿತುಕೊಳ್ಳುವ ಪದ್ಧತಿ. ದಿವಾಕರನೇ ಎಲ್ಲರಿಗೂ ತಟ್ಟೆ ಬಟ್ಟಲುಗಳನ್ನಿಟ್ಟು ಊಟಕ್ಕೆ ಕರೆದಾಗ ಎಲ್ಲರಿಗೂ ಅಚ್ಚರಿ. ''ಆಂಟಿ ಇಲ್ವಾ ... ಎಲ್ಲಿಗೆ ಹೋಗಿದಾರೆ ?'' ವಿನುತ ಕೇಳಿದಳು.

''ಅಮ್ಮಂಗೆ ಹುಶಾರಿಲ್ಲ, ಮಲಗಿದಾರೆ...'' ದಿವಾಕರ ನುಡಿದಾಗ ಎಲ್ಲರೂ ಮುಖ ಮುಖ ನೋಡಿಕೊಂಡರು. ಅಡಿಗೆ ಹೇಗಿರುತ್ತೋ, ಹೋಟೆಲಿನಿಂದ ತರಿಸಿರಬಹುದೇ ? ಮೊದಲೇ ತಿಳಿದಿದ್ದರೆ ಹೋಟೆಲ್ಲಿಗೆ ಹೋಗಿ ಮಜವಾಗಿ ಏನು ಬೇಕಾಗಿತ್ತೋ ಅದನ್ನೇ ತರಿಸಿಕೊಂಡು ತಿನ್ನಬಹುದಾಗಿತ್ತು ಎಂದೆನಿಸಿತ್ತು ಸುಜಯಳಿಗೆ.

''ಹಾಗಾದ್ರೆ ಅಡಿಗೆ ಯಾರು ಮಾಡಿದರು ?...'' ವಿನುತ ಕೇಳಿದಳು.

''ನಾನೇ.... ನನಗೂ ಅಡಿಗೆ ಮಾಡಕ್ಕೆ ಬರುತ್ತೆ ಕಣ್ರೀ.... '' ದಿವಾಕರ ಮುಗುಳ್ನಗುತ್ತಾ ನುಡಿದ.

''ಓಹೊಹೋ... ನಳಮಹಾಹಾಜ... ನಳಪಾಕನ ಭಟ್ಟ ಇಳಿಸಿದ್ದಾನೆ '' ಸೌಜನ್ಯ ಗೊಣಗಿದಳು.

''ಪ್ಲೀಸ್ ಎಲ್ಲರೂ ಕೂತ್ಕೊಳ್ಳ... ನಾನು ಸರ್ವ್ ಮಾಡ್ತೀನಿ'' ಎಂದ ವಿನಯದಿಂದ.

''ಬೇಡ... ನಾವೇ ಬಡಿಸ್ಕೋತೀವಿ... ನೀವು ಹೋಗಿ '' ಪುಷ್ಪಾ ನುಡಿದಳು.

''ಓ.ಕೇ.... ನಿಮ್ಮಿಷ್ಟ, ನಿಮಗೆ ಏನಾದ್ರೂ ಬೇಕಿದ್ರೆ ಕರೀರಿ... ನಾನು ಇಲ್ಲೇ ಕೂತಿರ್ತೀನಿ'' ಎನ್ನುತ್ತಾ ಟಿ.ವಿ.ಯ ಮುಂದೆ ಕುಳಿತ. ಪೂರ್ಣಿಮಾ ಅವನನ್ನೇ ವಿಸ್ಮಯದಿಂದ ನೋಡಿದಳು. ಈ ಮೊದಲು ಅವನನ್ನು ನೋಡಿದ್ದರೂ, ಇಂದಿನ ಈ ನೋಟಕ್ಕೂ ವ್ಯತ್ಯಾಸವಿತ್ತು. ಸೋಮಾರಿಯಂತೆ ಕಾಲ ಕಳೆಯುತ್ತಿದ್ದಾನೆಂದೇ ಭಾವಿಸಿದ್ದಳು. ಆದರೆ ಸಮಯ ಬಂದಾಗ ಕಾರ್ಯದಕ್ಷನೂ ಆಗಿರುತ್ತಾನೆಂದು ಅರಿವಾಗಿತ್ತು. ಅಡಿಗೆ ರುಚಿಯಾಗಿಯೇ ಇತ್ತು. ಆಂಟಿ ಎದುರಿಗೆ ಇಲ್ಲದಿದುದರಿಂದ ಎಲ್ಲರೂ ಹರಟುತ್ತಾ ಮಾಡಿದುದನ್ನೆಲ್ಲಾ ಅಚ್ಚುಕಟ್ಟಾಗಿ ತಿಂದು ಮುಗಿಸಿದ್ದರು. ಅವರುಗಳು ಎದ್ದು ಮಹಡಿಯ ಮೇಲಿನ ತಮ್ಮ ರೂಮುಗಳಿಗೆ ಹೊರಟಾಗ ದಿವಾಕರ ಕಿರುಚಿದ್ದ.

''ಏನ್ರಿ ಇದು ? ನನಗೆ ಒಂದು ಚೂರು ಉಳಿಸಿಲ್ಲವಲ್ಲ... ಎಲ್ಲಾ ಸಪಾಚಟ್ಟಾಗಿ ಖಾಲಿ ಮಾಡಿದೀರಿ ? '' ಎಲ್ಲರೂ ನಿಂತೂ ಅವನನ್ನೇ ನೋಡಿದರು. ಒಂದು ಕ್ಷಣ ಅಷ್ಟೇ. ಎಲ್ಲರೂ ಗೊಳ್ಳನೆ ನಕ್ಕಿದ್ದರು.

''ಯಾಕ್ರೀ ನಗ್ತೀರಾ ? ನಾನೀಗ ಉಪವಾಸ ಮಲಗಬೇಕಾ ?'' ಕೇಳಿದ್ದ.

''ಸಾರಿ, ಸಾರಿ... ನಮಗೆ ಗೊತ್ತಾಗಲಿಲ್ಲ, ಮಾತಾಡ್ತಾ ಮಾತಾಡ್ತಾ ಪಾತ್ರೆ ಖಾಲಿಯಾಗಿದ್ದೇ ಗೊತ್ತಾಗಲಿಲ್ಲ'' ಪುಷ್ಪಾ ನುಡಿದಳು.

''ನಿಮಗೆ ಅಡಿಗೆ ಮಾಡೋಕೆ ಬರುತ್ತಲ್ಲಾ... ನಿಮಗೆ ಏನು ಬೇಕೋ ಅದನ್ನು

ಮಾಡ್ಕೊಂಡು ತಿನ್ನಿ.... ಈಗಿನ್ನು ಹತ್ತು ಗಂಟೆ ಅಷ್ಟೇ... '' ಸುಜಯ ತಮಾಷೆ ನುಡಿದಳು. ಪೂರ್ಣಿಮ ಅವಳ ಮೊಣಕೈ ತಿವಿದಳು.

''ತಪ್ಪು ನಮ್ಮದು ಸುಜಯಾ... ಹಿಂದೆ ಮುಂದೆ ಯೋಚಿಸದೆ ಎಲ್ಲಾ ತಿಂದು ಮುಗಿಸಿದೆವು. ಪಾಪ... ಈಗ ಏನು ಗತಿ ಇವರಿಗೆ ?''

''ಅಷ್ಟು ಪಾಪ ಅಂತ ಅನ್ನಿಸಿದರೆ ನೀನೇ ಏನಾದ್ರೂ ಮಾಡಿ ಬಡಿಸಿ ಬಿಟ್ಟು ಬಾಮ್ಮಾ.... '' ಸೌಜನ್ಯ ನುಡಿದಾಗ, ಪೂರ್ಣಿಮಾ ಮೆಟ್ಟಿಲಿಳಿದಳು.

''ನಮ್ಮಿಂದ, ಇವರು ಉಪವಾಸ ಮಲಗಬಾರದು... ಅವರ ತಾಯಿಗೆ ಹುಶಾರಿದ್ದಿದ್ದರೆ, ಮಗನನ್ನು ಉಪವಾಸವಾಗಿರಲು ಖಂಡಿತಾ ಬಿಡುತ್ತಿರಲಿಲ್ಲ. ನೀವು ಯಾರಾದ್ರೂ ನನ್ನ ಸಹಾಯಕ್ಕೆ ಬರೋದಾದ್ರೆ ಬನ್ನಿ... ಇಲ್ಲದಿದ್ದರೆ ನಾನೇ ಅನ್ನ ಮಾಡಿ ಬಡಿಸ್ತೀನಿ. ಎಷ್ಟು ಹೊತ್ತಿನ ಕೆಲಸ ಅದು....'' ಎನ್ನುತ್ತಾ ಅಡಿಗೆ ಮನೆಯ ಕಡೆಕಾಲು ಹಾಕಿದಾಗ ದಿವಾಕರ ತಡೆದ.

''ಹೋಗಲಿ ಬಿಡಿ ಮಿಸ್. ಒಂದಂತೂ ಅರ್ಥವಾಯಿತು. ನಾನು ಮಾಡಿದ ನಳಪಾಕ ಹೈಕ್ಲಾಸ್ ಆಗಿತ್ತು ಅಂತ. ಇಲ್ಲದೇ ಇದ್ದಿದ್ದರೆ, ಮಾಡಿದ್ದುಣ್ಣೋ ಮಹಾರಾಯ ಅಂತ ನಾನೇ ಎರಡು ದಿನ ಫ್ರಿಜ್‌ನಲ್ಲಿಟ್ಟುಕೊಂಡು ತಿನ್ನಬೇಕಾಗಿತ್ತು.'' ಅವನು ಮುಗುಳ್ನಕ್ಕಾಗ ಪೂರ್ಣಿಮಾ ಅವನನ್ನೇ ನೋಡಿದಳು.

''ಹಾಗಾದ್ರೆ ಈಗೇನು ಮಾಡ್ತೀರಿ ?.... ''ಅವನು ಪಕಪಕನೆ ನಕ್ಕ.

''ನಾನು ನಿಮ್ಮನ್ನೆಲ್ಲಾ ಟೆಸ್ಟ್ ಮಾಡೋಕೆ ಹೀಗೆ ಕೇಳ್ದೆ ಅಷ್ಟೆ. ನನಗೆ ಎಂಟು ಗಂಟೆಗೆ ಬಿಸಿ ಬಿಸಿ ಊಟ ಮಾಡಿ ಅಭ್ಯಾಸ. ಅಡಿಗೆ ಆದ ತಕ್ಷಣವೇ ಊಟ ಮುಗಿಸಿ, ನಂತರವೇ ನಿಮ್ಮನ್ನು ಕರೆದದ್ದು.'' ಈಗ ಎಲ್ಲರೂ ಬೆಪ್ಪಾದರು. ಪೂರ್ಣಿಮಾಳ ಮುಖ ಕೆಂಪಾಗಿತ್ತು. ಅವನನ್ನು ದುರುದುರನೆ ನೋಡಿ ಹೊರಡಲಿದ್ದವಳ ಎದುರಿಗೆ ದಿವಾಕರ ಬಂದ.

''ಸಾರಿ ಮಿಸ್... ನಿಮಗೆ ಕೋಪ ಬಂದಿದೆ ಅಲ್ವಾ ?''

''ಅಲ್ಲಾರಿ, ಹೀಗೇಕೆ ಮಾಡಿದ್ರಿ ?''

''ಏನೋ ಒಂದು ತಮಾಷೆ ಮಾಡೋಣ ಅಂತ ಅನ್ನಿಸ್ತು. ನನ್ನ ತಂಗಿ ಇದ್ದಾಗ, ಹೀಗೆ ಅವಳನ್ನು ತಮಾಷೆ ಮಾಡಿ ಗೋಳು ಹೊಯ್ದುಕೊಳ್ಳುತ್ತಿದ್ದೆ. ಈಗ ಅವಳು ಗಂಡನ ಮನೆಗೆ ಹೊರಟು ಹೋದಳು.ಈಗ ನಾನು ಒಂಟಿ. ಅಪ್ಪನಿಗೆ ಮೈಯಲ್ಲಿ ಸರಿಯಿಲ್ಲ. ಅಮ್ಮ ಯಾವಾಗಲೂ ಬಿಸ್ಸಿ. ಸಾದಾ ಈ ಟಿ.ವಿ. ಮುಂದೆ ಕೂತು ಕೂತು ನನಗೂ ಬೇಜಾರಾಗಿರುತ್ತದೆ. ಒಂದು ಛೇಂಜ್ ಇರಲಿ ಅಂತ ಹೀಗೆ ಮಾಡಿದೆ. ನಿಮಗೆಲ್ಲಾ ಬೇಸರವಾಗಿದ್ದರೆ ಕ್ಷಮಿಸಿ...... ''

''ಕ್ಷಮಿಸ್ತೀವಿ. ಆದರೆ ಒಂದು ಕಂಡೀಷನ್'' ಗಾಯತ್ರಿ ಹೇಳಿದಳು.

''ಹುಂ.... ಹೇಳಿ....''

''ಇನ್ನು ಮೇಲೆ ದಿನಾ ರಾತ್ರಿ ನೀವೇ ಅಡಿಗೆ ಮಾಡಬೇಕು ನಮ್ಮಗಳ ಜೊತೆ ಕುಳಿತು ಊಟ ಮಾಡಬೇಕು.... ''

''ಆಂ. ಇಂಪಾಸಿಬಲ್....''

''ನಾವು ನಿಮ್ಮ ತಾಯಿಗೆ ಹೇಳ್ತೀವಿ. ಅವರಿಗೂ ರೆಸ್ಟ್ ಬೇಕು ಅಲ್ವಾ ... ಇನ್ನು ಮೇಲೆ ರಾತ್ರಿಯ ಅಡಿಗೆ ನಿಮ್ಮದು.''

''ಹಾಗಾದ್ರೆ ನಂದೂ ಒಂದು ಕಂಡೀಷನ್....''

''ಏನದು !''

''ನನಗೆ ಅಡಿಗೆ ಕೆಲಸದಲ್ಲಿ ದಿನಕ್ಕೊಬ್ಬರು ಸಹಾಯ ಮಾಡಬೇಕು....''

''ನೋ.... ''ಪೂರ್ಣಿಮಾಳ ಹೊರತು ಉಳಿದವರು ಉದ್ಗಾರ ಎತ್ತಿದರು.

''ನಾನು ನಿಮಗೆ ಸಹಾಯ ಮಾಡ್ತೀನಿ. ''ಪೂರ್ಣಿಮಾ ನುಡಿದಾಗ ಉಳಿದವರೂ ಒಪ್ಪಿಕೊಳ್ಳಬೇಕಾಯ್ತು.

''ಓ.ಕೇ. ಥ್ಯಾಂಕ್ಯೂ ಮಿಸ್ '' ಅವನು ಹೃತ್ಪೂರ್ವಕವಾಗಿ ನುಡಿದಾಗ 'ಯೂ ಆರ್ ವೆಲ್‌ಕಂ ' ಎಂದು ನುಡಿದು ಮುಗುಳ್ನಕ್ಕಳು.ಮೇಲೆ ರೂಮಿಗೆ ತೆರಳಿದ ಮೇಲೆ ಉಳಿದವರು ಅವಳನ್ನು ತರಾಟೆಗೆ ತೆಗೆದುಕೊಂಡರು.

''ಏನ್ರೀ ಪೂರ್ಣಿಮಾ ನೀವು... ನಾವು ಇಲ್ಲಿರುವುದು ಪೇಯಿಂಗ್‌ಗೆಸ್ಟ್‌ಗಳಾಗಿ.'' ನಾವೇ ಅಡಿಗೆ ಗಿಡಿಗೆ ಮಾಡುವುದಾದರೆ, ನಾವೇಕೆ ಪೇ ಮಾಡಬೇಕು?

''ಆಂಟಿಗೆ ಹುಶಾರಿಲ್ಲದಿರುವಾಗ, ದಿವಾಕರ ಇಲ್ಲದೇ ಇದ್ದಿದ್ದರೆ ನಾವುಗಳೇ ಅಡಿಗೆ ಮಾಡಬೇಕಾಗುತ್ತಿತ್ತು. ಈಗ ನಾವು ಸಹಾಯ ಮಾಡ್ತೀವಿ ಅಷ್ಟೇ. ನಿಮಗೆ ಇಷ್ಟವಿಲ್ಲದಿದ್ದರೆ ನೀವೇಕೆ ಒಪ್ಪಿಕೊಂಡಿರಿ. ... ? ''

''ಮತ್ತೇನು ಮಾಡುವುದು ? ನೀವೊಬ್ಬರೇ ಸಹಾಯ ಮಾಡಿದ್ರೆ... ನಮಗೆ ಮುಜುಗರವಾಗುಲ್ವಾ ?''

''ಪರವಾಗಿಲ್ಲ , ನಾನು ಮಾಡ್ತೀನಿ. ಆಂಟಿಗೆ ಹುಶಾರಾದ ಮೇಲೆ ಹೇಗೂ ಅವರು ಯಾರಿಗೂ ಬಿಡುಲ್ಲ. ಅಲ್ಲಿಯವರೆಗೆ ಅಷ್ಟೇ....''

''ಓ.ಕೇ... ಆಂಟಿಗೆ ಬೇಗ ಹುಶಾರಾಗಲಿ.. ನನ್ನ ಸರದಿ ಬರದೇ ಹೋಗಲಿ'' ಸುಜಯ ಜೋರಾಗಿಯೇ ದೇವರಲ್ಲಿ ಪ್ರಾರ್ಥಿಸಿದಳು. ಉಳಿದವರು ನಕ್ಕರು. ಪುಷ್ಪ ಚುಡಾಯಿಸಿದಳು.

''ಯಾಕ್ರೀ.. ತಪ್ಪಿಸ್ಕೋಳ್ಳೋಕೆ ಆಸೇನಾ ? ..... ಯಾಕೆ ಭಯಾನ ?''

''ಹುಂ ಪುಷ್ಪ ನಿಜವಾಗ್ಲೂ.... ಯಾಕೇಂದ್ರೆ ನನಗೆ ಏನೂ ಮನೆ ಗೆಲಸ ಬರುಲ್ಲ.'' ಮುಖ ಚಿಕ್ಕದು ಮಾಡಿ ನುಡಿದಳು.

''ಯಾವುದೂ ಬ್ರಹ್ಮವಿದ್ಯೆಯಲ್ಲ, ಮಾಡುಕ್ಕೆ ಮುಂದಾದರೆ ತಾನಾಗಿಯೇ ಬರುತ್ತದೆ. ಹಿಂದರಿದರೆ ಏನೂ ಬರುಲ್ಲ. ''

''ನಮ್ಮ ಮನೇಲಿ ನಾನೇ ದೊಡ್ಡವಳು. ನಮ್ಮ ಅಜ್ಜೀನೋ ವಿಪರೀತ ಮಡಿ. ಹಾಗಾಗಿ ನಾನು ಏನೂ ಕೆಲಸ ಮಾಡಲಿಲ್ಲ. ನಮ್ಮ ಅಜ್ಜೀದೇ ತಪ್ಪು....''

''ನಿಮ್ಮ ಗಂಡನ ಮನೇಲಿ ನಿಮ್ಮ ಅಜ್ಜೀನೇ ಬಂದು ಕೆಲಸ ಮಾಡಿ ಕೊಡ್ತಾರಾ?'' ಸೌಜನ್ಯ ಪ್ರಶ್ನಿಸಿದಳು.

''ನಾನು ಮದುವೇನೇ ಆಗುಲ್ಲಪ್ಪಾ... ನನಗೆ ಅಡಿಗೆ ಕೆಲಸ, ಮಕ್ಕಳನ್ನು ಸಾಕೋದು ಅಂತಂದ್ರೆ ಅಲರ್ಜಿ'' ಮೈ ಕೊಡವಿದಳು.

''ಅಡಿಗೆ ಕೆಲಸಕ್ಕೆ ಅಡಿಗೆಯವರು ಸಿಗ್ತಾರೆ; ಮಕ್ಕಳನ್ನು ನೋಡಿಕೊಳ್ಳೋಕೆ ಆಯಾ ಸಿಗ್ತಾರೆ, ಇನ್ನ್ಯಾಕೆ ಚಿಂತೆ....?''

ಮಾತು ಎಲ್ಲಿಂದೆಲ್ಲಿಗೋ ತಿರುಗಿದಾಗ ಪೂರ್ಣಿಮಾ ಎಚ್ಚೆತ್ತಳು. ಮಾತನ್ನು ಬದಲಾಯಿಸಿದಳು. ''ನನಗೀಗ ನಿದ್ದೆ ಬರ್ತಿದೆ. ... ಗುಡ್‌ನೈಟ್...''

''ಗುಡ್‌ನೈಟ್ ಪೂರ್ಣಿಮಾ.... ಪ್ಲೀಸ್ ನಿತ್ಯದಂತೆ ಕನವರಿಸಬೇಡಿ.''

''ನಾನು ! ಕನವರಿಸ್ತೀನಾ ? ಇಲ್ಲವಲ್ಲ.....''

''ನೀವು ಕನವರಿಸ್ತೀರಾ, ಸೌಜನ್ಯ ಗೊರಕೆ ಹೊಡಿತಾರೆ, ಒಟ್ನಲ್ಲಿ ನನಗಂತೂ ನಿದ್ದೆ ಇಲ್ಲ.'' ಸುಜಯಳ ಮಾತಿನಲ್ಲಿ ನವಿರಾದ ಆಕ್ಷೇಪಣೆ ಇತ್ತು.

''ಸಾರಿ.... ಸುಜಯ ನಾವು ಹೀಗೆ ತೊಂದರೆ ಕೊಡ್ತೀವಿ ಅಂತ ಗೊತ್ತೇ ಇರಲಿಲ್ಲ. ಪಕ್ಕದ ರೂಮಿನಲ್ಲಿ ಪುಷ್ಪ ಏನ್ಮಾಡ್ತಾರಂತ ಗೊತ್ತಾ? ರಾತ್ರಿ ಹೊತ್ತು ಕರಾಟೆ ಆಡ್ತಾರಂತೆ... ಹೋದ ಜನ್ಮದಲ್ಲಿ ನೀವು ಕರಾಟೆ ಛಾಂಪಿಯನ್ ಆಗಿದ್ರಾ ಪುಷ್ಪಾ?'' ಎಲ್ಲರೂ ಘೊಳ್ಳನೆ ನಕ್ಕರು.

''ನಾನು ಈ ಜನ್ಮದಲ್ಲೂ ಕರಾಟೆ ಛಾಂಪಿಯನ್ನೇ ... ಇವತ್ನಿಂದ ನಾನೂ ಇಲ್ಲೇ ಮಲಗ್ತೀನಿ. ಬೇಕಾದ್ರೆ ನಿಮಗೂ ಹೇಳಿಕೊಡ್ತೀನಿ.'' ಮತ್ತೊಮ್ಮೆ ಎಲ್ಲರೂ ನಕ್ಕರು. ಕೆಳಗಿನಿಂದ ದಿವಾಕರನೂ ನಕ್ಕ ಧ್ವನಿ ಕೇಳಿಸಿದಾಗ ಎಲ್ಲರೂ ಮೆತ್ತಗಾದರು.

''ಮೆಲ್ಲಗೆ ಮಾತಾಡ್ರೇ... ಅವನಿಗೆ ನಮ್ಮ ಮಾತುಕೇಳಿಸ್ತಿದೆ. ಆಮೇಲೆ ಅವನೂ ಮಾತಿಗೆ ಬಂದು ಕೂತರೆ ಕಷ್ಟ'' ಎಲ್ಲರೂ ಮೆಲ್ಲಗೆ ನಕ್ಕು, ಮಲಗಲು ಸಿದ್ಧರಾದರು.

ಸುಜಯ ಕಾಲೇಜೊಂದರಲ್ಲಿ ಲೆಕ್ಚರರ್ ಆಗಿದ್ದಳು. ರಾತ್ರಿಯ ಹೊತ್ತು ಊಟವಾದ ನಂತರ ಸ್ವಲ್ಪ ಹೊತ್ತು, ಮಾರನೇ ದಿನದ ಲೆಕ್ಚರ್‌ಗೆ ಪ್ರಿಪೇರ್ ಆಗಿ ನಂತರ ಮಲಗುತ್ತಿದ್ದಳು. ಬೆಳಿಗ್ಗೆ ಅವಳು ಎಲ್ಲರಿಗಿಂತ ತಡವಾಗಿ ಏಳುತ್ತಿದ್ದಳು. ಅವಳಿಗೆ ಮದುವೆಯ ಬಗ್ಗೆ ಯಾವ ಆತುರವೂ ಇರಲಿಲ್ಲ.

ಸೌಜನ್ಯ ಕೂಡ ಕಾಲೇಜೊಂದರಲ್ಲಿ ಟೆಂಪರರಿ ಲೆಕ್ಚರರ್ ಆಗಿದ್ದಳು. ಆದುದರಿಂದ ಅವಳಿಗೆ ಹೆಚ್ಚಿನ ಜವಾಬ್ದಾರಿ ಇರಲಿಲ್ಲ. ಆರಾಮವಾಗಿದ್ದಳು. ಅವಳ ಮನೆಯಲ್ಲಿ ಅವಳು ಎರಡನೆಯವಳು. ಹಿರಿಯ ಅಕ್ಕನಿಗೂ ಮದುವೆಯಾಗಿರಲಿಲ್ಲವಾದುದರಿಂದ ಇವಳಿಗೆ ಸದ್ಯಕ್ಕೆ ಮದುವೆಯ ಯೋಚನೆಯಿಲ್ಲ.

ಪುಷ್ಪ ಡೈವೋರ್ಸಿ. ಮದುವೆಯ ನಂತರ ಗಂಡನ ಮನೆಯವರ ಕಿರುಕುಳ ತಾಳಲಾರದೇ ಡೈವೋರ್ಸ್ ತೆಗೆದುಕೊಂಡು ಕೆಲಸಕ್ಕೆ ಸೇರಿದ್ದಳು. ಮತ್ತೆ ಮದುವೆಯಾಗುವ ಆಸೆ ಅವಳಿಗಿರಲಿಲ್ಲ, ಏನೋ ಭಯ.

ವಿನುತ ವಿಧವೆ. ಚಿಕ್ಕವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡವಳು. ಗಂಡ ಕೆಲಸ ಮಾಡುತ್ತಿದ್ದ ಕಂಪನಿಯಲ್ಲೇ ಅವಳಿಗೆ ಕೆಲಸವನ್ನು ಕೊಟ್ಟಿದ್ದರು. ಅವಳಿಗೆ ಒಂದು ಮಗು ಸಹ ಇತ್ತು. ಮಗುವನ್ನು ತವರು ಮನೆಯಲ್ಲಿ ಬಿಟ್ಟಿದ್ದಳು. ಅತ್ತೆ ಮಾವ ಇಬ್ಬರೂ ಹಿರಿಯ ಮಗನ ಮನೆಯಲ್ಲಿದ್ದುದರಿಂದ, ತಾನು ಅಲ್ಲಿರಲು ಇಷ್ಟಪಡದೇ ಪೇಯಿಂಗ್‌ಗೆಸ್ಟ್ ಆಗಿ ಸೇರಿಕೊಂಡಿದ್ದಳು. ಇಲ್ಲಿಎಲ್ಲರಿಗಿಂತ ಅವಳೇ ಹೊಸಬಳು.

ಗಾಯತ್ರಿ, ಅವರ ಮನೆಯಲ್ಲಿ ಆರು ಜನ ಅಕ್ಕತಂಗಿಯರಲ್ಲಿ ನಾಲ್ಕನೆಯವಳು. ಹಳ್ಳಿಯಲ್ಲಿ ಹುಟ್ಟಿ ಬೆಳೆದವಳು. ಅದೇ ಹಳ್ಳಿಯ ಹುಡುಗನೊಬ್ಬನನ್ನು ಪ್ರೀತಿಸಿ ಅವನೊಂದಿಗೆ ಓಡಿ ಬಂದಿದ್ದಳು. ಅವನಿಗೆ ಸರಿಯಾದ ಉದ್ಯೋಗವಿಲ್ಲವಾದುದರಿಂದ ಅವನು ಅವನ ಗೆಳೆಯನ ಮನೆಯಲ್ಲಿದ್ದ. ಗುಟ್ಟಾಗಿ ಯಾರಿಗೂ ತಿಳಿಯದಂತೆ ಮದುವೆಯಾಗಿದ್ದುದರಿಂದ, ಯಾರಿಗೂ ತಿಳಿಯದಂತೆ, ರಹಸ್ಯವಾಗಿ ಆಗ ಈಗ ಭೇಟಿಯಾಗುತ್ತಿದ್ದರು. ಇವಳೇ ಅವನ ಖರ್ಚಿಗೆ ಹಣವನ್ನು ಕೊಡುತ್ತಿದ್ದಳು. ಸರ್ಕಾರಿ ಆಫೀಸೊಂದರಲ್ಲಿ ಆಫೀಸರ್ ಆಗಿದ್ದಳು. ಆದಷ್ಟು ಬೇಗ ತಮ್ಮದೇ ಆದ ಒಂದು ಮನೆಯನ್ನು ಗೊತ್ತು ಮಾಡಿಕೊಂಡು, ತಾವಿಬ್ಬರೂ ಬಹಿರಂಗವಾಗಿ ಮದುವೆಯಾಗಿ ತಮ್ಮದೇ ಆದ ಸುಖೀ ಸಂಸಾರದಲ್ಲಿರುವ ಕನಸು ಕಾಣುತ್ತಿದ್ದಳು.

ಎಲ್ಲರಿಗೂ ಅವರವರದ್ದೇ ಆದ ಕತೆಯಾಗಿರುವಾಗ, ಯಾರೂ, ಪೂರ್ಣಿಮಾಳ ಪೂರ್ವಾಪರವನ್ನು ಕೇಳಲಿಲ್ಲ. ಇವಳೂ ಹೇಳಿಕೊಳ್ಳಲಿಲ್ಲ. ನಾವುಗಳೇನು ಇಲ್ಲಿ ಪರ್ಮನೆಂಟ್ ಆಗಿ ಇರುವವರಲ್ಲ. ಇದ್ದಷ್ಟು ದಿನ ಒಂದೇ ಮನೆಯವರಂತೆ ಸಹ ಬಾಳ್ವೆ ಮಾಡಬೇಕು. ನಮ್ಮ ನಮ್ಮಲ್ಲಿ ಅಂಡರ್‌ಸ್ಟ್ಯಾಂಡಿಂಗ್ ಇರಬೇಕು ಎಂದು ಮಾತನಾಡಿ ಕೊಂಡಿದ್ದರು. ಎಲ್ಲರಿಗಿಂತ ಪೂರ್ಣಿಮಾ ವಯಸ್ಸಿನಲ್ಲಿ ಚಿಕ್ಕವಳಂತೆ ಕಾಣುತ್ತಿದ್ದುದರಿಂದ, ಎಲ್ಲರೂ ಅವಳನ್ನು ಪುಟ್ಟ ತಂಗಿಯಂತೆ ಕಾಣುತ್ತಿದ್ದರು. ಆದರೆ ಈ ದಿನ ಪೂರ್ಣಿಮಾ ಮುಂದಾಗಿ, ಅಡಿಗೆ ಕೆಲಸದಲ್ಲಿ ಸಹಾಯ ಮಾಡ್ತೀನಿ ಅಂತ ಹೇಳಿದ್ದು ಎಲ್ಲರಿಗೂ ಮುಜುಗರವನ್ನುಂಟು ಮಾಡಿತ್ತು. ಚಿಕ್ಕೋಳು, ಇನ್ನೋಸೆಂಟ್ ಅಂತ ನಾವು ತಿಳಿದುಕೊಂಡಿದೀವಿ. ಹಾಗಿರಲಾರಳು ಅಂತ ಅಂದುಕೊಂಡಿದ್ದರು.

ನಿತ್ಯದಂತೆ, ಬೆಳಿಗ್ಗೆ ಎಚ್ಚರವಾಯಿತು. ಹಿಂದಿನ ರಾತ್ರಿ ನಡೆದುದನ್ನು ಪೂರ್ಣಿಮಾ ನೆನಪಿಸಿಕೊಂಡಳು. ಆಂಟಿಗೆ ಇನ್ನು ಹುಷಾರಾಗಿಲ್ಲದೇ ಇದ್ದರೇ ಎಂದುಕೊಂಡು ಪುಷ್ಪನ್ನಎಬ್ಬಿಸಿದಳು.

''ರೀ ಪುಷ್ಪಾ.... ನಾವೇ ಕಾಫಿ ತಿಂಡಿ ಮಾಡ್ಕೋ ಬೇಕೋ ಏನೋ... ಕೆಳಗೆ ಇಳಿದು ಹೋಗಿ ನೋಡೋಣ ಬರ್ತೀರಾ ?''

''ನಂಗೇ ಈಗ್ಲೇ ಏಳುಕ್ಕೆ ಬೇಜಾರಪ್ಪಾ....'' ಮತ್ತೆ ಮುಸುಕೆಳೆದಳು.

''ರೀ ಗಾಯತ್ರಿ.... ನೀವು ಬರ್ತೀರಾ ?''

''ನಡೀರಿ ಬರ್ತೀನಿ... ನನಗೆ ಬಿಸಿ ಬಿಸಿ ಕಾಫೀನ ಕುಡಿಯ ಬೇಕೂಂತ ಅನ್ನಿಸ್ತಿದೆ.''

''ಥ್ಯಾಂಕ್ ಯೂ ಗಾಯತ್ರಿ....'' ಇಬ್ಬರೂ ಎದ್ದು ದೇವರ ಪಟಕ್ಕೆ ಕೈ ಮುಗಿದು, ಹಲ್ಲುಜ್ಜಿ ಮುಖತೊಳೆದು ಕೆಳಗಿಳಿದು ಬಂದರು. ದಿವಾಕರ ಆಗಲೇ ಎದ್ದು ಕಾಫಿಯನ್ನು

ಬೆರೆಸಿಟ್ಟಿದ್ದ. ತಿಂಡಿಯು ತಯಾರಿಯಲ್ಲಿದ್ದ.

''ಗುಡ್ ಮಾರ್ನಿಂಗ್ ಮೇಡಂ ....'' ಗಾಯತ್ರಿಯನ್ನು ಕಂಡು ಮುಗುಳ್ನಕ್ಕ.

''ಗುಡ್ ಮಾರ್ನಿಂಗ್... ನಿಮ್ಮ ಮಮ್ಮಿ ಹೇಗಿದಾರೆ ....?''

''ಜ್ವರ ತಲೆ ನೋವು ಒಂದೂ ಬಿಟ್ಟಿಲ್ಲವಂತೆ. ಬೇಗ ಬೇಗ ತಿಂಡಿ, ಕಾಫಿ ಅಡಿಗೆ ಮಾಡಿಬಿಟ್ಟು, ಮಮ್ಮೀನ ಡಾಕ್ಟರರ ಹತ್ತಿರ ಕರೆದುಕೊಂಡು ಹೋಗಬೇಕು.''

''ಗುಡ್. ಏನು ತಿಂಡಿ ಮಾಡ್ತಿದೀರಿ....?''

''ಏನು ಮಾಡಲಿ ನೀವೇ ಹೇಳಿ ...''

''ಇವತ್ತು ಏನೂ ಬೇಡ ಬಿಡಿ... ಹೋಟೆಲ್ನಿಂದ ಇಡ್ಲಿ, ಸಾಂಬಾರು ತಂದು ಬಿಡಿ. ಎಲ್ಲರಿಗೂ ಆಗುತ್ತೆ.''

''ನಾನು ಉಪ್ಪಿಟ್ಟನ್ನು ಮಾಡೋಣ ಅಂತಿದ್ದೆ.....''

''ಇವತ್ತು ಬೇಡ. ನಾನು ಆಫೀಸಿಗೆ ಸ್ವಲ್ಪ ಬೇಗ ಹೋಗಬೇಕು.... ಹೊತ್ತಾಗುತ್ತೆ. ಹೇಗೂ ಕಾಫಿ ಮಾಡಿದೀರಲ್ಲ ಕೊಡಿ.....'' ದಿವಾಕರ ಪೂರ್ಣಿಮಾಳ ಕಡೆ ನೋಡಿದ. ಅವನ ಮುಖದಲ್ಲಿ ನಿರಾಸೆಯನ್ನು ಗುರುತಿಸಿದಳು. ಆದರೆ ಗಾಯತ್ರಿ ಹೇಳಿದ್ದು ಸರಿಯೆನಿಸಿತ್ತು.

ನಾನುಆಂಟಿಯನ್ನು ಮಾತನಾಡಿಸಿಕೊಂಡು ಬರ್ತೀನಿ. ನೀವುಹೋಗಿ ತಿಂಡಿಯನ್ನು ತನ್ನಿ. ಆಂಟಿ ಮಲಗಿದ್ದೆಡೆಗೆ ಗಾಯತ್ರಿ ನಡೆದಳು. ಪೂರ್ಣಿಮಾ ಅವಳನ್ನು ಹಿಂಬಾಲಿಸಿದಳು. ಅಷ್ಟರಲ್ಲಿ ಉಳಿದವರು ಒಬ್ಬೊಬ್ಬರಾಗಿ ಕೆಳಗಿಳಿದು ಬಂದಿದ್ದರು.

''ಇವತ್ತು ಮಧ್ಯಾಹ್ನದ ಲಂಚ್ ಬಗ್ಗೆ ನೀವೇನೂ ಚಿಂತಿಸಬೇಡಿ ದಿವಾಕರ್. ನಾವು ಹೇಗೋ ಅಡ್ಜಸ್ಟ್ ಮಾಡಿಕೊಳ್ತೀವಿ. '' ಗಾಯತ್ರಿಯೇ ಎಲ್ಲರ ಪರವಾಗಿ ನುಡಿದಾಗ, ಅವನು ಪೂರ್ಣಿಮಾಳ ಕಡೆ ನೋಡಿದ. ಅವಳೂ ಹೂಂ ಎನ್ನುವಂತೆ ತಲೆಯಾಡಿಸಿದಾಗ ಅವನು ಮುಗುಳ್ನಕ್ಕ. ಅವನ ನಗುವಿನಲ್ಲಿ ಸಮಾಧಾನದ ನಿಟ್ಟುಸಿರನ್ನು ಗುರುತಿಸಿದಳು.

ಸಾಯಂಕಾಲ ಒಬ್ಬೊಬ್ಬರಾಗಿ ಬಂದವರು, ಆಂಟಿಯನ್ನು ಮಾತನಾಡಿಸಿ ಕೊಂಡೇ ಮಹಡಿಯನ್ನೇರಿದರು. ದಿವಾಕರ ಸುಸ್ತಾಗಿ ಕುಳಿತಿದ್ದ. ಪೂರ್ಣಿಮಾ ಮೆಟ್ಟಿಲನ್ನು ಹತ್ತುವ ಮೊದಲು ಅ ವನು ಕುಳಿತಿದ್ದೆಡೆಗೆ ಬಂದಳು.

''ನಿಮ್ಮ ತಾಯಿ ಹೇಗಿದಾರೆ ? ಡಾಕ್ಟರು ಏನಂದ್ರು ?''

''ಏನೇನೋ ಟೆಸ್ಟ್ ಮಾಡಿದರು. ನಾಳೆ ನಾಡಿದ್ದರಲ್ಲಿ ರಿಪೋರ್ಟ್‌ನ್ನು ಕೊಡ್ತೀವಿ ಅಂದಿದಾರೆ.''

''ನೀವ್ಯಾಕೆ ಸಪ್ಪಗಿದೀರಾ ? ರಾತ್ರಿಯ ಅಡಿಗೆ ಏನು ಮಾಡಬೇಕು ಹೇಳಿ ನಾವುಗಳೇ ಮಾಡ್ತೀವಿ.''

ನಾನು, ಅನ್ನ ಸಾರು ಪಲ್ಯ ಮಾಡಿಟ್ಟಿದೀನಿ. ಆದರೆ... ನನಗೂ ಯಾಕೋ ತಲೆನೋವು.... ಜ್ವರ ಬಂದಿರುವ ಹಾಗಿದೆ... ಭಯವಾಗ್ತಿದೆ. ಮೈ ಮುದುಡಿ ಕುಳಿತವನ ಹಣೆಯ ಮೇಲೆ ಕೈ ಇಟ್ಟಳು. ಹೌದು, ಅವನ ಹಣೆ ಜ್ವರದ ತಾಪದಿಂದ ಸುಡುತ್ತಿದೆ. ಕೈಯನ್ನು ಸರ್ರನೆ ಹಿಂದಕ್ಕೆ ತೆಗೆದುಕೊಂಡಳು. ಅವನು ಅವಳ ಕೈ ಹಿಡಿದ.

''ನನಗ್ಯಾಕೋ ತುಂಬಾ ಭಯವಾಗ್ತಿದೆ. ಅಪ್ಪ, ನೋಡಿದ್ರೆ ಹಾಗೆ ಮಲಗಿ ಬಿಟ್ಟಿದಾರೆ, ಅಮ್ಮನಿಗಿನ್ನು ಜ್ವರ ಬಿಟ್ಟಿಲ್ಲ. ನಾನೂ ಮಲಗಿಬಿಟ್ಟರೆ .....?''

''ಜ್ವರ ತಲೆನೋವಿಗೆಲ್ಲಾ ಯಾಕೆ ಹೆದರಬೇಕು ದಿವಾಕರ್... ಮಾತ್ರೆ ಔಷಧಿ ತಗೊಂಡರೆ ವಾಸಿಯಾಗುತ್ತೆ. ನೀವು ಸುಮ್ಮನೆ ತಲೆ ಕೆಡಿಸಿಕೊಳ್ತಿದೀರಿ.''

''ನಾನು ಜ್ವರಕ್ಕೆ ಹೆದರುತ್ತಿಲ್ಲ. ನಾನೂ ಮಲಗಿಬಿಟ್ಟರೆ, ಮನೆ ಕೆಲಸ ಅಡಿಗೆ ಕೆಲಸವನ್ನೆಲ್ಲಾ ಯಾರು ಮಾಡ್ತಾರೆ... ನಿಮಗೆಲ್ಲ ಅಡಿಗೆ ತಿಂಡಿ ಯಾರು ಮಾಡಿ ಕೊಡ್ತಾರೆ....? ''

''ಅದೆಲ್ಲಾ ಹೋಗೋ ನಡಿಯುತ್ತೆ. ನೀವ್ಯಾಕೆ ಚಿಂತೆ ಮಾಡ್ತೀರಿ. ''

''ನನಗೆ ಅದೇ ಚಿಂತೆ ಮಿಸ್... ನೀವುಗಳೆಲ್ಲಾ ಬೇಜಾರು ಮಾಡಿಕೊಂಡು ಬಿಟ್ಟು ಹೋದ್ರೆ ನಮಗೆ ಆದಾಯ ನಿಂತು ಹೋಗುತ್ತದೆ. ಅಪ್ಪನಿಗೆ ಔಷಧಿಯ ಖರ್ಚೇ ತಿಂಗಳಿಗೆ ಸಾವಿರಾರು ಆಗುತ್ತದೆ. ಇದನ್ನು ಬಿಟ್ಟು ನಮಗೆ ಬೇರೆ ಆದಾಯವೇ ಇಲ್ಲ. ''

ಅವನ ಮುಂದಾಲೋಚನೆ, ಅವಳಿಗೆ ತಮಾಷೆಯಾಗಿ ಕಂಡಿತು.

''ಇಷ್ಟು ದೂರಾಲೋಚನೆ ಒಳ್ಳೇದಲ್ಲ. ನಾನ್ಯಾರೂ ಬಿಟ್ಟು ಹೋಗುವ ಆಲೋಚನೆ ಸಹ ಮಾಡಿಲ್ಲ. ಆಂಟಿಗೆ ಪೂರ್ತಿ ಹುಶಾರಾಗುವವರೆಗೆ ಸ್ವಲ್ಪ ಕಷ್ಟವಾಗಬಹುದು. ಆಮೇಲೆ ಎಲ್ಲಾ ಸರಿಹೋಗುತ್ತದೆ.''

''ದಯವಿಟ್ಟು ಯಾರೂ ಬಿಟ್ಟು ಹೋಗಬೇಡಿ.... ಅಮ್ಮನಿಗೆ ಆಘಾತವಾಗುತ್ತದೆ. ಅಮ್ಮನಿಗೆ ಹಗಲೂ ರಾತ್ರಿ ಅದೇ ಚಿಂತೆಯಾಗಿದೆ. ಈಗ ನಾನೂ ಹುಶಾರಿಲ್ಲದೇ ಮಲಗಿಬಿಟ್ಟರೇ ಅಮ್ಮ ಏನಾಗಿ ಬಿಡ್ತಾಳೋ ಅಂತ ಭಯವಾಗ್ತಿದೆ.''

''ನೀವು ನಿಮ್ಮ ತಾಯೀನ ತುಂಬಾ ಪ್ರೀತಿಸ್ತೀರಿ ಅಲ್ವಾ ? ''

''ನನ್ನ ಪ್ರಾಣಕ್ಕಿಂತ ಹೆಚ್ಚು... ಅವಳಿಗೆ ಏನಾದ್ರೂ ಆದ್ರೆ ನಾಂತೂ ಖಂಡಿತಾ ಬದುಕಿರಲ್ಲ.''

''ಹಾಗೆಲ್ಲಾ ಏನೂ ಆಗುಲ್ಲ ಬಿಡಿ. ದೇವರಿದ್ದಾನೆ. ನಂಬಿದ ದೇವರು ಖಂಡಿತಾ ಕೈ ಬಿಡುವುದಿಲ್ಲ. '' ಅವಳು ಕೈಯನ್ನು ಮೃದುವಾಗಿ ಒತ್ತಿ ತನ್ನ ಕೈಯನ್ನು ಬಿಡಿಸಿಕೊಂಡಳು.

''ನನಗೀಗ ಎಷ್ಟೋ ಸಮಾಧಾನವಾಯ್ತು ಮಿಸ್.... ನನ್ನ ದುಃಖವನ್ನು ಹೇಳ್ಕೋಳ್ಳೋಣ ಅಂತಂದ್ರೆ, ಕೇಳ್ಕೋಳ್ಳೋಕೆ ಯಾರು ಇರಲಿಲ್ಲ. ನನಗೆ ಯಾರೂ ಸ್ನೇಹಿತರಿಲ್ಲ. ಈಗ ... ಇವತ್ತಿನಿಂದ ನೀವು ನನ್ನ ಸ್ನೇಹಿತರು ಅಂತ ಭಾವಿಸ್ತೀನಿ.''

''ಓ... ಖಂಡಿತಾ... ನಾವೆಲ್ಲರೂ ನಿಮ್ಮ ಸ್ನೇಹಿತರೇ. ಒಂದೇ ಮನೆಯಲ್ಲಿದ್ದ ಮೇಲೆ ನಾವು ಒಬ್ಬರಿಗೊಬ್ಬರು ನೆರವಾಗಲೇಬೇಕು. ನಿಮಗೆ ಹಣದ ಅಗತ್ಯವಿದ್ದರೆ ಹೇಳಿ... ನಾವುಗಳು ಕೊಟ್ಟಿರ್ತೀವಿ.''

''ಹೌದು ಒಂದೆರಡು ಸಾವಿರ ಬೇಕಾಗಿತ್ತು. ಅಮ್ಮನ ಡಾಕ್ಟರ ಫೀಸು ಔಷಧಿಗೆ ಹಾಗೂ ಮನೆಯ ದಿನಸಿ ಸಾಮಾನುಗಳೂ ಮುಗಿದಿವೆ.... ನಂಗೇನೂ ಮಾಡಬೇಕೂಂತ ಗೊತ್ತಾಗ್ತಿಲ್ಲ. ''

''ಸದ್ಯಕ್ಕೆ ನೀವು ಒಂದು ಕ್ರೋಸಿನ್ ಮಾತ್ರೆ ನುಂಗಿ ರೆಸ್ಟ್ ತಗೊಳ್ಳಿ. ಬೇಕಾದರೆ ನಾನು ನಿಮಗೆ, ಆಂಟಿಗೆ ಗಂಜಿ ಮಾಡಿಕೊಡ್ತೀನಿ. ಅಡಿಗೆ ಮಾಡಿ, ನಿಮ್ಮ ತಂದೆಗೂ ಊಟ ಮಾಡಿಸ್ತೀನಿ. ನೀವು ಚಿಂತಿಸಬೇಡಿ.....''ಎಂದು ಹೇಳಿ, ಮೇಲೆ ಹತ್ತಿ ಹೋದಳು ಗೆಳತಿಯರಿಗೆ ವಿಷಯ ತಿಳಿಸಿದಳು. ಯಾರೂ ಏನೂ ಮಾತನ್ನಾಡದಿದ್ದಾಗ ಅವಳಿಗೆ ಸೋಜಿಗವೆನಿಸಿತು.

''ಆಂಟಿ ಈಗ ಕಷ್ಟದಲ್ಲಿದ್ದಾರೆ. ಅವರ ಆರೋಗ್ಯ ಬೇರೆ ಸರಿ ಇಲ್ಲ. ಈಗ ಅವರಿಗೆ ನಮ್ಮ ಸಹಾಯದ ಅಗತ್ಯವಿದೆ.''

''ನಾವು ಏನು ಸಹಾಯ ಮಾಡೋಕಾಗುತ್ತೆ ಪೂರ್ಣಿಮಾ... ಪ್ರತಿ ತಿಂಗಳೂ ಹಣ ಕೊಡ್ತೀವಿ. ನಾವು ಇಲ್ಲಿ ಪೇಯಿಂಗ್ ಗೆಸ್ಟ್‌ಗಳು...''

''ಗೆಸ್ಟ್‌ಗಳು ಅಂತ ನಾವು ಮಾನವೀಯತೆಯನ್ನು ಕಳೆದುಕೊಳ್ಳುವುದಕ್ಕಾಗುಲ್ಲ. ಸಮಯ ಅಂತಂದ್ರೆ ಒಬ್ಬರಿಗೊಬ್ಬರು ಸಹಾಯ ಮಾಡದೇ ಇರಬಾರದು.''

''ನೀವಿನ್ನು ಚಿಕ್ಕವರು ಪೂರ್ಣಿಮಾ. ನಿಮಗೆ ಅನುಭವ ಸಾಲದು. ನಮ್ಮ ನಮ್ಮ ಕಷ್ಟ ನಮಗೆ. ಇದೇ ಹಣಾನ ಇನ್ನೊಂದು ಕಡೆ ಕೊಟ್ಟು ಪೇಯಿಂಗ್ ಗೆಸ್ಟ್ ಆಗಿ ಇರಬಹುದು. ನಾವೂ ಹೊರಗೆ ಕೆಲಸ ಮಾಡುವವರು... ಇದನ್ನೆಲ್ಲಾ ನಾವೇಕೆ ಅಂಟಿಸಿಕೊಳ್ಳೋಣ...?'' ಪೂರ್ಣಿಮಾ ಪೆಚ್ಚಾದಳು.

''ಯಾವುದೋ ಬೇಡದ ವಿಷಯಕ್ಕೆ ಚರ್ಚೆ ಏಕೆ ? ಈಗ ರಾತ್ರಿಯ ಊಟದ ಗತಿ ಏನು ? '' ಸೌಜನ್ಯ ಕೇಳಿದಾಗ, ಸುಜಯ ನುಡಿದಳು.

''ನಡೀರಿ ಎಲ್ಲರೂ ಹೋಟೆಲಿಗೆ ಹೋಗಿ ಬರೋಣ... ಹೀಗೆ ಮುಂದುವರೆದರೆ ನಾನಂತೂ ಇಲ್ಲಿ ಇರುಲ್ಲಪ್ಪ. ಆದಷ್ಟು ಬೇಗ ಬೇರೆ ಜಾಗ ನೋಡ್ಕೊಂಡು ಹೊರಟು ಹೋಗ್ತೀನಿ.''

''ನಾನೂ ಅಷ್ಟೇ...'' ಸೌಜನ್ಯ ದನಿಗೂಡಿಸಿದಳು.

''ಈಗ ಯಾರೂ ಹೋಟೆಲ್ಲಿಗೆ ಹೋಗುವುದು ಬೇಕಿಲ್ಲ... ದಿವಾಕರನೇ ಅನ್ನ ಸಾರು, ಪಲ್ಯ ಮಾಡಿಟ್ಟಿದ್ದಾರೆ. ಬನ್ನಿ ಊಟ ಮಾಡಿ ಬರೋಣ.'' ಒಬ್ಬರೂ ಉಸಿರೆತ್ತದೆ ಕೆಳಗಿಳಿದು ಬಂದರು. ದಿವಾಕರ ತಂದೆಗೆ ಊಟ ಮಾಡಿಸಿ ತಾಯಿಗೆ ಗಂಜಿಯನ್ನು ಕೊಟ್ಟು ತಾನೂ ಗಂಜಿಯನ್ನು ಕುಡಿದು ಮಲಗಿದ್ದ. ಹುಡುಗಿಯರು ಹೆಚ್ಚು ಗಲಾಟೆ ಮಾಡದೆ ತಾವೇ ಬಡಿಸಿಕೊಂಡು ಊಟ ಮಾಡಿ ಎದ್ದರು. ಎಲ್ಲರ ಮೂಡ್ ಕೆಟ್ಟು ಹೋಗಿತ್ತು.

ಹೇಗೂ ಇನ್ನೊಂದೆರಡು ತಿಂಗಳಿನಲ್ಲಿ ಕಾಲೇಜಿನ ಪರೀಕ್ಷೆಗಳು ಮುಗಿದು ರಜ ಬರುತ್ತದೆ. ಹೇಗೂ ಊರಿಗೆ ವಾಪಸ್ಸು ಹೋಗಬೇಕು. ಈಗಲೇ ಇಲ್ಲಿಂದ ಬೇರೆ ಕಡೆಗೆ ಎಲ್ಲಾದ್ರೂ ಹೋದ್ರೆ ಏನೀಗ ಎಂದು ಸುಜಯ ಆಲೋಚಿಸಿದರೆ, ನನ್ನ ಕೆಲಸ ಹೇಗೂ ಟೆಂಪರರಿ, ಯಾವಾಗ ಬೇಕಾದರೂ ಕೆಲಸ ಹೋಗಬಹುದು. ಹಾಗಿರುವಾಗ, ಈ ಪೇಯಿಂಗ್ ಗೆಸ್ಟ್‌ನ ಸಂಬಂಧ ಏನು ಗ್ಯಾರಂಟಿ ? ಎಂದು ಸೌಜನ್ಯ ಚಿಂತಿಸುತ್ತಿದ್ದಳು.

ನನ್ನ ಗಂಡನೇ ಇಲ್ಲದಿರುವಾಗ, ಭಾವನ ಮನೆಯಲ್ಲಿರುವುದರಲ್ಲಿ ಅರ್ಥವಿಲ್ಲ ಅಂತ, ತಂದೆ ತಾಯಿಯರನ್ನು ಒಪ್ಪಿಸಿ ಇಲ್ಲಿರಲು ಪ್ರಾರಂಭಿಸಿದ ನನ್ನ ವರಿಗಳೇ ನನಗೆ

ಜಾಸ್ತಿಯಾಗಿರುವಾಗ ಇಲ್ಲಿಯ ತಾಪತ್ರಯಗಳಿಗೆ ನಾನೇಕೆ ಒದ್ದಾಡಬೇಕು. ಯಾರು ಏನು ಬೇಕಾದ್ರೂ ಮಾಡಿಕೊಳ್ಳಲಿ, ನಾನೇ ಒಂದು ಬೇರೆ ಮನೆಮಾಡಿಕೊಂಡು ಹೊರಟು ಹೋಗ್ತೀನಿ ಏನುತಳ ಆಲೋಚನೆ ಹೀಗೆ ನಡೆದಿತ್ತು.

ನನಗೆ, ನನ್ನ ಗಂಡ, ಗಂಡನ ಮನೆಯವರು ಯಾರೂ ಅಡ್ಜಸ್ಟ್ ಆಗಲಿಲ್ಲ. ಮನಸ್ಸು ಮಾಡಿದ್ದರೆ ನಾನು ತಾಯಿಯ ಮನೆಯಲ್ಲಿರಬಹುದಾಗಿತ್ತು. ಆದರೆ ತವರು ಮನೆಯ ಹಂಗೂ ನನಗೆ ಬೇಡಾಂತ ಎಲ್ಲಾ ಬಿಟ್ಟು ಇಲ್ಲಿ ಬಂದು ಪೇಯಿಂಗ್ ಗೆಸ್ಟ್ ಆಗಿ ಸೇರಿಕೊಂಡೆ. ''ಪಾಪಿ ಸಮುದ್ರ ಹೊಕ್ಕರೆ ಮೊಳಕಾಲುದ್ದ ನೀರು ಎನ್ನೋ ತರಹ ಇಲ್ಲಿಯ ಬುನಾದಿಯೇ ಸಡಿಲವಾಗುತ್ತಿದೆ. ತಾನು ನಿರುದ್ಯೋಗಿಯಾಗಿ ಕುಳಿತು, ತಾಯಿಯ ಸಂಪಾದನೆಯಲ್ಲಿ ತಿಂದುಂಡು ಮಜ ಮಾಡ್ತೀದಾನೆ. ಹಣ ಇಲ್ಲ ಅಂದರೆ ಏನರ್ಥ ? ನಾಟಕ ಆಡ್ತಿದಾನೆ... ಬರೀ ಹುಡುಗೀರೇ ಇದಾರೆ ಅಂತ ಹೆದರಿಸ್ತಾ ಇದಾನೆ. ನಾವುಗಳು ಹುಷಾರಾಗಿರಬೇಕು.'' ಪುಷ್ಪಳ ಆಲೋಚನ ಲಹರಿಯ ದಿಕ್ಕೇ ಬೇರೆ ಆಗಿತ್ತು.

ಸದ್ಯದಲ್ಲೇ ನನ್ನ ಫಿಯಾನ್ಸಿಗೆ ಕೆಲಸ ಸಿಗುತ್ತದೆ. ತಕ್ಷಣವೇ ಮದುವೆ ಮಾಡಿಕೊಂಡು , ಬಾಡಿಗೆ ಮನೆಯೊಂದನ್ನು ಗೊತ್ತು ಮಾಡಿಕೊಂಡು ನಮ್ಮದೇ ಆದ ಸಂಸಾರವನ್ನು ಪ್ರಾರಂಭಿಸುವ ಆಲೋಚನೆಯಲ್ಲಿರುವಾಗ, ಈ ಮನೆಯ ಗೊಡವೆ ನನಗೇಕೆ ? ನಮಗೆ ಬೇಕಾದಷ್ಟು ಖರ್ಚಿಗೆ ಮಾರ್ಗಗಳಿರುವಾಗ, ಇಲ್ಲಿಯ ಖರ್ಚು ವೆಚ್ಚಗಳಿಗೆ ನಾನೇಕೆ ತಲೆ ಕೊಡಬೇಕು ಅಂತ ಗಾಯತ್ರಿಗೆ ಅನ್ನಿಸಿದರೂ, ಈ ಮನೆಗೆ ಪೇಯಿಂಗ್ ಗೆಸ್ಟ್ಆಗಿ ಮೊದಲಿಗೆ ಬಂದವಳು ನಾನೇ. ಎಲ್ಲರಿಗಿಂತ ವಯಸ್ಸಿನಲ್ಲಿ ದೊಡ್ಡವಳು, ಎಲ್ಲರಿಗಿಂತ ಹೆಚ್ಚು ಸಂಪಾದಿಸುವವಳು. ತುಂಬು ಸಂಸಾರದಲ್ಲಿ ಬೆಳೆದರೂ, ಮನೆತನದ ಗೌರವಕ್ಕೆ ಮಾನ್ಯತೆ ಕೊಡದೇ, ಪ್ರೀತಿಸಿದವನೊಂದಿಗೆ ಓಡಿ ಬಂದವಳು. ಮದುವೆಯಾಗುವವರೆಗೂ ನಾನು ಯಾರಿಗೂ ಏನನ್ನು ಹೇಳುವಂತಿಲ್ಲ. ಆಂಟಿಗೆ ಸಹ ಏನೂ ತಿಳಿಸಿಲ್ಲ. ಈಗ ತಕ್ಷಣಕ್ಕೆ ಹೇಗೆ ಹೇಳುವುದು.. ಹೊಸ ಜಾಗ, ಹೊಸ ಪರಿಸರದಲ್ಲಿ ಆಂಟಿ ನನಗೆ ಬೇಕಾದಷ್ಟು ಸಹಾಯ ಮಾಡಿದ್ದಾರೆ. ಅವರ ಸಹಕಾರದಿಂದ ನಾನು ಇಲ್ಲಿ ಸುರಕ್ಷಿತವಾಗಿದೀನಿ. ಆಂಟಿಗೆ ನನ್ನ ಕೈಲಾದಷ್ಟು ಸಹಾಯವನ್ನು ಮಾಡಲೇಬೇಕು. ನಮ್ಮ ಮದುವೆಯನ್ನು ಮುಂದೂಡಿದರೂ ಪರವಾಗಿಲ್ಲ... ಆಂಟಿಗೆ ನನ್ನಿಂದಾಗುವಷ್ಟು ಹಣವನ್ನು ಕೊಡಲೇ ಬೇಕು. ದಿವಾಕರ ನನಗೆ ತಮ್ಮನಿದ್ದ ಹಾಗೆ. ನನ್ನ ಸ್ವಂತ ತಮ್ಮನಿಗೆ ನಾನು ಏನೂ ಕೊಡಲಿಲ್ಲ. ಈಗ ಇವನಿಗೆ ಕೊಟ್ಟರೆ ತಪ್ಪೇನೂ ಇಲ್ಲ. ಈಚೆಗೆ ಈ ಮನೆಗೆ ಬಂದು ಸೇರಿದ ಪೂರ್ಣಿಮಾ ಈ ಮನೆಗೆ ಹೊಂದಿಕೊಂಡು ಬಿಟ್ಟಿದ್ದಾಳೆ. ನಾನೇಕೆ ಹೊರಹೊರಗೇ ಇರಬೇಕು ? ಯಾರು ಏನು ಮಾಡಲಿ, ಬಿಡಲಿ, ನಾನು ಪೂರ್ಣಿಮಾಳ ಜೊತೆಯಲ್ಲಿದ್ದುಕೊಂಡು ಈ ಮನೆಗೆ ಸಹಾಯಕಳಾಗಿರುತ್ತೀನಿ. ಮುಂದೆ ಒಂದಲ್ಲ ಒಂದು ದಿನ ನನಗೆ ಇವರುಗಳ ಅಗತ್ಯ ಬೀಳಬಹುದೆಂದು ಗಾಯತ್ರಿ ಚಿಂತಿಸಿದಳು.

ನನ್ನ ತಂದೆ ಮೊದಲೇ ಹೆಣ್ಣು ಮಕ್ಕಳ ವಿರೋಧಿ. ಅಮ್ಮ ಅಪ್ಪನ್ನ ವಿರೋಧಿಸುತ್ತಲೇ ಹೆಣ್ಣು ಮಕ್ಕಳನ್ನು ಓದಿಸಿದಳು. ಅಣ್ಣನ ಸಹಾಯದಿಂದ ನನ್ನ ಮದುವೆ ಮಾಡಿದಳು. ಕೆಲಸಕ್ಕೆ ಸೇರುವುದು ಅಪ್ಪನಿಗೆ ಸಮ್ಮತವಿರಲಿಲ್ಲ. ಡೈವೋರ್ಸ್ ಕೇಸು ನಡೆಯುತ್ತಿದೆ ಅಂತ

ತಿಳಿದಾಗಿನಿಂದ ನನ್ನನ್ನು ಮತ್ತೆ ಮನೆಗೇ ಸೇರಿಸುವುದಿಲ್ಲವೆಂದು ಕೋಪದಿಂದ ಕೂಗಾಡುತ್ತಿದ್ದಾರಂತೆ. ಮತ್ತೆ ಮತ್ತೆ ಕೇಶುಮಾವನಿಗೆ ತೊಂದರೆ ಕೊಡುವುದು ಚೆನ್ನಲ್ಲ, ಸ್ವತಂತ್ರವಾಗಿ ಇರಬೇಕೆಂಬ ಧೈರ್ಯದಿಂದ ಅತ್ತೆಯ ಮನೆಯಿಂದ ಹೊರಬಂದಾಗಿದೆ. ಆದರೆ ಬೆಂಗಳೂರಿನಂತಹ ಸಿಟಿಯಲ್ಲಿ ಸುರಕ್ಷಿತ ಸ್ಥಳ ಸಿಗುವುದು ಕಷ್ಟ ಇಲ್ಲಿನನಗೆ ಯಾವ ತೊಂದರೆಯೂ ಇಲ್ಲ. ನನ್ನ ತಾಯಿಯಂತೆ, ನನ್ನ ಅತ್ತೆಯಂತೆ, ಈ ಆಂಟಿ ನನ್ನ ಯೋಗಕ್ಷೇಮವನ್ನು ನೋಡಿಕೊಂಡಿದ್ದಾರೆ. ಅಂಥಾದ್ದರಲ್ಲಿ ಆಂಟಿಗೆ ನಮ್ಮಗಳ ಅಗತ್ಯವಿರುವಾಗ , ನಾವು ಸ್ವಾರ್ಥಿಗಳಾಗ ಬಾರದು... ಅವರ ಕಷ್ಟದಲ್ಲಿ ನಾವುಗಳು ನೆರವಾಗಬೇಕು. ಅದು ನಮ್ಮ ಧರ್ಮ... ಹೀಗೆ ಚಿಂತಿಸಿದಳು ಪೂರ್ಣಿಮಾ.

  

ಬ್ಯಾಂಕಿನಲ್ಲಿ ಚಂದ್ರನನ್ನು ಕಂಡು ಪೂರ್ಣಿಮಾ ಸಣ್ಣಗೆ ಬೆವೆತಳು. ಕೋರ್ಟಿನಲ್ಲಿ ಹಿಯರಿಂಗ್ ಇದ್ದಾಗ ಕೇಶುಮಾವನೊಡನೆ ಹೋಗಿದ್ದಳು. ಆಗ ಅವನು ಏನೂ ಮಾತನಾಡಿರಲಿಲ್ಲ. ಇಲ್ಲಿ ಈಗ ಯಾಕೆ ಬಂದಿದ್ದಾನೋ ಎಂಬ ಅನುಮಾನ ಕಾಡಿತು. ಅವನು ಅವಳು ಕುಳಿತಿದ್ದ ಡೆಸ್ಕ್ ಬಳಿಗೆ ಬಂದಿದ್ದ.

''ಹಲೋ ಪೂರ್ಣಿಮಾ ಹೇಗಿದೀಯ ?''ಅಂತ ಕೇಳಿದಾಗ, ಅವಳು ಉತ್ತರಿಸದೇ ಅವನನ್ನೇ ತಲೆ ಎತ್ತಿ ನೋಡಿದಳು. ಮಾತನಾಡಲಿಲ್ಲ.

''ಓ....ಕೇ... ಮಾತಾಡಬಾರದುಅಂತಿದ್ರೆ ಬೇಡ... ನನಗೆ ಗೊತ್ತು ನೀನು ಹಾಯಾಗಿದೀಯ . ನನ್ನ ಕಾಟವಿಲ್ಲದೇ ಅಲ್ವಾ ? ''ಅವನು ನಕ್ಕಾಗ ಅವಳು ಹಲ್ಲು ಕಡಿದಳು. ಇಲ್ಲಿ ನನ್ನ ಕಲೀಗ್ಸ್ ಎದುರು ಏನು ರಂಪ ಮಾಡಿ ಬಿಡುವನೋ ಎಂಬ ಭಯ ಕಾಡಿತು.

''ಇಲ್ಲಿ ಬ್ಯಾಂಕ್ ಮ್ಯಾನೇಜರ್ ಹತ್ತಿರ ಕೆಲಸವಿತ್ತು. ಬಂದಿದ್ದೆ... ಹಾಗೇ ನಿನ್ನನ್ನೂ ಕಂಡೆ... ಓ.ಕೇ. ಬರ್ತೀನಿ''ಎಂದು ಹೇಳಿ ತಿರುಗಿದ. ಸಧ್ಯ ಹೋದನಲ್ಲ ಅಂತ ಹಾಯೆನಿಸಿದರೂ, ಮನಸ್ಸು ಕದಡಿ ಹೋಗಿತ್ತು. ಇವನೊಂದು ತರಹ ಜಿಗಣೆ... ನನ್ನ ಜೀವನದ ಮೂರು ನಾಲ್ಕು ವರ್ಷಗಳನ್ನು ಹಾಳು ಮಾಡಿದವನು ಈಗ ಇನ್ನು ಏನು ಉಳಿದಿದೆಯೋ...? ಲಾಯರ್ರು ಸದ್ಯದಲ್ಲೇ ಕೋರ್ಟು ತೀರ್ಪು ಕೊಡಲಿದೆ ಅಂತ ಹೇಳಿದ್ದರಂತೆ. ಈಗ ಮತ್ತೆ ಕಾಣಿಸಿಕೊಂಡು ಬೇರೆ ಇನ್ನೇನು ನಾಟಕ ಆಡಲಿದ್ದಾನೋ ಅಂತ ಅನ್ನಿಸತೊಡಗಿತ್ತು.

ತನಗೆ ಡೈವೋರ್ಸ್ ಆಗಲಿದೆ ಎಂದು ಅವಳು ಯಾರಿಗೂ ಹೇಳಿರಲಿಲ್ಲ. ಮದುವೆಯಾಗಿದೆ ಎಂದೇ ಹೇಳಿರಲಿಲ್ಲ. ಈಗ ಇವನು, ತಾನಿರುವ ಜಾಗಕ್ಕೆ ಬಂದು ಏನು ರಂಪ ಮಾಡುವನೋ ಅಂಥ ಕೆಲಸಕ್ಕೂ ಹೇಸದ ಮನುಷ್ಯ ಅಂತ ಅನ್ನಿಸಿದಾಗ , ತಾನು ಹುಶಾರಾಗಿರಬೇಕು. ಯಾರಿಗಾದರೂ ಒಬ್ಬರಿಗಾದರೂ ಈ ವಿಷಯವನ್ನು ತಿಳಿಸಬೇಕೆಂದುಕೊಂಡಳು. ಆದರೆ ಆತ್ಮೀಯರು ಯಾರು ? ಸುಜಯ, ಸೌಜನ್ಯರಲ್ಲಿ ನಂಬಿಕೆ ಇರಲಿಲ್ಲ. ಪುಷ್ಪ ವಿನುತರಿಗೆ ಇವಳ ಕತೆ ಕೇಳಲು ಸಹನೆಯಿಲ್ಲ. ಉಳಿದವಳು ಗಾಯತ್ರಿ. ಅವಳೇ ವಾಸಿ. ತನಗೆ ಸಮಯ ಬಂದರೆ ಸಹಾಯ ಮಾಡಬಹುದು. ತಾನು ಎಲ್ಲ

ವಿಷಯವನ್ನು ಅವಳಿಗೆ ಹೇಳಿಬಿಡಬೇಕು ಎಂದುಕೊಂಡು ಮನೆಗೆ ಬಂದಳು. ಆದರೆ ಮನೆಯ ಮುಂದೆ ನಿಂತಿದ್ದ ಆಂಬ್ಯುಲೆನ್ಸ್‌ನ್ನು ಕಂಡು ಅವಳ ಎದೆ ನಡುಗಿತು. ಯಾರಿಗೆ ಏನಾಯ್ತೋ ದೇವರೆ, ಎಂದು ಎದೆಯ ಮೇಲೆ ಕೈ ಇಟ್ಟುಕೊಂಡೇ ಒಳಗೆ ಬಂದಳು. ಅಲ್ಲಿಯೇ ನಿಂತಿದ್ದ ಪುಷ್ಪ ನುಡಿದಳು.

''ಆಂಟಿ ಬಚ್ಚಲಲ್ಲಿ ಜಾರಿ ಬಿದ್ದು, ಅವರಿಗೆ ಜ್ಞಾನವೇ ಇಲ್ಲ. ಅವರನ್ನು ನರ್ಸಿಂಗ್ ಹೋಂಗೆ ಕರೆದುಕೊಂಡು ಹೋಗ್ತಾ ಇದಾರೆ'' ಅಂತ. ಇವಳಿಗೆ ತುಂಬಾ ವ್ಯಥೆಯಾಗಿತ್ತು. ಅಲ್ಲಿಯೇ ನಿಂತಿದ್ದ ದಿವಾಕರನ ಕಡೆ ನೋಡಿದಳು. ಅವನ ಮುಖ ಕಳಾಹೀನವಾಗಿತ್ತು.... ಅವನಿಗೆ ಸಮಾಧಾನ ಹೇಳಬೇಕೆನಿಸಿತ್ತು. ಆದರೆ ಹೇಗೆ ?

ಆಂಬ್ಯುಲೆನ್ಸ್ ಹತ್ತುವ ಮೊದಲು ದಿವಾಕರ ಅವಳ ಕೈಗಳನ್ನು ಹಿಡಿದು ಕೇಳಿಕೊಂಡಿದ್ದ. ಅಪ್ಪ ಏನನ್ನೂ ಹೇಳುವ ಸ್ಥಿತಿಯಲ್ಲಿರಲಿಲ್ಲ...ಪ್ಲೀಸ್ ಅವರಿಗೆ ಸಮಾಧಾನ ಹೇಳ್ತೀರಾ ? ಅಂತ. ಹೂಂ ಎಂದು ತಲೆಯಾಡಿಸಿದಳು. ಆದರೆ ... ಏನು ಸಮಾಧಾನ ಹೇಳಿಯಾಳು ? ಇಂಥ ಸಮಯದಲ್ಲಿ ಮನೆಯವರು ಇರಬೇಕು. ಮಗಳು ಹತ್ತಿರದಲ್ಲಿದ್ದರೆ ಚೆನ್ನಾಗಿರುತ್ತಿತ್ತೆನಿಸಿತು. ಆಂಬ್ಯುಲೆನ್ಸ್ ಅತ್ತ ಹೋದ ಕೂಡಲೇ ಇತ್ತ ಗಾಯತ್ರಿ ಬಂದಳು.ಪೂರ್ಣಿಮಾ ತನಗೇ ಅರಿವಿಲ್ಲದೇ ಅವಳನ್ನು ತಬ್ಬಿಕೊಂಡು ಅತ್ತಳು.

''ಯಾಕೆ ... ಏನಾಯ್ತು ಪೂರ್ಣಿಮಾ... ಯಾಕೆ ಅಳ್ತಿದೀರಿ'' ಅಂತ ಕೇಳಿದಾಗ, ಅಲ್ಲಿಯೇ ಇದ್ದ ಪುಷ್ಪ ನಡೆದ ವಿಷಯವನ್ನು ತಿಳಿಸಿದಳು.

''ಓಹ್ ನೀವ್ಯಾಕೆ ಇಷ್ಟು ಅಪ್ಸೆಟ್ ಆಗ್ತೀರಾ ? ಆಂಟಿಗೆ ಏನೂ ಆಗುಲ್ಲ. ಒಂದೆರಡು ದಿನಗಳಲ್ಲಿ ಹುಶಾರಾಗಿ ಬರ್ತಾರೆ. .. '' ಗಾಯತ್ರಿ ಸಮಾಧಾನ ಹೇಳುತ್ತಲೇ ಇದ್ದಳು. ಪುಷ್ಪಾ ತನ್ನ ಲಗೇಜನ್ನು ಸಿದ್ಧ ಮಾಡಿಕೊಳ್ಳುತ್ತಿದ್ದಳು. ಸೌಜನ್ಯ, ಸುಜಯ ಆಗಲೇ ಹೊರಟು ಹೋಗಿದ್ದರು. ಗಾಯತ್ರಿ ನೊಂದುಕೊಂಡಳು.

ಇನ್ನುಳಿದವಳು ವಿನುತ. ಅವಳು ಎಲ್ಲಿ ಇರುವಳೆಂಬ ಖಾತರಿ ಇಲ್ಲ. ಈಗ ತಾನೂ ಇರದಿದ್ದರೆ ಪೂರ್ಣಿಮಾ ಒಬ್ಬಳಾಗಿ ಬಿಡುತ್ತಾಳೆ... ಎಂದುಕೊಂಡು ಪೂರ್ಣಿಮಾಳಿಗೆ ಸಮಾಧಾನ ಹೇಳಿದಳು.

''ನೀವು ವರಿ ಮಾಡ್ಕೋಬೇಡಿ ಪೂರ್ಣಿಮಾ. ನಾನು ಸದ್ಯಕ್ಕೆ ಎಲ್ಲಿಯೂ ಹೋಗುವವಳಲ್ಲ. ಅವರ‍್ಯಾರಿಗೂ ಹೋಗಬೇಡಿರೆಂದು ಹೇಳುವ ಹಕ್ಕು ನಮಗಿಲ್ಲ. ನಾವಿಬ್ಬರೇ ನಮ್ಮ ಕೈಲಾದ ಸಹಾಯವನ್ನು ಮಾಡೋಣ. ಇಷ್ಟರ ಮೇಲೆ ದೇವರಿದ್ದಾನೆ.'' ಅವಳ ನುಡಿಗಳು ಇವಳಲ್ಲಿ ಧೈರ್ಯವನ್ನು ತುಂಬಿತು.

''ನನಗೆ ಅಕ್ಕಂದಿರು ಇಲ್ಲ... ನೀವಿ ನನ್ನ ಹಿರಿಯಕ್ಕ. ಮನೆಯಿಂದ ಹೊರಗೆ ಎಲ್ಲೋ ಇರುವಾಗ, ನಮಗೆ ನಮ್ಮ ಸಮೀಪದವರ ಹಿತನುಡಿಗಳ ಅವಶ್ಯಕತೆ ಇರುತ್ತದೆ. ನನಗೀಗ ನೆಮ್ಮದಿ ಸಿಕ್ಕಿತು '' ಎಂದು ನುಡಿದಾಗ ಗಾಯತ್ರಿ ಅವಳ ತಲೆ ಸವರಿದಳು.

ನೀನು ನನ್ನ ಪುಟ್ಟ ತಂಗಿ. ನೀನು ನಿನ್ನ ವಯಸ್ಸಿಗಿಂತಲೂ ಚಿಕ್ಕವಳಾಗಿ ಕಾಣ್ತೀಯ. ಮನೆಯಲ್ಲಿ ಮುದ್ದಾಗಿ ಬೆಳೆದಿದೀಯ. ಆದುದರಿಂದ ನಿನಗೆ ವೇದನೆ, ಕಷ್ಟ ಅಂತಂದ್ರೆ ಬಹುಶಃ

ತಿಳಿದಿರಲಾರದು. ನಾನು ದೊಡ್ಡ ಸಂಸಾರದಲ್ಲಿ ಬೆಳೆದವಳು., ದಿನ ನಿತ್ಯ ಒಂದಲ್ಲ ಒಂದು ತಾಪತ್ರಯವಿದ್ದೇ ಇರುತ್ತಿತ್ತುತ. ಅದನ್ನೆಲ್ಲಾ ಸಹಿಸಲಾಗದೇ ಮನೆಯಿಂದ ಹೊರಬಿದ್ದವಳು. ನನಗೆ ಈಗ ಆ ಮನೆ ದೂರವಾಗಿದೆ. ಇಷ್ಟು ದೊಡ್ಡ ಸಿಟಿಯಲ್ಲಿ ನನ್ನದೇ ಆದ ಒಂದು ಸ್ವಂತ ಗೂಡಿಲ್ಲ. ನನ್ನ ಕತೆ ಕೇಳಿದರೆ, ನಿನಗೇನನ್ನಿಸುತ್ತೋ ನನಗೆ ತಿಳಿಯದು. ನನಗೂ ಒಬ್ಬ ಪುಟ್ಟ ತಂಗಿಯ ಅವಶ್ಯಕತೆ ಇದೆ... ನಾನು ನಿನ್ನ ಮನದ ಅಳಲನ್ನು ಯಾರೊಡನೆಯಾದರೂ ಹಂಚಿಕೊಳ್ಳಬೇಕೆಂಬ ಆಸೆ ನನಗಿದೆ... ಎನ್ನುತ್ತಾ ತನ್ನ ಕತೆಯನ್ನೆಲ್ಲಾಹೇಳಿಕೊಂಡಳು.

''ಪೂರ್ಣಿಮಾ ನೀನಿನ್ನು ಚಿಕ್ಕವಳು. ಪ್ರಪಂಚದ ಅನುಭವ ಸಾಲದು. ಬೇಗ ಅಪ್ಸೆಟ್ ಆಗಿ ಬಿಡ್ತೀರಿ....''

''ನಾನು ಚಿಕ್ಕವಳಿರಬಹುದು. ಆದರೆ ನನಗೆ ಸಂಬಂಧಿಸಿದ ವಿಷಯ ಚಿಕ್ಕದಲ್ಲ ....'' ಎನ್ನುತ್ತಾ ತನ್ನ ತಂದೆಗೆ ಬೇಡದ ಹೆಣ್ಣು ಮಗುವಾಗಿ ಹುಟ್ಟಿದ ವಿಷಯದಿಂದ ಶುರುಮಾಡಿ, ಈದಿನ ಚಂದ್ರ ಮತ್ತೆ ಬ್ಯಾಂಕಿನಲ್ಲಿ ಕಂಡಾಗ ಉಂಟಾಗ ಅಂಜಿಕೆಯವರೆಗೂ ಎಲ್ಲವನ್ನೂ ಚಾಚೂ ತಪ್ಪದೇ ಹೇಳಿದಳು. ಗಾಯತ್ರಿಗೆ ಖೇದವೆನಿಸಿತು. ಈ ಹುಡುಗಿಯ ಹೃದಯದಲ್ಲಿ ಎಷ್ಟು ಕೋಲಾಹಲವಿದೆ. ಈ ಹುಡುಗಿಯ ನೋವು ತನ್ನ ಕಷ್ಟಕ್ಕಿಂತ ದೊಡ್ಡದು. ಅಂತಂದುಕೊಂಡು ಅವಳನ್ನು ತಬ್ಬಿಕೊಂಡು ಸಮಾಧಾನದ ಮಾತುಗಳನ್ನಾಡಿದಳು.

ಇಬ್ಬರ ಹೃದಯವೂ ಹಗುರವಾಗಿತ್ತು. ಉಳಿದವರು ಹೊರಟು ಹೋಗಿದ್ದರು. ವಿನುತ ಇನ್ನೂ ಬಂದಿರಲಿಲ್ಲ. ಅಷ್ಟರಲ್ಲಿ ಅವಳಿಂದ ಫೋನು ಬಂದಿತ್ತು. ನಮ್ಮ ಮಾವನಿಗೆ ಹುಷಾರಿಲ್ಲ ಅಂತ ನಾನು ನಮ್ಮ ಅತ್ತೆಯ ಮನೆಯಲ್ಲಿಯೇ ಉಳಿದುಕೊಂಡಿದ್ದೇನೆ. ಈ ರಾತ್ರಿ ಬರುವುದಿಲ್ಲ ಎಂದು ತಿಳಿಸಿದಳು. ಗಾಯತ್ರಿ ಇಲ್ಲಿಯ ವಿಷಯವನ್ನು ಅವಳಿಗೆ ತಿಳಿಸಲಿಲ್ಲ. ಬಹಳ ತಡವಾಗಿ ದಿವಾಕರನ ಪೋನು ಬಂದಿತ್ತು. ''ಅಮ್ಮನಿಗೆ ಈಗ ತಾನೇ ಜ್ಞಾನ ಬಂದಿದೆ. ಹುಶಾರಾಗಿದಾರೆ. ಅಪ್ಪನಿಗೆ ಈ ವಿಷಯ ತಿಳಿಸಿ ಬಿಡಿ. ನಾನು ಈ ರಾತ್ರಿ ಇಲ್ಲಿಯೇ ಇರ್ತೀನಿ ಅಂತ ಹೇಳಿದ್ದ...''

ಗಾಯತ್ರಿ ಆತನಿಗೆ ವಿ,ಯವನ್ನು ತಿಳಿಸಿದಾಗ, ಆತನ ಮುಖದಲ್ಲಿ ಸಮಾಧಾನದ ಗೆರೆಗಳು ಗೋಚರಿಸಿದ್ದವು. ಪೂರ್ಣಿಮಾಳಿಗೆ ತನ್ನ ತಂದೆಯ ನೆನಪಾಗಿತ್ತು. ತನ್ನ ತಂದೆ, ಈತನಂದೆ ಅಲ್ಲ. ಇಲ್ಲಿ ಗಂಡ ಹೆಂಡತಿ ಅನ್ಯೋನ್ಯವಾಗಿದಾರೆ, ತನ್ನ ತಾಯಿಗೆ ಏನಾದರೂ ಆದರೆ, ತನ್ನ ತಂದೆ ಕೇರ್ ಮಾಡುವುದಿಲ್ಲ ಅಂತ ಅನ್ನಿಸಿದಾಗ ತಾಯಿಯ ಬಗ್ಗೆ ಮರುಕ ಉಕ್ಕಿತು. ದಿವಾಕರನಂತಹ ಒಬ್ಬ ಮಗ ತನ್ನ ತಂದೆಗೆ ಇದ್ದಿದ್ದರೆ,ತನ್ನ ತಂದೆಗೂ ಸಂತೋಷವಾಗಿರುತ್ತಿತ್ತು, ಅಮ್ಮನಿಗೂ ಹಾಯಾಗಿರುತ್ತಿತ್ತು ಅಂತೆನ್ನಿಸಿದಾಗ ತಾನು ಹೆಣ್ಣಾದರೇನಂತೆ. ಗಂಡು ಹುಡುಗನಂತೆ ಸಂಪಾದಿಸುತ್ತಿಲ್ಲವೇ ? ಅಪ್ಪ ಅಮ್ಮನಿಗೆ ಈಗ ನಾನೇ ಹಿರಿಯ ಮಗನಂತೆ... ಮರುಕ್ಷಣದಲ್ಲೇ ಚಂದ್ರನ ಚಿತ್ರ ಕಣ್ಣ ಮುಂದೆ ಸುಳಿಯಿತು. ಎಲ್ಲಾ ಕರ್ತವ್ಯವನ್ನು ಮರೆತು, ಎಲ್ಲಿಯೋ ತಿರುಗಾಡಿಕೊಂಡಿದಾನೆ, ಇಂತಹ ಮಗನನ್ನು ಪಡೆದ ಅತ್ತೆ ನಿಜಕ್ಕೂ ದುರಾದೃಷ್ಟವಂತೆ... ಅಂತಂದುಕೊಂಡು ಅತ್ತೆಗಾಗಿ ಮಿಡುಕಿದಳು.

''ನೀವು ತುಂಬಾ ಯೋಚನೆ ಮಾಡ್ತೀರಿ ಪೂರ್ಣಿಮಾ... ಅದು ಆರೋಗ್ಯಕ್ಕೆ ಒಳ್ಳೇದಲ್ಲ.''

''ಏನು ಮಾಡಲಿ ಗಾಯತ್ರಿ ? ಮೊದಲ್ನಿಂದಲೂ ಹಾಗೇ ಆಯ್ತು... ತಂದೆಯ ಅನಾದರಣೆಗೆ ಒಳಗಾದಾಗ ತಾಯಿಯ ಬಗ್ಗೆ, ಗಂಡನ ಅನಾದರಣೆಗೆ ಒಳಗಾದಾಗ, ನನ್ನ ಬಗ್ಗೆ ಚಿಂತಿಸಿ, ಚಿಂತಿಸಿ ನನಗೆ ಅದೇ ಕೆಲಸವಾಗಿ ಹೋಗಿದೆ... ಈಗ ಈ ಆಂಟಿಯ ಬಗ್ಗೆ.....''

''ಬರೀ ಆಂಟಿಯ ಬಗ್ಗೇನೋ ಅಥವಾ ಆಂಟಿಯ ಮಗನ ಬಗ್ಗೇನೂ ಚಿಂತಿಸ್ತೀರೋ... ''ಅವಳ ಮಾತಿನಿಂದ ಮೈ ಬಿಸಿಯಾಯಿತು.

''ನಾನೇಕೆ ಅವನ ಬಗ್ಗೆ ಚಿಂತಿಸಲಿ ?'' ಬಾಯಿ ಹಾಗೆ ನುಡಿದರೂ ಉಸಿರಾಟದ ವೇಗ ಅಧಿಕವಾಗಿತ್ತು. ಆ ದಿನದ, ಅವನ ಕೈಯ ಬಿಸಿ, ಅವಳ ಅಂಗಾಂಗಗಳಲ್ಲಿ ಬಿಸಿಯನ್ನುಂಟು ಮಾಡಿತ್ತು. ಆ ಕ್ಷಣದಲ್ಲಿ ಕೈಗಳನ್ನು ಬಿಡಿಸಿಕೊಂಡರೂ, ಆ ಸ್ಪರ್ಶದ ಅನುಭವದಿಂದ ಬಿಡಿಸಿಕೊಳ್ಳಲಾಗಿರಲಿಲ್ಲ. ಆದರೆ ಆ ಅನುಭವವನ್ನು ತನ್ನಲ್ಲೇ ಅದುಮಿಟ್ಟುಕೊಂಡಿದ್ದಳು. ಇದು ಆಕಸ್ಮಿಕವಾಗಿ ನಡೆದದ್ದು. ಅವನು ಬೇಕಂತ ಮಾಡಿದುದಲ್ಲ. ನನಗೆ ಅವನಲ್ಲಿ ಏನೂ ಆಕರ್ಷಣೆ ಇಲ್ಲ ಎಂದು ತನಗೆ ತಾನೇ ಹೇಳಿಕೊಂಡಿದ್ದಳು. ಆದರೆ ಈಗ, ಗಾಯತ್ರಿಯ ಮಾತಿನಿಂದ ಅವಳ ಅಂತರಂಗದಲ್ಲಿ ಏನೋ ಚಲಿಸಲಾರಂಬಿಸಿತು. ತನ್ನ ತಲೆಯನ್ನು ಕೊಡವಿಕೊಂಡಳು. ಮತ್ತೆ ತಾನು, ಈ ಪ್ರೀತಿ ಪ್ರೇಮದ ಜಾಲಕ್ಕೆ ಬೀಳಬಾರದು ಎಂದು ತನಗೆ ತಾನೇ ಅನೇಕ ಸಾರಿ ಹೇಳಿಕೊಂಡಳು.

ಒಂದೆರಡು ದಿನಗಳಲ್ಲಿ ಆಂಟಿ ಹುಶಾರಾಗಿ ಮನೆಗೆ ಬಂದಿದ್ದಳು. ಬಿ.ಪಿ. ಹೆಚ್ಚಾಗಿದ್ದುದರಿಂದಲೂ, ನಿಶ್ಶಕ್ತಿಯಿಂದಲೂ ಜ್ಞಾನ ಹೋದಂತಾಗಿತ್ತು. ಎರಡು ದಿನಗಳಲ್ಲಿ ದಿವಾಕರ ಬಳಲಿ ಹೋಗಿದ್ದ. ಅವನೂ ಜ್ವರದಿಂದ ನರಳಿ, ಎರಡು ದಿನಗಳಿಂದ ಆತಂಕದಿಂದ ಸುಸ್ತಾಗಿದ್ದ. ಮನೆಗೆ ಬಂದವನೇ ಮಲಗಿಬಿಟ್ಟ. ಈ ದಿನಗಳಲ್ಲಿ ಗಾಯತ್ರಿ ಹಾಗೂ ಪೂರ್ಣಿಮಾ ಮನೆಯ ಕೆಲಸಗಳನ್ನು ನೋಡಿ ಕೊಂಡಿದ್ದರು. ಗಾಯತ್ರಿ ಆಫೀಸಿಗೆ ರಜೆ ಹಾಕಿ ಮನೆಯಲ್ಲೇ ಉಳಿದುಕೊಂಡಿದ್ದಳು. ಆಂಟಿ ಕೃತಜ್ಞತೆಯಿಂದ ಇಬ್ಬರಿಗೂ ಕೈ ಮುಗಿದಳು.ಇಬ್ಬರಿಗೂ ಸಂಕೋಚವಾಯಿತು.

''ಯಾವ ಜನ್ಮದಲ್ಲಿ ನೀವು ನನ್ನ ಮಕ್ಕಳಾಗಿ ಹುಟ್ಟಿದ್ದರೋ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳೇ ನನ್ನನ್ನು ನೋಡಿಕೊಂಡು ಹೋಗಲು ಬಂದಿಲ್ಲ'' ಅವಳು ಅಲವತ್ತು ಕೊಂಡಳು.

''ಅವರಿಗೆ ವಿಷಯ ತಿಳಿಯದು. ನಾವ್ಯಾರೂ ತಿಳಿಸಿಯೇ ಇಲ್ಲ''

''ದಿವೂ ತಿಳಿಸಲಿಲ್ವೇನೋ... ನಿನ್ನ ತಂಗಿಗೆ.... ''

''ಇಲ್ಲಮ್ಮಾ, ಅವಳು ಬಂದು ಏನು ಮಾಡ್ತಾಳೆ ? ಅವಳ ಮಕ್ಕಳಿಗೆ ಸ್ಕೂಲಿಗೆ ರಜೆ ಇದೆಯೋ ಇಲ್ಲವೋ ಅಂತ ಸುಮ್ಮನಾದೆ.''

''ಆಮೇಲೆ ತಿಳಿಸ್ಲಿಲ್ಲ ಅಂತ ಆಕ್ಷೇಪಣೆ ಮಾಡ್ತಾಳೆ. ಫೋನು ಮಾಡಿ ತಿಳಿಸಿಬಿಡು.''

''ಆಯ್ತಮ್ಮಾ....''ಅವನು ಮುಸುಕು ಬೀರಿ ಮಲಗಿದ.

''ನೋಡಿ... ನನಗೆ ಎಂತಹ ಸ್ಥಿತಿ ಬಂತು. ನನ್ನ ಕೈಲಾದ ಮಟ್ಟಿಗೆ ಓಡಾಡಿಕೊಂಡು

ಸಂಪಾದಿಸ್ತಿದ್ದೆ. ಈಗ ಕಾಲು ಮುರಿದ ಕೋಳಿಯಂತಾಗಿದೀನಿ.''

''ಹಾಗೆಲ್ಲಾ ಯೋಚಿಸಲೇ ಬೇಡಿ ಆಂಟಿ... ಬೇಗ ರಿಕವರ್ ಆಗ್ತೀರಾ....''

''ಇದ್ದಕ್ಕಿದ್ದಂತೆ, ಎಷ್ಟು ಖರ್ಚಿಗೆ ಬಂತು... ಖರ್ಚಿಗೆ ಏನು ಮಾಡಿದ್ನೋ ಹೇಳಲೇ ಇಲ್ಲ...'' ಇಬ್ಬರೂ ಮುಖ ಮುಖ ನೋಡಿಕೊಂಡರು. ಮುಸುಕು ತೆಗೆದು, ತಲೆ ಎತ್ತಿ ಅವರಿಬ್ಬರ ಕಡೆ ನೋಡಿದ...

''ನಾವು ನಿಮ್ಮ ಮಕ್ಕಳ ಹಾಗೇನೇ ತಾನೇ ... ನಿಮಗೆ ಚೆನ್ನಾಗಿ ಹುಶಾರಾಗುವವರೆಗೆ ನಾವು ನೋಡಿಕೊಳ್ತೀವಿ.'' 'ಥ್ಯಾಂಕ್ಸ್' ಎಂದು ಕಣ್ಣಲ್ಲೇ ಸೂಚಿಸಿ ಮತ್ತೆ ಮುಖಕ್ಕೆ ಮುಸುಕೆಳೆದ. ಇಬ್ಬರಿಗೂ ನಗು ಬಂದಿತ್ತು.

ಅಂದಿನಿಂದ ಗಾಯತ್ರಿ ಹಾಗೂ ಪೂರ್ಣಿಮಾ ಆ ಮನೆಯವರಂತೆಯೇ ಆಗಿಬಿಟ್ಟರು. ತಾಯಿಗೆ ಹುಶಾರಿಲ್ಲವೆಂದು ತಿಳಿದು ಮಗಳು ಲತಾ, ಒಂದು ದಿನದ ಮಟ್ಟಿಗೆ ಬಂದು ಹೋಗಿದ್ದಳು. ''ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ'' ಅನ್ನೋ ಗಾದೆ ಮಾತು ನನ್ನ ಮಟ್ಟಿಗಂತೂ ಸತ್ಯವಾಗಿ ಹೋಗಿದೆ. ಇರಬೇಕೂಂತ ಅನ್ನಿಸಿದರೂ ಯಾವಾಗ ಬಂದರೂ, ಒಂದು ದಿನದ ಮಟ್ಟಿಗೆ ಮಾತ್ರ ನನ್ನ ಕೈಲಿ ಇರೋಕ್ಕೆ ಆಗೋದು...

''ನಿನಗೆ ಇರೋ ಮನಸ್ಸಿಲ್ಲ... ಇಲ್ಲದಿದ್ದರೆ ನಿನ್ನ ಗಂಡನಿಗೆ ಹೇಳಿ ಒಂದು ವಾರ ಬೇಕಾದ್ರೂ ಇರಬಹುದು. ಒಂದು ತಿಂಗಳು ಬೇಕಾದ್ರೂ ಇರಬಹುದು.''

''ಸಾಕು ಸುಮ್ಮನಿರೋ... ಇಲ್ಲಿ ವಾರಗಟ್ಟಲೆ ಕೂತರೆ ನಿನಗೇ ಕಷ್ಟ, ಮೊದಲೇ ಇಲ್ಲಿಯ ಖರ್ಚು ವೆಚ್ಚ ಹೆಚ್ಚು...ಆ ಮೇಲೆ ನನ್ನನ್ನೇ ಅಂತೀಯ''

''ನನಗೆ ಸಂಪಾದನೆ ಇಲ್ಲ ಅಂತ ಹಂಗಿಸಿ ಅನ್ನಬೇಡ ನೋಡು...''

''ಇರೋ ಮಾತನ್ನು ಹೇಳಿದೆ. ಅಮ್ಮ ದುಡಿದು ಸಂಪಾದಿಸ್ತಾಳೆ. ನೀನು ಹಾಯಾಗಿ ಕುಳಿತು ತಿಂತಿದೀಯಾ... ನೋಡು ಹೇಗೆ ಬೊಜ್ಜು ಬೆಳೆದಿದೆ.''

'ಬೊಜ್ಜು ನನಗೆ ತಾನೇ ಬೆಳೆದಿರೋದು. ನಿನಗೇನು ಕಷ್ಟ....?''

''ಸಾಕು ನಿಲ್ಲಿಸಿ. ಅಣ್ಣ ತಂಗಿ ಅನ್ನೋ ಪ್ರೀತಿಯೇ ಇಲ್ಲವಲ್ಲ ನಿಮ್ಮಲ್ಲಿ. ಕಾಲು ಕೆರೆದು ನಿಂತಿರ್ತೀರಿ ಜಗಳ ಕಾಯೋಕೆ.''

''ನಾನು ಬರೋದೇ ಅಪರೂಪ. ಬಂದರೂ ಒಂದು ದಿನದ ಮೇಲಿರುಲ್ಲ. ನೋಡಮ್ಮ ಹೇಗೆ ಹಂಗಿಸ್ತಾನೆ ?''

''ನೀನಿನ್ನೇನು ? ಸಂಪಾದಿಸೋ ಯೋಗ್ಯತೆ ಇಲ್ಲ ದಂಡಪಿಂಡ ಅಂತ ತಾನೇ ಅಂದಿದ್ದು ''

''ನೀನು ತಾನೇ ಯಾಕೆ ಹಾಗೆಲ್ಲಾ ಮಾತಾಡ್ತೀಯಾ ? ಏನೋ ಅವನ ಹಣೇಲಿ ಕೆಲಸದ ರೇಖೆಯೇ ಇಲ್ಲವೇನೋ... ಅವನೂ ಹುಡುಕ್ತಾನೇ ಇದಾನೆ.''

''ಇಲ್ಲಿ ನೀನು ಸಂಪಾದಿಸಿ ಹಾಕ್ತೀಯ. ಕಷ್ಟ ಅಂತ ಅಂದ್ರೆ ಏನೂಂತ ಸಹ ಗೊತ್ತಿಲ್ಲ. ನಮ್ಮ ಮನೇಲಿ ನೋಡಿ ಬನ್ನಿ. ಇವರು ದುಡಿದು ಹಾಕ್ತಾರೆ ಉಳಿದವರು ಕಾಲು ಚಾಚಿಕೊಂಡು ಕೂತಿರ್ತಾರೆ.''

''ಯಾರ್‍ಯಾರ ಹಣೇಲಿ ಏನು ಬರೆದಿದೆಯೋ ಯಾರಿಗೆ ಗೊತ್ತು ? ನಿಮ್ಮಪ್ಪನ ಕೈಕಾಲು ಗಟ್ಟಿಯಾಗಿದ್ದಾಗ ನಾವುಗಳೂ, ಹಾಗೆ ತಾನೇ ಮಜಾ ಮಾಡಿದ್ದು. ಇವನ ಅದೃಷ್ಟದ ಬಾಗಿಲು ಇಂದಲ್ಲ ನಾಳೆ ತೆಗೆದೇ ತೆಗೆಯುತ್ತೆ. ಆಗ ನೋಡ್ತಿರು. ನನ್ನನ್ನ ಕಾರ್‍ನಲ್ಲಿ ಕೂರಿಸ್ಕೊಂಡು ರಾಣಿ ತರಹ ಮೆರೆಸ್ತಾನೆ...'' ತಾಯಿ ಅಭಿಮಾನದಿಂದ ಹೇಳಿಕೊಂಡಾಗ ಅವಳು ಮುಖ ತಿರುವಿದಳು. ಇವರುಗಳ ಸಂಭಾಷಣೆಗಳನ್ನು ಕೇಳಿಸಿಕೊಂಡ ಗಾಯತ್ರಿಗೆ ವ್ಯಥೆಯಾಗಿತ್ತು.

''ತಂದೆ ತಾಯಿಗಳ ಪಾತ್ರ ಎಷ್ಟು ಕಷ್ಟ ನೋಡು. ಯಾರನ್ನು ಬಿಟ್ಟು ಕೊಡುವಂತಿಲ್ಲ. ಮಗ ನಿರರ್ಥಕ ಅಂತ ತಿಳಿದರೂ ಅವನ ಪರವಹಿಸಿಕೊಂಡು ಮಾತನಾಡುವುದು ಹೆತ್ತ ತಾಯಿಯಿಂದ ಮಾತ್ರ ಸಾಧ್ಯ.''

ಪೂರ್ಣಿಮಾಳಿಗೆ ತನ್ನ ಅತ್ತೆಯ ನೆನಪಾಗಿತ್ತು. ಅವರೂ ಆದಷ್ಟು ಮಗನನ್ನು ಮುಚ್ಚಿಡಲು ಯತ್ನಿಸಿ ಸೋತಿದ್ದರು. ಒಂದು ವೇಳೆ ಇವನ ಮದುವೆಯಾಗಿ ಸೊಸೆ ಬಂದರೆ, ಆಗ ಆಕೆಯ ಅನಿಸಿಕೆ ಹೀಗೆ ಇರುತ್ತದೆಯೇ ? ಖಂಡಿತಾ ಇಲ್ಲ. ಆದರೆ ಸಂಪಾದಿಸುವ ಸೊಸೆ ಬಂದರೆ ?....

''ಪೂರ್ಣಿಮಾ ನಿಮ್ಮ ಡೈವೋರ್ಸ್ ಕೇಸು ಎಲ್ಲೀವರೆಗೆ ಬಂತು ?'' ಇದ್ದಕ್ಕಿದ್ದಂತೆ ಗಾಯತ್ರಿ ಪ್ರಶ್ನಿಸಿದಾಗ ಬೆಚ್ಚಿದಳು.

''ಮುಂದಿನ ತಿಂಗಳು ಇನ್ನೊಂದು ಹಿಯರಿಂಗ್ ಇದೆ. ಆಮೇಲೆ ಡಿಸೈಡ್ ಆಗುತ್ತೆ ಅಂತ ಹೇಳಿದಾರೆ ಲಾಯರು.''

''ಜೀವನಾಂಶ ಎಷ್ಟು ಸಿಗಬಹುದು ...?''

''ನಂಗೊತ್ತಿಲ್ಲ. ನನಗೆ ಆ ಹಣ ಬೇಡ...''

''ಸಿಗುವ ಹಣಾನು ಬೇಡಾಂತ ಅನ್ನಬಾರದು ಪೂರ್ಣಿಮಾ... ಅವನೇನು ಬಿಟ್ಟಿ ಕೊಡುತ್ತಿಲ್ಲ. ಅದು ನ್ಯಾಯವಾಗಿ ನಿಮಗೆ ಸಿಗಬೇಕಾದದ್ದೇ... ಅದನ್ನೇಕೆ ನಿರಾಕರಿಸಬೇಕು...ನಿಮ್ಮ ಖರ್ಚಿಗೇ ಬೇಕಾಗುತ್ತದೆ.''

''ನನ್ನ ಖರ್ಚಿಗೆ ನಾನು ಸಂಪಾದಿಸ್ತೀನಲ್ಲ.''

''ಈ ಸಂಪಾದನೆ ನಿಮ್ಮದೇ. ಇದರಲ್ಲಿ ನೀವು ಏನು ಉಳಿತಾಯ ಮಾಡುಕ್ಕಾಗುತ್ತೆ. ಒಟ್ಟಿಗೇ ಒಂದಿಷ್ಟು ಹಣ ಕೈಗೆ ಬಂದರೆ, ಬ್ಯಾಂಕಿನಲ್ಲಿ ಡಿಪಾಸಿಟ್ ಮಾಡಬಹುದು. ನಿಮಗೆ ಬೇಕಾದವರಿಗೆ ಕೊಡಬಹುದು. ನಿಮ್ಮ ಮದುವೆಗೆ ಎಷ್ಟು ಖರ್ಚಾಗಿತ್ತು ಹೇಳಿ?''

''ಎಷ್ಟಾಗಿತ್ತೋ ಸರಿಯಾಗಿ ತಿಳಿಯದು. ನಮ್ಮ ಸೋದರ ಮಾವನಿಗೆ ಗೊತ್ತು....''

''ಈ ಕಾಲದಲ್ಲಿ ಏನಿಲ್ಲ ಅಂದ್ರೂ ಎರಡು ಲಕ್ಷವಾದರೂ ಖರ್ಚಾಗಿರುತ್ತೆ. ಅಷ್ಟನ್ನೂ ವಸೂಲಿ ಮಾಡಿ, ಬಿಡಬೇಡಿ. ಅದನ್ನು ನಿಮ್ಮ ಮಾವನಿಗೋ, ತಾಯಿಗೋ ಕೊಡಿ... ಅಥವಾ ನಿಮಗೆ ಬೇಕಾದವರಿಗೆ ಕೊಡಿ...''

''ನನಗೆ ಬೇಕಾದವರು ಬೇರೆ ಯಾರಿದಾರೆ ?''

''ಯಾಕೆ ನಾನು ಇಲ್ಲವಾ? '' ನಗಲು ಪ್ರಯತ್ನಿಸಿದಳು.

''ನಿಮಗೆ ನನ್ನ ಹಣದ ಅಗತ್ಯ ಏನಿದೆ ಗಾಯತ್ರಿ... ನೀವು ಆಫೀಸರ್ ಆಗಿದೀರಿ... ನಿಮಗೆ ಸಂಬಳಾನೇ ಚೆನ್ನಾಗಿ ಬರುತ್ತೆ.''

'' ನಿಮಗೆ ನನ್ನ ಕತೆ ಗೊತ್ತಿಲ್ಲ. ನನ್ನ ಸಂಬಳದಲ್ಲಿ ಅರ್ಧದಷ್ಟು ಹಣವನ್ನು ನನ್ನ ಫಿಯಾನ್ಸಿಗೆ ಕೊಟ್ಟು ಬಿಡ್ತೀನಿ. ಒಬ್ಬ ಗಂಡಸು ನಿರುದ್ಯೋಗಿಯಾಗಿದ್ದರೆ ಎಷ್ಟೆಷ್ಟು ಮಾತುಗಳನ್ನು ಕೇಳಬೇಕಾಗುತ್ತದೆ ಅಂತ ಈಗ್ತಾನೆ ತಿಳಿತಲ್ಲ.''

''ಸದ್ಯದಲ್ಲೇ ನಿಮ್ಮ ಭಾವೀ ಪತಿಗೆ ಕೆಲಸಕ್ಕೆ ಆರ್ಡರ್ ಬರಲಿದೆ ಅಂತ ಹೇಳಿದ್ರಲ್ಲ.''

''ಹೌದು, ತಕ್ಷಣವೇ ನಾವಿಬ್ರೂ ಮದುವೆಯಾಗ್ತೀವಿ. ನಾವೂ ಒಂದು ಮನೇನ ಗೊತ್ತು ಮಾಡಬೇಕು. ಅಡ್ವಾನ್ಸ್, ಬಾಡಿಗೆ ಎಲ್ಲಾದಕ್ಕೂ ಹಣ ಬೇಡವೇ ?''

''ನಿಮಗೆ ಲೋನ್ ಸಿಗಬಹುದು ಅಲ್ವಾ ಗಾಯತ್ರಿ ''

''ಲೋನ್ ಸಿಗುತ್ತೆ. ಆದರೆ ಅಷ್ಟೇ ಖರ್ಚು ಇದೆ. ನಾನೂ ಬೇರೆ ಮನೆ ಮಾಡಿಕೊಂಡು ಹೊರಟು ಹೋದರೆ ಆಂಟಿಯ ಗತಿಏನು ಅಂತ ಯೋಚಿಸ್ತಿದ್ದೆ ..''

''ಹಾಗಾದ್ರೆ ನೀವೂ ಹೊರಟು ಹೋಗ್ತೀರಾ ? ನಾನು ಒಂಟಿಯಾಗಿ ಬಿಡ್ತೀನಲ್ಲ...'' ಮುಖದಲ್ಲಿ ವ್ಯಥೆ ವ್ಯಕ್ತವಾಯಿತು.

ಅದಕ್ಕೆ ನಾನೊಂದು ಉಪಾಯ ಮಾಡಿದೀನಿ. ನೀವ್ಯಾಕೆ ಒಂಟಿಯಾಗಿರಬೇಕು?

''ಅಂದ್ರೆ ... ನಾನೂ ಮದುವೆ ಮಾಡಿಕೊಂಡು ಹೋಗಿಬಿಡ್ಲಾ ....'' ತಮಾಷೆ ಎಂಬಂತೆ ನಕ್ಕಳು.

''ಹೂಂ ಯಾಕಾಗಬಾರದು ? ಜೀವಮಾನವೆಲ್ಲಾ ಹೀಗೇ ಒಂಟಿಯಾಗಿ ಸನ್ಯಾಸಿ ತರಹ ಇರ್ತೀನಿ ಅಂತ ಆಣೆ ಪ್ರಮಾಣ ಏನೂ ಮಾಡಿಲ್ಲವಲ್ಲ ''

''ಇಲ್ಲ... ಆದರೆ ಮದುವೆಯಾಗುವ ಆಸೆ ಸದ್ಯಕ್ಕಂತೂ ಇಲ್ಲ. ಎಲ್ಲರೂ ನನಗೆ ಇದೇ ಸಲಹೆ ನೀಡ್ತಾರೆ ಯಾಕೆ ಅಂತ....?''

''ಯಾಕೆ ಅಂತಂದ್ರೆ, ನೀವಿನ್ನೂ ಚಿಕ್ಕವರು. ನೋಡಲು ಆಕರ್ಷಕ ವಾಗಿದ್ದೀರಿ...''

''ಅಯ್ಯೋ ಬಿಡಿ ನನ್ನ ಮದುವೆ ಮಾತು ಯಾಕೆ ಈಗ ? ನಿಮ್ಮ ಮದುವೆಯ ವಿಷಯ ಹೇಳಿ....''

''ಏಯ್ ಕಳ್ಳಿ... ಮುಖವನ್ನು ಕನ್ನಡೀಲಿ ನೋಡ್ಕೋಳ್ಳಿ... ಹೇಗೆ ಕೆಂಪಗೆ ಕೆಂಗುಲಾಬಿಯಂತೆ ಅರಳಿದೆ... ನನ್ನ ಮದುವೆಗೆ ಮುಂಚೆ, ನನ್ನ ಫಿಯಾನ್ಸಿಗೆ ನಿಮ್ಮ ಪರಿಚಯ ಮಾತ್ರ ಮಾಡಿಕೊಡುಲ್ಲ.''

''ಯಾಕೆ ? ''ಏನೂ ಅರ್ಥವಾಗಲಿಲ್ಲ ಅವಳಿಗೆ .

''ಅವನು ನನ್ನನ್ನು ಬಿಟ್ಟು ನಿಮ್ಮ ಹಿಂದೆ ಓಡಿಬರುವುದು ಖಂಡಿತಾ... ಗಾಯತ್ರಿ ನಕ್ಕಾಗ, ಇವಳು ನಕ್ಕಂತೆ ಮಾಡಿದಳು. ಇವಳ ಮನಸ್ಸು ಚಂದ್ರನ ಹಿಂದೆ ಓಡಿ ಹೋಗಿತ್ತು. ತನ್ನ ರೂಪಕ್ಕೆ, ಯೌವ್ವನಕ್ಕೆ ಆಕರ್ಷಿತನಾಗಿ ಮರಳು ಮಾಡಿ, ಮದುವೆಗೆ ಮೊದಲೇ ತನ್ನ ಸಂಗ ಬಯಸಿ, ಏಕಾಏಕಿ ತನ್ನನ್ನು ದೂರ ಮಾಡಿದ್ದು ಅಲ್ಲದೇ ದೂಷಿಸಿ.... ''

''ನಾನು ತಮಾಷೆ ಮಾಡಿದೆ ಪೂರ್ಣಿಮಾ... ನನ್ನ ಫಿಯಾನ್ಸಿ ಅಷ್ಟು ವೀಕ್‌ಮೈಂಡ್‌ನವನಲ್ಲ. ನಾವ ಸುಮಾರು ಎಂಟು ವರ್ಷಗಳಿಂದ ಪ್ರೀತಿಸ್ತಾ ಇದೀವಿ... ಇದುವರೆಗೂ ನಾವು ಎಂದೂ ಗಂಡ ಹೆಂಡತಿಯರಂತೆ ಸಂಸಾರ ಮಾಡಿಲ್ಲ. ಆ ದಿನಕ್ಕಾಗಿ ಎದುರು ನೋಡುತ್ತಿದ್ದೇನೆ. ಆ ಸಮಯ ಸದ್ಯದಲ್ಲೇ ಒದಗಿ ಬರಲಿದೆ. ಏನು ಯೋಚಿಸ್ತಿದೀರಿ?''

''ಏನೂ ಇಲ್ಲ...''

''ಏನೂ ಇಲ್ಲದೇ ಇದ್ದರೆ ಒಳ್ಳೇದೇ... ಗುಡ್‌ನೈಟ್... ''ಎಂದು ಮಲಗಲು ಸಿದ್ಧಳಾದಳು. ಹುಣ್ಣಿಮೆಯ ಚಂದ್ರ ಕಿಟಕಿಯ ಬಳಿ ಬಂದು ಕಾಡುತ್ತಿದ್ದ. ಚಂದ್ರನ ಕಿರಣಗಳು ಮೈಮೇಲೆ ಹರಿದಾಡಿದಾಗ, ಮುಳ್ಳು ಚುಚ್ಚಿದಂತೆನಿಸಿತ್ತ. ಕಿಟಕಿಯ ದಿಕ್ಕಿಗೆ ಮುಖಮಾಡಿ ಮಲಗಿದ್ದ ಪೂರ್ಣಿಮಾ ಮಗ್ಗಲು ಬದಲಾಯಿಸಿದಳು. ಯಾರೋ ಮಗ್ಗುಲಲ್ಲಿ ಕುಳಿತು ತನ್ನನ್ನೇ ನೋಡುತ್ತಿದ್ದಾರೆಂದೆಸಿಸಿತ್ತು. ಪಕ್ಕನೆ ಕಣ್ಣು ತೆರೆದಳು. ಯಾರೂ ಕಾಣಲಿಲ್ಲ. ಆದರೂ ಯಾವುದೋ ಒಂದು ಬೆಚ್ಚನೆಯ ಸ್ಪರ್ಶನ ಅನುಭವವಾಗಿತ್ತು. ಮೈಯೆಲ್ಲಾ ಬಿಸಿ ಬಿಸಿ ಅನುಭವವಾದಾಗ ಎದ್ದು ಕುಳಿತಳು. ಸೂರ್ಯನ ಹೊಂಗಿರಣಗಳು ಶರೀರದ ಮೇಲೆ ತುಳುಕಿದ್ದವು. ತನಗಾದ ಅನುಭವ ಕನಸಿನಲ್ಲಿ ಎಂದು ಅರಿವಾಗಲು ಅವಳಿಗೆ ಎಷ್ಟೋ ಸಮಯ ಹಿಡಿಯಿತು. ಆದರೂ ಆ ಕನಸಿಗೆ ಏನೋ ಅರ್ಥವಿದೆ ಎಂದೆನಿಸಿತ್ತು. ಇದೇ ಕನಸು ಮುಂದುವರಿಯಬಾರದೆ ಎಂದು ಹಂಬಲಿಸುತ್ತಾ ಕಣ್ಣುಗಳನ್ನು ಮುಚ್ಚಿ ಮಲಗಿದಳು.

ಅಂಥದೇ ಕನಸು ಪದೇ ಪದೇ ಕಾಣಿಸತೊಡಗಿದಾಗ, ಗಾಯತ್ರಿಯೊಡನೆ ಅದನ್ನು ಕುರಿತು ಹೇಳಿಕೊಂಡಳು. ಅವಳು ಕಣ್ಣರಳಿಸಿದಳು.

''ನಿಮಗೆ ಕನಸಿನ ಅರ್ಥ ತಿಳಿಯಲಿಲ್ಲ ಅಂತಂದ್ರೆ ಆಶ್ಚರ್ಯವಾಗುತ್ತದೆ. ನಂಗಂತೂ ಕ್ಲಿಯರ್‌ಆಗಿ ಕಾಣ್ತಿದೆ. ಚಂದ್ರನ್ನ ನೀನು ಮರೆಯುತ್ತಿದ್ದೀಯ... ಸೂರ್ಯನ ಕಡೆ ಅಟ್ರಾಕ್ಟ್ ಆಗ್ತಿದೀಯ....''

''ಯಾವ ಚಂದ್ರ ? ಯಾವ ಸೂರ್ಯ ? ''

''ಚಂದ್ರ ನಿನ್ನ ಪಾಸ್ಟ್, ಸೂರ್ಯ ನಿನ್ನ ಫ್ಯೂಚರ್... '' ಗಾಯತ್ರಿ ಪೂರ್ಣಿಮಾಳ ಗಲ್ಲವನ್ನು ಹಿಡಿದು ಅಲುಗಾಡಿಸಿದಳು. ಪೂರ್ಣಿಮಾ ಸಂಕೋಚಗೊಂಡಳು. ಇವತ್ತು ಸಾಯಂಕಾಲ ನಾನು ನನ್ನ ವುಡ್‌ಬೀನ ಕರೆದುಕೊಂಡು ಬರ್ತಿದೀನಿ. ಮನೆಗೆ ಬೇಗ ಬಂದುಬಿಡಿ... ಪ್ಲೀಸ್...

''ಓ.ಕೆ. ... ಕೆಳಗೆ ಹೋಗೋಣ್ವಾ ? ಆಂಟಿ ನಮಗೋಸ್ಕರ ಕಾಯ್ತಾ ಇರಬಹುದು'' ಇಬ್ಬರೂ ಕೆಳಗಿಳಿದು ಬಂದರು.

''ಆಂಟಿ ಸಾಯಂಕಾಲ, ನನ್ನ ಜೊತೆಗೆ, ಗೆಸ್ಟ್ ಒಬ್ಬರನ್ನು ಕರೆದುಕೊಂಡು ಬರ್ತಿದೀನಿ... ''ಆಂಟೀ, ಮಗನ ಮುಖವನ್ನು ನೋಡಿದಳು.

''ದಿವಾಕರ್, ನೀವೂ ಮನೆಯಲ್ಲಿರಬೇಕು ಅಂತ ನನ್ನ ರಿಕ್ವೆಸ್ಟ್...''

''ನಾನು ಮನೆ ಬಿಟ್ಟು ಎಲ್ಲಿಗೆ ಹೋಗ್ತೀನಿ ಮೇಡಂ... ನನಗೆ ಯಾರೂ ಸ್ನೇಹಿತರಿಲ್ಲ,

ತಿರುಗಾಡುವ ಆಸೆ ಇಲ್ಲ... ಏನಿವೇ ಯಾರು ಅಂತ ಕೇಳಬಹುದಾ?''

''ಸದ್ಯಕ್ಕೆ ಸರ್ಪ್ರೈಸ್....'' ನಕ್ಕಳು, ದಿವಾಕರ ಯಾರು ಎನ್ನುವಂತೆ ಪೂರ್ಣಿಮಾಳ ಕಡೆ ನೋಡಿದ. ಅವಳು ತನಗೆ ಗೊತ್ತಿಲ್ಲವೆನ್ನುವಂತೆ ಸಂಜ್ಞೆಮಾಡಿದಳು.

ಬ್ಯಾಂಕಿನಿಂದ ಬರುವಾಗ, ಪೂರ್ಣಿಮಾ ಮರೆಯದೇ ಒಂದಿಷ್ಟು ಹಣ್ಣು ಬಿಸ್ಕತ್‌ಗಳನ್ನು ಕೊಂಡುಕೊಂಡಳು. ಗಾಯತ್ರಿ ತನ್ನ ವುಡ್‌ಬೀಯನ್ನು ಎಲ್ಲರಿಗೂ ಪರಿಚಯಿಸಲು ಎಷ್ಟು ಉತ್ಸುಕಳಾಗಿದ್ದಾಳೆ. ಏಳೆಂಟು ವರ್ಷ ಬರೀ ಪ್ರೀತಿಯಲ್ಲೇ ಇದಾರಂತೆ. ಅವರ ಪ್ರೀತಿ ಇನ್ನೂ ಹಳತಾಗಿಲ್ಲ. ಅಂದರೆ ಈ ಪ್ರೀತಿ ಎಷ್ಟು ಆಳವಾಗಿರಬಹುದು. ಬರೀ ತೋರಿಕೆಯ ಪ್ರೀತಿಯಲ್ಲ... ಚಂದ್ರನದು ಬರೀ ತೋರಿಕೆಯ ಪ್ರೀತಿಯಾಗಿತ್ತು. ಅದಕ್ಕೆ ಅದು ಅಳಿಸಿ ಹೋಯಿತು....

''ರೀ ಎಲ್ಲಿ ನೋಡ್ಕೊಂಡು ರಸ್ತೆ ಕ್ರಾಸ್ ಮಾಡ್ತಿದೀರಾ... ನಾನು ನಿಮ್ಮ ಹಿಂದು ಹಿಂದೆಯೇ ಬರ್ತಾ ಇದೀನಿ..... ''ಹಿಂದಿನಿಂದ ದಿವಾಕರ ಅವಳನ್ನು ಬಂದು ಸೇರಿಕೊಂಡು ನುಡಿದ.

''ಏನೋ ಯೋಚಿಸ್ತಿದ್ದೆ.''

''ನೀವು ಹುಡುಗೀರು ಸದಾ ಏನೋ ಯೋಚಿಸ್ತಾನೆ ಇರ್ತೀರಿ... ಅಲ್ಲ ರಸ್ತೇಲಿ ಯೋಚಿಸುವಂತಹ ಘನವಾದ ವಿಷಯ ಏನೂಂತ ? ''

''ಸಾಯಂಕಾಲ ಗಾಯತ್ರಿ, ಅವರ ವುಡ್‌ಬೀನ ಕರೆದುಕೊಂಡು ಬರ್ತೀನಿ ಅಂತ ಹೇಳಿದ್ರಲ್ಲ... ಅದನ್ನೇ ಯೋಚಿಸ್ತಿದ್ದೆ.''

''ಯಾರು ? ವುಡ್‌ಬೀನ... ಸರ್ಪ್ರೈಸ್ ಅಂದ್ರಲ್ರೀ....''

''ಸಾರಿ... ಸೀಕ್ರೇಟ್ ಆಗಿಡಬೇಕಾಗಿತ್ತು. ನಾನು.... ನಿಮಗೆ ಹೇಳಿಬಿಟ್ಟೆ.. ಪ್ಲೀಸ್ ... ನಾನು ಹೇಳಿಬಿಟ್ಟೆ ಅಂತ ಅವರಿಗೆ ತಿಳಿಯಬಾರದು...''

''ಓ...ಕೇ... ನಾನು ಹೇಳುಲ್ಲ. ನನಗೆ ಆ ಸರ್ಪ್ರೈಸ್ ಏನೂಂತ ತಿಳಿದದ್ದು ಒಳ್ಳೇದೇ ಆಯ್ತು. ಬೆಳಗ್ಗಿಂದ ಸುಮ್ಮನೆ ತಲೆ ಕೆಡಿಸಿಕೊಂಡೆ.''

''ತಲೆ ಕೆಡಿಸಿಕೊಳ್ಳುವಂತಹ ಘನವಾದ ವಿಷಯ ಏನಲ್ಲ... ದಿನದಲ್ಲಿ ಎಷ್ಟೋ ಜನರನ್ನು ಮೀಟ್ ಮಾಡ್ತಿರ್ತೀನಿ. ... ಹಾಗೇ ಇವರೂ ಒಬ್ಬರು.''

''ಹಾಗಲ್ಲ – ಯಾರಾದ್ರೂ ಪೇಯಿಂಗ್ ಗೆಸ್ಟ್ ಹುಡುಗೀನ ಕರೆದುಕೊಂಡು ಬರಬಹುದೇನೋ ಅಂತ ಅಂದುಕೊಂಡಿದ್ದೆ ''

''ಹಾಗಾದ್ರೆ ನೀವು ಹುಡುಗೀರ ಬಗ್ಗೆ ಸದಾ ಯೋಚಿಸ್ತಿರ್ತೀರಿ ಅಂತಾಯ್ತು. ವೆರಿ ಬ್ಯಾಡ್ ಹ್ಯಾಬಿಟ್... '' ಚುಡಾಯಿಸಿದಳು.

''ತುಂಬಾ ಟಿ.ವಿ. ಪ್ರೋಗ್ರಾಂ ನೋಡ್ತೀನಲ್ಲ... ಅದಕ್ಕೆ....'' ಹಲ್ಲುಕಿರಿದ. ಇಬ್ಬರೂ ಮನೆ ತಲುಪಿದರು. ಅವನು ಅವಳ ಕೈಲಿದ್ದ ಪ್ಯಾಕೆಟ್‌ಗಳನ್ನು ತೆಗೆದುಕೊಂಡ. ನಾನು ಒಂದಿಷ್ಟು ಮಿಕ್ಚರ್, ಕೋಡುಬಳೆ ತಂದಿದೀನಿ. ಸಾಕಲ್ವಾ?...

''ಓ... ಬೇಕಾದಷ್ಟು.. ''ಎನ್ನುತ್ತಾ ಅವಳು ಮೆಟ್ಟಿಲುಗಳನ್ನೇರಿದಳು. ದಿವಾಕರನ

ಕಣ್ಣುಗಳು ಅವಳನ್ನೇ ಹಿಂಬಾಲಿಸಿದವು. ಗಾಯತ್ರಿ ಒಂದು ದಿನ ಮದುವೆ ಮಾಡಿಕೊಂಡು ಗಂಡನ ಮನೆಗೆ ಹೊರಟು ಹೋಗುತ್ತಾಳೆ. ಹಾಗೇ.... ಈ ಪೂರ್ಣಿಮಾ ಸಹ ಒಂದು ದಿನ ಹೊರಟು ಹೋಗಬಹುದು. ಆಗ ನಮ್ಮ ಮನೆ ಖಾಲಿಯಾಗಿ ಹೋಗುತ್ತದೆ...ಯಾಕೋ ಆ ಅನಿಸಿಕೆ ಹಿತವಾಗಿರಲಿಲ್ಲ. ತಲೆಯನ್ನು ಕೊರಡವಿಕೊಂಡ.

ಆಟೋ ಮನೆ ಮುಂದೆ ನಿಂತಾಗ, ಪೂರ್ಣಿಮಾ ಬಾಲ್ಕನಿಯಿಂದ ಇಣುಕಿ ನೋಡಿದಳು. ಗಾಯತ್ರಿ... ಅವಳ ಹಿಂದೆ ಅವಳ ವುಡ್‌ಬಿ... ಅವರನ್ನು ಸ್ವಾಗತಿಸಲು ಆತುರಾತುರವಾಗಿ ಮೆಟ್ಟಿಲಿಳಿದು ಬಂದಳು. ಅದೇ ಸಮಯಕ್ಕೆ ಮುಂಬಾಗಿಲ ಬಳಿಗೆ ಧಾವಿಸಿ ಬಂದ ದಿವಾಕರ ಅವಳಿಗೆ ಢಿಕ್ಕಿ ಕೊಟ್ಟ.... ಹ್ಹಾಂ ... ಅವಳು ಉದ್ಗರಿಸಿದಳು... ಬೀಳುವುದರಲ್ಲಿದ್ದ ಅವಳನ್ನು ಹಿಡಿದುಕೊಂಡ.

''ಸ್ಸಾರಿ... ಸ್ಸಾರಿ... ಮಿಸ್.... ಜೋರಾಗಿ ಪೆಟ್ಟು ಬಿತ್ತಾ... ''ಅವನ ಹಿಡಿತ ಹಾಗೇ ಇತ್ತು. ಮುಂಬಾಗಿಲಿಗೆ ಬಂದಿದ್ದ ಗಾಯತ್ರಿ ಈ ದೃಶ್ಯವನ್ನು ಕಂಡಳು. ಪೂರ್ಣಿಮಾ ಕೆಂಪಾಗಿದ್ದಳು.

ಒಳಬಾಗಿಲಿಗೆ ಬರುತ್ತಿದ್ದಂತೇ ಗಾಯತ್ರಿ ತನ್ನ ಭಾವಿ ಪತಿಯನ್ನು ಇಬ್ಬರಿಗೂ ಪರಿಚಯ ಮಾಡಿಕೊಟ್ಟಳು. ಇವರು ಭಾಸ್ಕರ್.... ನನ್ನ ವುಡ್‌ಬೀ... ಇವಳು ಪೂರ್ಣಿಮಾ, ನನ್ನ ಪುಟ್ಟತಂಗಿಯ ತರಹ, ಇವರು ದಿವಾಕರ್ ಈ ಮನೆಯ ಓನರ್. ಪರಸ್ಪರ ಪರಿಚಯದ ನಂತರ ಎಲ್ಲರೂ ಒಳಬಂದರು. ಗಾಯತ್ರಿ ಆಗಾಗ್ಗೆ ಪೂರ್ಣಿಮಾಳನ್ನು ಗಮನಿಸುತ್ತಿದ್ದಳು. ಅವಳ ಮುಜುಗರವಿನ್ನು ಕಡಿಮೆ ಆಗಿರಲಿಲ್ಲ. ತನ್ನಲ್ಲಿಯೇ ಮುಗುಳ್ನಕ್ಕಳು. ಅಷ್ಟರಲ್ಲಿ ಆಂಟಿ, ಹೊರಬಂದಿದ್ದಳು.

ಇವರು ಆಂಟಿ.... ನಮ್ಮನ್ನೆಲ್ಲಾ ಸಾಕುತ್ತಿರುವ ತಾಯಿ... ಅಂಕಲ್ ಒಳಗೆ ಮಲಗಿದ್ದಾರೆ. ... ಆಂಟೀ ಇವರು ಭಾಸ್ಕರ್.... ನನ್ನ ವುಡ್‌ಬೀ... ಸೀತಮ್ಮ ಕಣ್ಣರಳಿಸಿದಳು.

''ನಮಸ್ತೆ ಆಂಟಿ... '' ನಮಸ್ತೆ ಎನ್ನುತ್ತಾ ಅಂಟಿಯೂ ಕುಳಿತಳು.

''ಮುಂದಿನ ಭಾನುವಾರ ನಮ್ಮಿಬ್ಬರ ಮದುವೆ... ದೇವಸ್ಥಾನದಲ್ಲಿ ಬಹಳ ಸರಳವಾಗಿ... ಸಾಯಂಕಾಲ ನಮ್ಮ ಸ್ನೇಹಿತರಿಗಾಗಿ ಒಂದು ಪಾರ್ಟಿಯನ್ನು ಇಟ್ಟುಕೊಂಡಿದ್ದೇವೆ. ನೀವುಗಳು ಖಂಡಿತಾ ಬರಬೇಕು'' ಅವನು ಸವಿನಯದಿಂದ ಕೇಳಿಕೊಂಡಾಗ, 'ಹೂಂ' ಆಗಲಪ್ಪಾ... ಎಂದಿದ್ದಳು ಆಂಟಿ. ಅವನು ದಿವಾಕರನಿಗೂ, ಪೂರ್ಣಿಮಾಳಿಗೂ ಆಮಂತ್ರಣವಿತ್ತ. ಗಾಯತ್ರಿ ಸುಮ್ಮನೆ ಕೈಕಟ್ಟಿ ನಿಂತಿದ್ದಳು.

''ಏನಮ್ಮಾ ಇಷ್ಟು ತಡವಾಗಿ ನಮಗೆ ವಿಷಯವನ್ನು ತಿಳಿಸ್ತಿದೀಯ... ಈಗ್ತಾನೆ ನನ್ನನ್ನು ತಾಯಿ ಅಂತಂದೆ ... ತಾಯಿ ಮೇಲಿನ ಪ್ರೀತಿ ಇಷ್ಟೇನಾ?'' ಆಕ್ಷೇಪಣೆ ಮಾಡಿದಳು.

''ಹಾಗಲ್ಲ ಆಂಟಿ... ಹೇಳಬಾರದು ಅಂತೇನಿರಲಿಲ್ಲ, ... ಯಾರಿಗೂ ನಾವು ತಿಳಿಸಿರಲಿಲ್ಲ... ಏಕೇಂದ್ರೆ ನಮ್ಮದು ಲವ್ ಮ್ಯಾರೇಜ್...''

''ಲವ್ ಮ್ಯಾರೇಜ್ ಅದ್ರೇನಂತೆ, ಮದುವೆ ಮದುವೇನೇ....''

''ನಾನು ಹೇಳ್ತೀನಿ ಆಂಟಿ.... ನನಗೆ ಇದುವರೆಗೂ ಸರಿಯಾದಉದ್ಯೋಗವೇ

ಇರಲಿಲ್ಲ. ಈಗ ಒಂದು ಒಳ್ಳೆಯ ಕೆಲಸ ಸಿಕ್ಕಿದೆ. .. ನನಗೆ ಕೆಲಸ ಸಿಗದೇ ಮದುವೆಯಾಗುವುದಿಲ್ಲ ಅಂತ ನಾನು ತೀರ್ಮಾನಿಸಿದ್ದೆ...."

"ಒಳ್ಳೇದಪ್ಪಾ... ಏನು ಕೆಲಸ ? ಎಷ್ಟು ಸಂಬಳ ಅಂತ ಕೇಳಬಹುದೇ ?"

"ಕೇಳಿ ಧಾರಾಳವಾಗಿ ಕೇಳಿ... ನಮ್ಮೋರು ಅಂತ, ನಮ್ಮ ಬಗ್ಗೆ ವಿಚಾರಿಸುಕ್ಕೆ ಈ ಊರ್ನಲ್ಲಿ ಯಾರೂ ಇಲ್ಲ..." ಎನ್ನುತ್ತಾ ವಿವರಗಳನ್ನು ಹೇಳಿದ. ದಿವಾಕರ ಅಡಿಗೆ ಮನೆಯನ್ನು ಸೇರಿ ಕಾಫಿ ಬೆರೆಸುವುದರಲ್ಲಿ ನಿರತನಾಗಿದ್ದ.

"ಮದುವೆಯಾಗಿ ಸಂಸಾರಸ್ಥೆಯಾಗಿ ಖುಷಿಯಾಗಿರುತ್ತಿರುವ ಜೊತೆಗೇ.... ನೀನು ಹೊರಟು ಹೋಗ್ತಿದೀಯಲ್ಲ ಅಂತ ಬೇಸರವೂ ಆಗ್ತಿದೆ..."

"ನೀವು ಬೇಸರ ಪಟ್ಕೋಬೇಡಿ ಆಂಟಿ. ನಾನಂತೂ ಈ ಮನೆಯನ್ನು ಬಿಟ್ಟು ಹೋಗುಲ್ಲ. .. ಎನ್ನುತ್ತಾ ಭಾಸ್ಕರನ ಕಡೆ ತಿರುಗಿದಳು. ಅವನು ಮಾತನ್ನು ಮುಂದುವರಿಸಿದ."

"ಸದ್ಯಕ್ಕೆ ನಾವು ಯಾವ ಬೇರೆ ಮನೆಯನ್ನು ಗೊತ್ತು ಮಾಡಿಲ್ಲ. ನಿಮಗೆ ಒಪ್ಪಿಗೆಯಾದರೆ, ನಾವು ಮೇಲಿನ ಮನೆಯಲ್ಲಿ ಬಾಡಿಗೆಗೆ ಇರ್ತೀವಿ."

"ಸಂಸಾರಸ್ಥರು ಇರುವಷ್ಟು ಅನುಕೂಲಗಳಿಲ್ಲ. ಅಡಿಗೆ ಮನೆಯಿಲ್ಲ, ಬರೀ ರೂಮುಗಳು ಅಟ್ಯಾಚ್ಡ್ ಬಾತ್‌ರೂಂಗಳು..... "

"ನನಗೆ ಅಡಿಗೆ ಮಾಡೋಕೆ ಎಲ್ಲಿ ಬರುತ್ತೆ ? ಕಲಿಯುಕ್ಕೆ ಪುರುಸೊತ್ತು ಎಲ್ಲಿದೆ? ನಾವು ಈಗಿನಂತೆಯೇ ಪೇಯಿಂಗ್ ಗೆಸ್ಟ್ ಆಗಿರುತ್ತೇವೆ."

ಈ ಮಾತು ಪೂರ್ಣಿಮಾಳನ್ನು ಗೊಂದಲಕ್ಕೀಡು ಮಾಡಿತು. ಕೈ ಸಂಜ್ಞೆಯಲ್ಲಿ ಗಾಯತ್ರಿಯನ್ನು ಪ್ರಶ್ನಿಸಿದಳು. ನನಗೇನು ಗತಿ ? ಅಂತ. ತಡೀ ಆಮೇಲೆ ಮಾತನಾಡೋಣ ಎಂದು ಸಂಜ್ಞೆಯಲ್ಲೇ ತಿಳಿಸಿದಳು.

ಮೇಲಿನ ರೂಮುಗಳು ಖಾಲಿ ಬಿದ್ದಿರುವುದಕ್ಕಿಂತ ಇವರುಗಳಿಗೆ ಬಾಡಿಗೆಗೆ ಕೊಡುವುದೇ ವಾಸಿ ಎಂದು ಕೊಂಡರೂ, ಮಗನನ್ನು ಒಂದು ಮಾತು ಕೇಳಬೇಕು ಎಂದುಕೊಂಡಳು. ಅವಳ ಅನುಮಾನವನ್ನು ಗಮನಿಸಿದ ಗಾಯತ್ರಿ ನುಡಿದಳು.

"ಈಗ್ಲೇ ನೀವೇನೂ ಒಪ್ಪಿಗೆ ಕೊಡಬೇಕಾಗಿಲ್ಲ ಆಂಟಿ... ಒಂದು ವೇಳೆ ನಿಮಗೆ ಒಪ್ಪಿಗೆಯಾಗದಿದ್ದರೆ ಪರವಾಗಿಲ್ಲ, ನಾನಂತೂ ಇಲ್ಲಿಂದ ಎಲ್ಲಿಯೂ ಹೋಗುವವಳಲ್ಲ. ಭಾಸ್ಕರ ಬೇರೆ ಎಲ್ಲಾದ್ರೂ ರೂಂ ಮಾಡಿಕೊಂಡಿರುತ್ತಾರೆ ಅಲ್ವಾ ಭಾಸ್ಕರ್... "ಎಂದು ಚುಡಾಯಿಸಿ ಕಣ್ಣು ಹೊಡೆದಳು. ಪೂರ್ಣಿಮಾ ಗಮನಿಸಿದಳು. ಅಷ್ಟರಲ್ಲಿ ದಿವಾಕರ ಎಲ್ಲರಿಗೂ ಕಾಫಿ, ಬಿಸ್ಕತ್ತು, ಹಣ್ಣುಗಳನ್ನು ತಂದು ಕೊಟ್ಟ. "ಕಾಫಿ ಚೆನ್ನಾಗಿದೆ" ಭಾಸ್ಕರ ಕಾಫಿಯನ್ನು ಚಪ್ಪರಿಸುತ್ತಾ ಕುಡಿದ.

"ನಮ್ಮ ದಿವಾಕರ ಕಾಫಿ ಮಾಡುವುದರಲ್ಲಿ ಎಕ್ಸ್‌ಪರ್ಟ್" ಎಂದು ಗಾಯತ್ರಿ ಅವನಿಗೆ ಶಹಬಾಸ್‌ಗಿರಿಯನ್ನು ಕೊಟ್ಟಳು. ದಿವಾಕರ ಮಂದಹಾಸ ಬೀರಿ 'ಥ್ಯಾಂಕ್ಸ್' ಎಂದ. ಗಾಯತ್ರಿ, ನಾವಿನ್ನು ಹೊರಡೋಣ್ವಾ ಎಂದು ಭಾಸ್ಕರನನ್ನು ಎಬ್ಬಿಸಿದಳು. ಆಂಟಿ, ಅವಳಿಗೆ

ಅರಿಶಿನ,ಕುಂಕುಮ ಕೊಟ್ಟು ತಾಂಬೂಲದೊಂದಿಗೆ ರವಿಕೆ ಖಣವನ್ನು ಕೊಟ್ಟಳು. 'ಇದೆಲ್ಲಾ ಏನು ಆಂಟಿ?' ಗಾಯತ್ರಿ ಸಂಕೋಚ ಗೊಂಡಳು.

''ಇರಲೀ ತಗೋಮ್ಮ... ಹಿರಿಯೋಳು ನಾನು ಕೊಟ್ಟಿದ್ದನ್ನು ಬೇಡ ಅನ್ನಬಾರದು. ದೇವರು ನಿಮ್ಮಿಬ್ಬರನ್ನು ಚೆನ್ನಾಗಿಟ್ಟಿರಲಿ.'' ಇಬ್ಬರೂ ಆಕೆಗೆ ನಮಸ್ಕರಿಸಿದರು.

ಭಾಸ್ಕರ, ಮೊದಲ ಆಹ್ವಾನ ಪತ್ರಿಕೆಯನ್ನು ಆಂಟಿಯ ಕೈಗಿತ್ತು ಆಶೀರ್ವಾದವನ್ನು ಪಡೆದ. ನೀವೇ ನಿಂತು ಈ ಮಂಗಳ ಕಾರ್ಯವನ್ನು ನೆರವೇರಿಸಿ ಕೊಡಬೇಕೆಂದು ವಿನಂತಿಸಿಕೊಂಡ. ದಿವಾಕರ ಭಾಸ್ಕರನ ಕೈ ಕುಲುಕಿ ' ಕಂಗ್ರಾಜುಲೇಷನ್ಸ್' ಎಂದು ಹಾರೈಸಿದ. ಪೂರ್ಣಿಮಾಳಿಗೆ ಗಾಯತ್ರಿ ಒಂದು ಆಹ್ವಾನ ಪತ್ರಿಕೆಯನ್ನು ಕೊಟ್ಟು ಕಿವಿಯಲ್ಲಿ ಏನೋ ಪಿಸುಗುಟ್ಟಿದಳು ಪೂರ್ಣಿಮಾಳ ಗುಂಡನೆಯ ಕೆನ್ನೆಗಳು ನಾಚಿಕೆಯಿಂದ ಕೆಂಪಗೆ ಹೊಳೆದವು. ಆ ಕೆನ್ನೆಗಳನ್ನು ಗಾಯತ್ರಿ ಹಿಂಡಿದಾಗ, ಪೂರ್ಣಿಮಾ ಹ್ಞಾಂ ಎಂದು ಹಿಂದೆ ಸರಿದಳು. ಕೆನ್ನೆಗಳನ್ನು ಉಜ್ಜಿಕೊಳ್ಳುತ್ತಾ ನಿಂತಿದ್ದವಳನ್ನೇ ದಿವಾಕರ ಕಣ್ತುಂಬಾ ನೋಡಿದ. ಅವನ ಮನವೆಂಬ ಕಡಲಲ್ಲಿ ಬಯಕೆಯ ಅಲೆಗಳು ಚಿಮ್ಮಿದವು.

''ಮುಖ್ಯವಾದ ಇನ್ನೊಂದು ನಾಲ್ಕು ಮಂದಿಗೆ ಆಹ್ವಾನ ಪತ್ರಿಕೆಯನ್ನು ಕೊಟ್ಟು ಬರ್ತೀವಿ '' ಎಂದು ಅವರಿಬ್ಬರೂ ಹೊರನಡೆದರು. ಪೂರ್ಣಿಮಾ ಮಹಡಿಯ ಮೇಲಿನ ತನ್ನ ರೂಮನ್ನು ಸೇರಿ, ಕನ್ನಡಿಯ ಮುಂದೆ ನಿಂತಳು. ತನ್ನ ಹಿಂದೆ ಹೆಜ್ಜೆಯ ಸದ್ದು ಕೇಳಿಸಿದಂತಾಗಿ ಹಿಂತಿರುಗಿದಳು. ಅವಳ ಹಿಂದೆ ದಿವಾಕರ ನಿಂತಿದ್ದ. ಗಾಬರಿಯಿಂದ ಅವಳ ಕಣ್ಣುಗಳು ಅರಳಿದವು.

''ಹೆದಿರಿದ್ರಾ? ನಾನು ನಿಮ್ಮನ್ನು ಏನೋ ಕೇಳೋಣ ಅಂತ ಬಂದೆ.''

'' ಏನದು ?'' ಕೆಂಪಾಗಿದ್ದ ಕೆನ್ನೆಗಳನ್ನು ಉಜ್ಜುತ್ತಾ ಕೇಳಿದಳು.

''ಗಾಯತ್ರಿ ಯಾಕೆ ನಿಮ್ಮ ಕೆನ್ನೆಗಳನ್ನು ಹಿಂಡಿದರು? ತುಂಬಾ ನೋವಾಗ್ತಿದೆಯಾ? ಎಷ್ಟು ಕೆಂಪಾಗಿದೆ ಗೊತ್ತ? ''

''ಅವರಿಗೆ ಸಿಕ್ಕಾಬಟ್ಟೆ ಖುಷಿಯಾಗಿದೆ. ಅದನ್ನು ಹೀಗೆ ನನ್ನ ಕೆನ್ನೆ ಮೇಲೆ ತೋರಿಸಿಕೊಂಡಿದ್ದಾರೆ. ಅಷ್ಟು ಜೋರಾಗಿ ಕೆನ್ನೆಗಳನ್ನು ಹಿಂಡಿದರೆ ನೋವಾಗ್ದೇ ಇರುತ್ತಾ? ಗಾಯತ್ರಿ ಮನೆಗೆ ಬರಲಿ....'' ಅವಡು ಕಚ್ಚಿದಳು.

ಇದ್ದಕ್ಕಿದ್ದಂತೇ ಸರ್ರನೇ ಅವಳ ಭುಜಗಳನ್ನು ಹಿಡಿದು ಅವಳ ಎರಡೂ ಕೆನ್ನೆಗಳಿಗೆ ಹಗುರವಾಗಿ ಮುತ್ತಿಟ್ಟ.. ಅವಳು ಸಣ್ಣಗೆ ಚೀರಿದಳು. ಹಿಡಿತವನ್ನು ಸಡಿಲಿಸಿ ದೂರ ನಿಂತ. ''ಸ್ಸಾರಿ... ಪೂರ್ಣಿಮಾ... '' ಎನ್ನುತ್ತಾ ಕೆಳಗಿಳಿದು ಹೊರಟುಹೋದ. ಎಷ್ಟೋ ಹೊತ್ತಿನ ವರೆಗೆ ಪೂರ್ಣಿಮಾ ಹಾಗೇ ನಿಂತಿದ್ದಳು. ಕನ್ನಡಿಯ ಕಡೆ ತಿರುಗಿ ಕೆನ್ನೆಗಳನ್ನು ನೋಡಿಕೊಂಡಳು. ಕೆನ್ನೆ ಹಾಗೇ ಕೆಂಪಡರಿವೆ... ಹಗುರವಾದ ಬಿಸಿ ಮೈಯೊಳಗೆ ಸಂಚಾಡುತ್ತಿದೆ. ಚುಂಬನದ ಬೆಚ್ಚನೆಯ ಶಾಖ ಕೆನ್ನೆಗಳ ನೋವನ್ನು ನಿಧಾನವಾಗಿ ಕಡಿಮೆ ಮಾಡುತ್ತಿದೆ... ಯಾವುದೋ ಒಂದು ಸುಂದರ ಅನುಭವದೊಳಗೆ ತೇಲಾಡುತ್ತಿರುವ ಹಾಗಾಗುತ್ತಿದೆ.... ಕೆನ್ನೆಗಳ ಮೇಲೆ ಕೈಯನ್ನಿಟ್ಟು ಕಣ್ಣುಗಳನ್ನು ಮುಚ್ಚಿ ಹಾಗೇ ಮೈ ಮರೆತು ನಿಂತಳು.

ಅನಿರೀಕ್ಷಿತವಾಗಿ ಅವಳ ರೂಮಿಗೆ ಬಂದ ಗಾಯತ್ರಿ ಅವಳನ್ನು ಎಚ್ಚರಿಸಿದಳು. ಮಹಡಿಯಿಂದ ಕೆಳಗಿಳಿದು ಹೋದ ದಿವಾಕರನನ್ನು ಕಂಡಿದ್ದಳು.

''ಏನಾಯ್ತು ಪೂರ್ಣಿಮಾ ಹೀಗೇಕೆ ಮೈ ಮರೆತವರಂತೆ ನಿಂತು ಬಿಟ್ಟಿದ್ದೀರಲ್ಲ....''

''ಏನೂ ಇಲ್ಲ...'' ಪೂರ್ಣಿಮಾ ಚೇತರಿಸಿಕೊಂಡು ನುಡಿದಳು.

''ಕೆನ್ನೆಗಳು ಕೆಂಪಾಗಿ ಹೊಳೆಯುತ್ತಿವೆ. ಕಣ್ಣುಗಳು ಮಾರ್ದವತೆಯನ್ನು ತುಳುಕಿಸುತ್ತಿವೆ. ಏನು ಇಲ್ಲ ಅಂತ ಸುಳ್ಳು ಹೇಳ್ತಿದೀರಾ ...''

''ನೀವು ಕೆನ್ನೆಗಳನ್ನು ಹಿಂಡಿದ್ದರಿಂದ ಕೆಂಪಾಗಿವೆ. ನೋಯುತ್ತಿರುವುದರಿಂದ ಕಣ್ಣುಗಳು ಅಳುತ್ತಿವೆ....''

''ನನಗೇ ರೈಲು ಬಿಡಬೇಡಿ. ದಿವಾಕರ ಬಂದಿದ್ರಾ ಇಲ್ಲಿಗೆ ....''

''ಇಲ್ಲವಲ್ಲ......''

''ಓ.ಕೆ. ನೀವು ಸುಳ್ಳು ಹೇಳಿದರೂ, ನಿಮ್ಮ ಕಣ್ಣುಗಳು ನಿಜವನ್ನು ಸಾರುತ್ತಿವೆ... ನಾನು ಆ ಮೇಲೆ ಬಂದು ವಿಚಾರಿಸಿಕೊಳ್ತೀನಿ. ನಾನೇನೋ ಮರೆತಿದ್ದೆ ಅದನ್ನು ತೆಗೆದುಕೊಂಡು ಹೋಗಲು ವಾಪಸ್ಸುಬಂದೆ'' ಎನ್ನುತ್ತಾ ಕಪಾಟಿನ ಬಳಿಗೆ ನಡೆದಳು. ಪೂರ್ಣಿಮಾ ಕಿಟಕಿಯ ಬಳಿ ಬಂದು ನಿಂತಳು. ಅವಳು ಸಿಕ್ಕಿ ಬಿದ್ದ ಕಳ್ಳನಂತೆ ಚಡಪಡಿಸುತ್ತಿದ್ದಳು.

''ಬೈ ಪೂರ್ಣಿಮಾ... '' ಗಾಯತ್ರಿ ಹೊರಟು ಹೋಗಿದ್ದಳು. ಕೆಳಗಿನಿಂದ ಆಂಟಿ ಕರೆದದ್ದು ಕೇಳಿಸಿದಾಗ, ವಿಧಿ ಇಲ್ಲದೆ ಬಂದಳು. ನಿತ್ಯದಂತೆ ದಿವಾಕರ ಟಿ.ವಿ. ಮುಂದೆ ಕುಳಿತಿರಲಿಲ್ಲ. ಅವನು ಎಲ್ಲಿಯೂ ಕಾಣಲಿಲ್ಲ. ನಿರಾಳವೆನಿಸಿತು.

''ಗಾಯತ್ರಿ ಊಟಕ್ಕೆ ಬರ್ತೀನಿ ಅಂತ ಹೇಳಿದ್ಲಾ....?''

''ಇಲ್ಲ ಆಂಟಿ ನನಗೇನೂ ಹೇಳಿಲ್ಲ...''

''ಈಗ ಏನು ಅಡಿಗೆ ಮಾಡೋದು ಅಂತ ಗೊತ್ತಾಗ್ತಾನೆ ಇಲ್ಲವಲ್ಲ... ಯಾಕೆ ಪೂರ್ಣಿಮಾ ಒಂಥರಾ ಇದೀಯ.... ಏನಾಯ್ತು? ಯಾರಾದ್ರೂ ಏನಾದ್ರೂ ಅಂದ್ರಾ....'' ಇಲ್ಲ ಎನ್ನುವಂತೆ ತಲೆಯಾಡಿಸಿದಳು.

''ಗಾಯತ್ರಿ ಮದುವೆಯಾಗಿ ಹೊರಟು ಹೋದ್ರೆ ನೀನು ಒಂಟಿಯಾಗಿ ಬಿಡ್ತೀಯ ಅಂತ ಯೋಚಿಸ್ತಿದೀಯ.....'' ಉತ್ತರಿಸದೇ ಸುಮ್ಮನೇ ನಿಂತಿದ್ದಳು. ಅತ್ತು ಅತ್ತು ಮುಖವೆಲ್ಲಾ ಊದಿಕೊಂಡು ಕೆಂಪಾಗಿದೀಯ... ಹೋಗಿ ತಣ್ಣೀರ್ನಲ್ಲಿ ಮುಖ ತೊಳಕೋ... ಗಾಯತ್ರಿ ಹೇಗೂ ಇಲ್ಲೇ ಇರ್ತೀನಿ ಅಂತ ಹೇಳಿದಾಳಲ್ಲ ಮತ್ಯಾಕೆ ದುಃಖ...?

''ಅದಕ್ಕಲ್ಲ ''

''ಮೇಲುಗಡೆ ನಿನಗೆ ಅವರುಗಳ ಜೊತೆಗೆ ಇರುಕ್ಕೆ ಮುಜುಗರವಾದರೆ ಇಲ್ಲಿ ಕೆಳಗಿನ ರೂಮಿನಲ್ಲಿ ಇರೂವಂತೆ. ನಾನು ದಿವೂಗೆ ಹೇಳ್ತೀನಿ... ಅವನೇ ಬೇಕಾದರೆ ಮೇಲಿನ ರೂಮಿಗೆ ಹೋಗಿ ಮಲ್ಕೋತಾನೆ... ಅಂದ್ಹಾಗೇ ಈ ದಿವೂ ಎಲ್ಲಿಗೆ ಹೋದ? ಅಷ್ಟೊತ್ತಿಂದ ಕಾಣ್ತಾನೇ ಇಲ್ಲ....''

''ನಂಗೊತ್ತಿಲ್ಲ ಆಂಟಿ..'' ಎನ್ನುತ್ತಾ ಬಚ್ಚಲು ಮನೆಯ ದಿಕ್ಕಿಗೆ ಹೋದಳು. ಮುಖ

ತೊಳೆದು ಬಂದವಳನ್ನು ಆಂಟಿ ನಿಲ್ಲಿಸಿಕೊಂಡಳು. ಆಂಟಿ ತನ್ನ ಮನೆಯ ಕಷ್ಟ ಕಾರ್ಪಣ್ಯ, ಸುಖ, ದುಃಖಗಳ ಬಗ್ಗೆ ಹೇಳಿಕೊಳ್ಳುತ್ತಿದ್ದಳು. ಅಷ್ಟರಲ್ಲಿ ದಿವಾಕರ ಬಂದ.

''ಹೇಳದೇ ಕೇಳದೇ ಎಲ್ಲಿ ಹೊರಟು ಹೋಗಿದ್ಯೋ....''

''ಹೀಗೆ ತಿರುಗಾಡಿ ಬರೋಣ ಅಂತ ಹೋಗಿದ್ದೆ. ಏನೋ ಬೇಜಾರಾಗುತ್ತಿತ್ತು.'' ಪೂರ್ಣಿಮಾಳ ಕಡೆ ಕಳ್ಳನೋಟ ಬೀರಿದ.

''ಎಂದೂ ಹೀಗೆ ಹೋದೋನಲ್ಲ ನೀನು... ಏಳಿ ನೀವಿಬ್ರೂ ಊಟ ಮಾಡಿ.... ಗಾಯತ್ರಿ ಹೊರಗಡೆಯೇ ಊಟ ಮಾಡಿ ಬರಬಹುದೇನೋ?''

''ನಂಗೆ ಹಸಿವಿಲ್ಲಮ್ಮಾ...''

''ಯಾಕೋ ಏನಾಯ್ತೋ... ಏನೋ ವಿಚಿತ್ರವಾಗಿ ಆಡ್ತಿದೀಯಪ್ಪಾ...''

''ನಿಂದು, ಅಪ್ಪಂದು ಊಟ ಆಯ್ತಾ?''

''ಹೂಂ ಇದೇ ತಾನೇ ಆಯ್ತು....''

ಸರಿ ನೀನು ಹೋಗಿ ಮಲ್ಕೋ... ನಾವು ಬಡಿಸಿಕೊಂಡು ಮಾಡ್ತೀವಿ. ತಲೆ ತಗ್ಗಿಸಿ ಕುಳಿತಿದ್ದ ಪೂರ್ಣಿಮಾಳ ಕಡೆ ನೋಡದೇನೇ ಹೇಳಿದ. ಅಷ್ಟು ಹೇಳಿದ್ದೇ ಸಾಕು ಎಂಬಂತೆ ಆಕೆ ಹೊರಟು ಹೋಗಿದ್ದಳು. ದಿವಾಕರ ಡೈನಿಂಗ್ ಟೇಬಲ್ ಮೇಲೆ ತಟ್ಟೆ ಬಟ್ಟಲುಗಳನ್ನಿಟ್ಟು ತಿರುಗುವಷ್ಟರಲ್ಲಿ ಪೂರ್ಣಿಮಾ ಮಹಡಿಯ ಬಳಿಗೆ ನಡೆದಿದ್ದಳು. ದಿವಾಕರ ವೇಗವಾಗಿ ಅವಳ ಹಿಂದೆ ಬಂದು ಅವಳಿಗೆ ಅಡ್ಡವಾದ.

''ನನ್ನ ಮೇಲೆ ಕೋಪಾನಾ ಪೂರ್ಣಿಮಾ... '' ಅವಳು ತಲೆ ಎತ್ತಲಿಲ್ಲ

''ನನ್ನ ಮೇಲೆ ಕೋಪವಿದ್ದರೆ, ನನ್ನ ಕೆನ್ನೆಗೆ ಎರಡು ಬಾರಿಸಿಬಿಡಿ. ಆದರೆ ಹೀಗೆ ಮೌನವಾಗಿ ಮಾತ್ರ ಇರಬೇಡಿ.''

''ನೀವು ಮಾಡಿದ್ದು ತಪ್ಪು ಅಂತ ಗೊತ್ತು ತಾನೇ ...?''

''ಹೌದು ತಪ್ಪು... ತಪ್ಪು ಮಾಡಿದ ಮೇಲೆ ಶಿಕ್ಷೆ ಆಗಲೇ ಬೇಕು'' ಅನ್ನುತ್ತಾ ಅವಳ ಕೈ ಎತ್ತಿ ತನ್ನ ಕೆನ್ನೆಗೆ ಪಟಪಟನೆ ಹೊಡೆದುಕೊಂಡ. ಅವಳು ಕೈ ಕಿತ್ತುಕೊಂಡಳು.

''ಇದೇನಿದು ? ಹುಚ್ಚನಂತೆ ಯಾಕೆ ಆಡ್ತೀರಾ ?''

''ಹೌದು, ನಾನು ಹುಚ್ಚ, ಪೆದ್ದ, ಬೆಪ್ಪ, ದಂಡಪಿಂಡ... ಎಲ್ಲರೂ ನನ್ನನ್ನು ಕರೆಯೋದೇ ಹೀಗೆ....''

''ಸಾರಿ ದಿವಾಕರ್.... ನನಗೆ ಜಾಗಬಿಡಿ.''

''ನೀವು ಊಟ ಮಾಡಿಕೊಂಡು ಹೋಗ್ಬೇಕು... ನನ್ನ ಮೇಲೆ ಕೋಪ ಇದ್ರೆ ಊಟ ಯಾಕೆ ಬಿಡಬೇಕು ?''

''ಇನ್ನು ಮುಂದೆ ನನ್ನ ಪರ್ಮಿಷನ್ ಇಲ್ಲದೇ ನನ್ನ ರೂಮಿಗೆ ಬರಬಾರದು. ಕಾರಣವಿಲ್ಲದೇ ನನ್ನ ಮೈ ಮುಟ್ಟಬಾರದು. ಪ್ರಾಮಿಸ್.''

''ಪ್ರಾಮಿಸ್... ನಡೀರಿ. ಊಟಕ್ಕೆ ಬನ್ನಿ'' 'ಹುಂ, ನಡೀರಿ' ಎಂದು ಗಂಭೀರವಾಗಿಯೇ ಊಟಕ್ಕೆ ಬಂದು ಕುಳಿತಳು. ಭಾಸ್ಕರ ಗಾಯತ್ರಿಯನ್ನು ಕರೆತಂದು ಬಿಟ್ಟು

ಹೋಗಲು ಬಂದಿದ್ದ. ದಿವಾಕರ ಬಲವಂತವಾಗಿ ಅವರಿಬ್ಬರನ್ನು ಊಟಕ್ಕೆ ಕೂರಿಸಿದ. ಪೂರ್ಣಿಮಾ ಊಟದ ಶಾಸ್ತ್ರಮಾಡಿ ಎದ್ದು ಬಿಟ್ಟಳು. ಊಟದ ನಂತರ ಭಾಸ್ಕರ ಹೊರಟು ಹೋಗಿದ್ದ. ಗಾಯತ್ರಿ ಎಷ್ಟೋ ಹೊತ್ತಿನ ತನಕ ದಿವಾಕರನೊಂದಿಗ ಏನೋ ಮಾತನ್ನಾಡುತ್ತಿದ್ದಳು. ಗಾಯತ್ರಿ ರೂಮಿಗೆ ಬಂದಾಗ ಪೂರ್ಣಿಮಾ ನಿದ್ದೆ ಮಾಡುತ್ತಿರುವವಳಂತೆ ನಟಿಸಿದಳು. ಖುಷಿಯಿಂದ ಹಾಡೊಂದನ್ನು ಗುನುಗುತ್ತಾ ಗಾಯತ್ರಿ ಬಟ್ಟೆ ಬದಲಾಯಿಸಿ ಮಲಗಿದಳು. ಪೂರ್ಣಿಮಾ ಮಗ್ಗುಲನ್ನು ಬದಲಾಯಿಸಿದಳು.

ಮತ್ತೆ ಅದೇ ಕನಸು. ಚಂದ್ರ ಕ್ಷೀಣನಾಗುತ್ತಾ ಮರೆಯಾದ. ನೋಡುನೋಡುತ್ತಿದ್ದಂತೆ ಅದೇ ಬಾನಿನಲ್ಲಿ ಸೂರ್ಯ ಉದಯಿಸಿದ್ದ. ಪೂರ್ಣಿಮಾ ಧಿಗ್ಗನೆ ಎದ್ದು ಕುಳಿತಳು. ಕನಸು ಸ್ವಲ್ಪ ಸ್ವಲ್ಪ ಅರ್ಥವಾಗತೊಡಗಿತು. ಮತ್ತೆ ಕಣ್ಣು ಮುಚ್ಚಿ ಮಲಗಿದರೂ, ನಿದ್ದೆಯೂ ಸುಳಿಯಲಿಲ್ಲ. ಕನಸೂ ಮುಂದುವರಿಯಲಿಲ್ಲ. ಮರೆಯಾಗುವ ಚಂದ್ರ ಯಾರೆಂದು ಗೊತ್ತು... ಆದರೆ ಈ ಸೂರ್ಯ ಯಾರು ?....

  

ಗಾಯತ್ರಿ ಭಾಸ್ಕರನ ಮದುವೆ ಸರಳವಾಗಿ ನೆರವೇರಿತು. ಸಾಯಂಕಾಲದ ಪಾರ್ಟಿಗೆ ಪೂರ್ಣಿಮಾ ಹೊರಟಿದ್ದಳು. ಆಂಟಿಯೂ ಬರುವಳೆಂದು ಭಾವಿಸಿದ್ದಳು. ಆದರೆ ದಿವಾಕರನನ್ನು ಹೊರಡಿಸಿದಳು. ''ಬೆಳಿಗ್ಗೆ ನಾನು ಹೋಗಿ ಬಂದಾಯ್ತಲ್ಲ. ಈಗಲೂ ಹೊರಟು ಹೋದರೆ ನನ್ನ ಗಂಡ ಒಬ್ಬರೇ ಆಗಿಬಿಡ್ತಾರೆ.... ಪಾರ್ಟಿಯೆಲ್ಲಾ ನಿಮ್ಮಂಥೋರಿಗೆ. ನೀನು ಹೇಗೂ ಒಬ್ಬಳೇ ಆಗ್ತೀಯ. ನಿನ್ನ ಜೊತೆಗೆ ದಿವಾಕರ ಇರ್ತಾನೆ. ಎಷ್ಟು ಹೊತ್ತಾದ್ರೂ ಪರವಾಗಿಲ್ಲ. ಚಿಂತೆ ಆಗುಲ್ಲ.

ಪೂರ್ಣಿಮಾ ಏನೂ ಹೇಳುವಂತಿರಲಿಲ್ಲ. ಸಿದ್ಧಳಾಗಿ ಹೊರಟಳು. ದಿವಾಕರನೂ ರೆಡಿಯಾಗಿ ರೂಮಿನಿಂದ ಹೊರಬಂದ. ಪೂರ್ಣಿಮಾ ಮತ್ತೆ ಮತ್ತೆ ಅವನನ್ನೇ ನೋಡದಳು. ಮಚ್ಚಿಗೆಯನ್ನು ಕಣ್ಣುಗಳು ತುಳುಕಿಸಿದವು. ವಿಶೇಷವಾಗಿ, ಆಸಕ್ತಿಯಿಂದ ತನಗೆ ಒಪ್ಪುವ ಉಡುಪನ್ನು ಧರಿಸಿದ್ದ. ತುಂಬು ತೋಳಿನ ಕ್ರೀಂ ಕಲರಿನ ಷರ್ಟು ಅವನ ಮುಖಕ್ಕೆ ಸುಂದರತೆಯನ್ನು ಒದಗಿಸಿತ್ತು. ಕಡು ಬ್ರೌನ್ ಕಲರಿನ ಪ್ಯಾಂಟು ಅವನ ಪರ್ಸನಾಲಿಟಿಗೆ ಹೊಂದಿಕೊಂಡಿತ್ತು. ಫಳಫಳನೆ ಹೊಳೆಯುವ ಕರಿಯ ಷೂಸುಗಳನ್ನು ಧರಿಸಿದ್ದ. ಒಪ್ಪವಾಗಿ ತಲೆಗೂದಲನ್ನು ಬಾಚಿದ್ದ. ನೀಟಾಗಿ ಷೇವ್ ಮಾಡಿಕೊಂಡಿದ್ದರಿಂದ ಮುಖದ ಕಳೆ ಹೆಚ್ಚಿತ್ತು. ದಿನ ನಿತ್ಯದ ಅರ್ಧ ತೋಳಿನ ಷರ್ಟು, ಲುಂಗಿಯಲ್ಲಿ ಕಂಡು ಬರುತ್ತಿದ್ದ ವ್ಯಕ್ತಿತ್ವ ಬದಲಾಗಿದೆಯೆಂದೆನಿಸಿತ್ತು.

''ನಾನು ರೆಡಿ ಪೂರ್ಣಿಮಾ. .. ಹೊರಡೋಣ್ವಾ!'' ಮುಗುಳ್ನಗುತ್ತಾ ಕೇಳಿದ.

''ಹೂಂ....'' ಅವನ ಪಕ್ಕದಲ್ಲಿ ಹೆಜ್ಜೆ ಹಾಕಿದಳು. ತನ್ನ ಉಡುಗೆಯ ಬಗ್ಗೆ ಮುಜುಗರವೆನಿಸಿತು. ತನ್ನ ಮದುವೆಯ ಸೀರೆಗಳನ್ನೆಲ್ಲಾ ಅಜ್ಜಿಯ ಮನೆಯಲ್ಲೇ ಬಿಟ್ಟು ಬಂದಿದ್ದಳು. ತಾಯಿಯ ಬಳಿ ಇದ್ದ ಒಂದೆರಡು ಸರಳವಾಗಿದ್ದ ರೇಶಿಮೆ ಸೀರೆಗಳನ್ನು ಮಾತ್ರ ತಂದಿದ್ದಳು. ಬ್ಯಾಂಕಿಗೆ ಚೂಡಿದಾರ್ ತೊಟ್ಟು ಹೋಗುತ್ತಿದ್ದಳು. ಸೀರೆ ಉಡುತ್ತಿದ್ದುದೇ

ಅಪರೂಪ.ಒಡವೆಗಳನ್ನು ತನ್ನೊಡನೆ ತಂದಿರಲಿಲ್ಲ. ಕರಿಮಣಿ ಸರವನ್ನು ಎಂದೋ ತೆಗೆದುಬಿಟ್ಟಿದ್ದಳು. ಅತ್ತೆ ಮನೆಯಲ್ಲಿ ಕೊಟ್ಟಿದ್ದ ಒಡವೆಗಳನ್ನು ಅವರಿಗೆ ಕೊಟ್ಟು ಬಿಟ್ಟಿದ್ದಳು. ಇದ್ದಕ್ಕಿದ್ದಂತೆ, ಈಗ ತನ್ನ ವೇಷಭೂಷಣ ಭಿಂ ಎನಿಸಿತು. ತಾನೋ, ಏನೂ ಆಸಕ್ತಿ ಇಲ್ಲದವಳಂತೆ, ಯಾವುದೋ ಸೀರೆ, ಅದಕ್ಕೆ ಸುಮಾರಾಗಿ ಒಪ್ಪುವ ತುಂಬು ತೋಳಿನ ರವಿಕೆ, ಕತ್ತಿನಲ್ಲಿ ಒಂದೆಳೆ ಚಿನ್ನದ ಸರ, ಒಂದು ಕೈಗೆ ಒಂದು ಕಡಗದಂತಹ ಬಳೆ, ಇನ್ನೊಂದು ಕೈಗೆ ರಿಸ್ಟ್‌ವಾಚ್....ಇಷ್ಟೇ ತನ್ನ ಅಲಂಕಾರ... ತಾನು ಇನ್ನು ಸ್ವಲ್ಪ ಆಸಕ್ತಿ ವಹಿಸಿ ಅಲಂಕರಿಸಿಕೊಂಡಿದ್ದರೆ... ಅಂತ ಅನ್ನಿಸದೇ ಇರಲಿಲ್ಲ. ದಿವಾಕರ ಆಟೋ ರಿಕ್ಷಾ ನಿಲ್ಲಿಸಿದ್ದ ಮುಜುಗರದಿಂದಲೇ ರಿಕ್ಷಾ ಹತ್ತಿದಳು.

ಮದುವೆಯ ರಿಸೆಪ್ಷನ್ ಪಾರ್ಟಿಯಲ್ಲಿ ಇವರಿಬ್ಬರನ್ನು ಒಟ್ಟಿಗೆ ಕಂಡವರೆಲ್ಲಾ ದಂಪತಿಗಳೆಂದೇ ಭಾವಿಸಿದರು. ಗಾಯತ್ರಿ ದಿವಾಕರನನ್ನು ಮೆಚ್ಚುಗೆಯಿಂದ ನೋಡಿದಳು. ಪೂರ್ಣಿಮಾ ಬೆಳಗಿನಂತೆಯೇ ಸರಳವಾಗಿ ಅಲಂಕರಿಸಿಕೊಂಡು ಬಂದುದನ್ನು ಗಮನಿಸಿದರೂ ಏನನ್ನೂಆಡಲಿಲ್ಲ.

''ಈ ರಾತ್ರಿ ನಾವು ಮನೆಗೆ ಬರುಲ್ಲ. ಸೀದಾ ಹೋಟೆಲಿಗೆ ಹೋಗಿ, ಒಂದು ವಾರ ಅಲ್ಲಿರುತ್ತೇವೆ. ಹಾಗಂತ ಆಂಟಿಗೆ ತಿಳಿಸಿಬಿಡು...'' ಪೂರ್ಣಿಮಾಳ ಕಿವಿಯಲ್ಲಿ ಉಸುರಿದಳು. ಪೂರ್ಣಿಮಾ ಗಂಭೀರವಾದಳು. ಆದಷ್ಟುಬೇಗ ಮನೆಗೆ ವಾಪಸ್ಸು ಹೋದರೆ ಸಾಕೆನಿಸಿತ್ತು. ಊಟ ಮುಗಿಯುತ್ತಿದ್ದಂತೆಯೇ ದಿವಾಕರನನ್ನು ಅವಸರಿಸಿದಳು.

ಮನೆಗೆ ಬಂದವಳೇ, ಸೀದಾ ತನ್ನ ರೂಮಿಗೆ ಹೋಗಿ, ಕನ್ನಡಿಯ ಮುಂದೆ ನಿಂತಳು. ತನ್ನ ಅಲಂಕಾರ, ತನ್ನ ಮೇಕಪ್ ಉಡುಗೆ ತೊಡುಗೆ ಎಲ್ಲಾ ಸಪ್ಪೆಯಾಗಿದೆ ಯೆಂದೆನಿಸಿತು. ಕಳ್ಳನಂತೆ ಹೆಜ್ಜೆ ಹಾಕಿ, ದಿವಾಕರ ತನ್ನ ಹಿಂದೆ ಬಂದು ನಿಂತಿರಬಹುದೇ ಎಂಬ ಸಂದೇಹದಿಂದ ತಿರುಗಿದಳು. ಆದರೆ ಅಲ್ಲಿ ಯಾರೂ ಇರಲಿಲ್ಲ. ನಿರಾಶೆ ಮೂಡಿತು. ತನ್ನ ಹಿಂದೆ ತನಗೆ ತಿಳಿಯದಂತೆ ಬರಬಾರದೆಂದು ತಾನೇ ಅವನಿಗೆ ಆರ್ಡರ್ ಮಾಡಿದ್ದಳು. ಬಟ್ಟೆ ಬದಲಾಯಿಸಿ, ಮುಖ ತೊಳೆದು ಮಲಗಲು ಸಿದ್ಧಳಾದಳು. ಮರೆಯದೇ ತನ್ನ ರೂಮಿನ ಬಾಗಿಲನ್ನು ಭದ್ರಪಡಿಸಿಕೊಂಡಳು. ಮೊಟ್ಟ ಮೊದಲ ಬಾರಿಗೆ, ಒಬ್ಬಳೇ ಮಲಗಿದ್ದಳು. ಹುಟ್ಟಿದಾರಭ್ಯ, ಅವಳಿಗೆ ನೆನಪಿದ್ದಂತೆ, ಎಂದೂ ಒಂಟಿಯಾಗಿದ್ದವಳಲ್ಲ. ಯಾಕೋ ಏನೋ ಭಯವಾಗತೊಡಗಿತು. ಆರಿಸಿದ್ದ ದೀಪವನ್ನು ಹಾಕಿದಳು. ಆ ರಾತ್ರಿಯೆಲ್ಲಾ ಅವಳ ರೂಮಿನಲ್ಲಿ ದೀಪ ಉರಿಯುತ್ತಿದ್ದುದನ್ನು ದಿವಾಕರ ಗಮನಿಸಿದ್ದ. ಭಾಸ್ಕರ ಆ ರಾತ್ರಿ ತಾವುಗಳು ಹೋಟೆಲ್ಲಿಗೆ ಹೋಗುತ್ತಿರುವ ವಿಷಯವನ್ನು ತಿಳಿಸಿದ್ದನಾದ್ದರಿಂದ, ಪೂರ್ಣಿಮಾ ಮೇಲೆ ಒಬ್ಬಳೇ ಮಲಗಿರುವಳೆಂದು ಅವನಿಗೆ ತಿಳಿದಿತ್ತು. ಪೂರಾ ಹೆದರಿಬಿಟ್ಟಿದ್ದಾಳೆ ಅದಕ್ಕೆ ದೀಪ ಹಾಕಿಕೊಂಡಿದಾಳೆ ಎಂದು ಊಹಿಸಿದ್ದ.

''ಯಾಕ್ರೀ... ರಾತ್ರಿಯೆಲ್ಲಾ ನಿಮ್ಮ ರೂಮಿನ ದೀಪ ಉರಿಯುತ್ತಿತ್ತು....?''

''ನಿಮಗೆ ಹೇಗೆ ಗೊತ್ತಾಯ್ತು!'' ತಟ್ಟನೆ ಕೇಳಿದಳು.

''ನಿಮ್ಮ ರೂಮಿನ ಕೆಳಗೇ ನನ್ನ ರೂಮು ಇರುವುದು. ಪಕ್ಕದ ಕಾಂಪೌಂಡ್ ಗೋಡೆ ಮೇಲೆ ಬೆಳಕು ಬೀಳುತ್ತಿತ್ತು.''

''ಮೇಲೆ ಒಬ್ಬಳೇ ಮಲಗಿದ್ನಲ್ಲ..ಏನೋ ಭಯವಾಯ್ತು....''

''ನನಗೆ ಒಂದ್ಮಾತು ಹೇಳಿದಿದ್ರೆ... ನಾನು ಅಲ್ಲಿ ಮಲಗುತ್ತಿದ್ದೆ. ನೀವು ಇಲ್ಲಿ ಕೆಳಗೆ ಮಲಗಬಹುದಾಗಿತ್ತು. ಇವತ್ನಿಂದ ಹಾಗೇ ಮಾಡಿ... ಕೆಳಗಡೆಯಾದರೆ ಅಮ್ಮ ಇರ್ತಾಳೆ.''

''ಒಂದೆರಡು ದಿನ ಕಳೆದರೆ ಅಡ್ಜಸ್ಟ್ ಆಗಬಹುದು. ''

''ಭಯ ಆದರೆ ನನ್ನನ್ನ ಕರೀರ್‍ರೀ... ಜಿರಲೆ ಭಯಾನಾ ? ಹಲ್ಲಿಯ ಭಯಾನ ಅಥವಾ ಬೆಕ್ಕು ಬರುತ್ತೆಂತ ಭಯಾನಾ ? ''

''ಅದ್ಯಾವ ಭಯವೂ ಅಲ್ಲ, ನನಗೆ ನಿಮ್ಮದೇ ಭಯ''ಎಂದುಬಿಟ್ಟಳು. ಅವನ ಮುಖ ಕಪ್ಪಿಟ್ಟಿತು.

''ಅಮ್ಮ ಕೇಳಿಸ್ಕೊಂಡ್ರೆ ಏನಂದುಕೊಳ್ತಾಲೆ ? ನನ್ನನ್ನ ಲೋಫರ್ ಅಂತ ತಿಳಿದುಕೊಂಡಿರುವ ಹಾಗಿದೆ ನೀವು ''

''ಸಾರಿ ತಮಾಷೆ ಮಾಡಿದೆ ಅಷ್ಟೇ....''

''ಇಂಥಾ ತಮಾಷೆ ಮಾಡಬೇಡಿ ಮಿಸ್... ನಾನು ಸಭ್ಯ ...''

''ನಿಮ್ಮ ಸಭ್ಯತೆ ನನಗೂ ಗೊತ್ತು ಮಿಸ್ಟರ್. ನಾನು ಮರೆತಿಲ್ಲ..''

''ಸಾರಿ ಕೇಳಿಕೊಂಡಿದೀನಲ್ಲ....''

''ಓ....ಕೇ... ಈಗ ಏನು ತಿಂಡಿ ಮಾಡ್ತಿದೀರಿ ?''

''ರವೆ ದೋಸೆ, ಚಟ್ನಿಪುಡಿ.... ಲಂಚ್‌ಬಾಕ್ಸ್‌ಗೆ ಚಿತ್ರಾನ್ನ...''

''ಓ....ಕೆ.... ಕಾಲು ಗಂಟೇಲಿ ರೆಡಿಯಾಗಿ ಬರ್ತೀನಿ. ಎಲ್ಲಾ ರೆಡಿಯಾಗಿರಬೇಕು...'' ಎನ್ನುತ್ತಾ ಮತ್ತೆ ಮಹಡಿ ಏರಿದಳು.

''ಎಲಾ ಇವಳಾ... ನಾನು ಹೆಲ್ಪ್ ಮಾಡ್ತೀನಿ ಅಂತ ಹೇಳಲೇ ಇಲ್ಲವಲ್ಲ ಎಂದುಕೊಂಡು ಹೆಗಲ ಮೇಲೆ ಟವೆಲನ್ನು ಎಸೆದುಕೊಂಡು ಅಡಿಗೆಯ ಮನೆಯನ್ನು ಹೊಕ್ಕ.''

ದೊಸೆಯನ್ನು ಮುರಿದು ಬಾಯಿಗಿಟ್ಟುಕೊಂಡವಳೇ 'ಥೂ' ಎನ್ನುತ್ತಾ ತೆಗೆದಿಟ್ಟಳು. ''ಇದೇನ್ರಿ ಇದು ? ಉಪ್ಪನ್ನೇ ಹಾಕಿಲ್ಲ... ತಿನ್ನುಕಾಗ್ತಾನೇ ಇಲ್ಲ'' ಅನ್ನುತ್ತಾ ಎದ್ದುಬಿಟ್ಟಳು. ಅವನಿಗೆ ಅವಮಾನವಾದಂತಾಗಿತ್ತು.

''ನಾನೇನು ಇವಳ ಮನೆಯ ಅಡಿಗೆಯವನೇ ? ಹೀಗೆ ದಬಾಯಿಸ್ತಾಳಲ್ಲ ಅಂತಂದುಕೊಂಡು, ಒಂದು ಚೂರು ದೋಸೆಯನ್ನು ಬಾಯಿಗೆಸೆದುಕೊಂಡ. ದೋಸೆ ರುಚಿಯಾಗಿಯೇ ಇತ್ತು. ಉಪ್ಪು ಖಾರ ಹಿತವಾಗಿಯೇ ಇತ್ತು . ದೋಸೆಯ ತಟ್ಟೆಯನ್ನು ಕೈಗೆತ್ತಿಕೊಂಡು, ಒಂದು ದೊಡ್ಡ ಚೂರನ್ನು ಅವಳ ಬಾಯಿಗೆ ತುರುಕಿದ. ಏನಾಗಿದೆ... ಸುಳ್ಳು ಯಾಕೆ ಹೇಳ್ತಿದೀರಾ.... ? ''

ಅವಳು ಕಷ್ಟಪಟ್ಟು ದೋಸೆಯನ್ನು ನುಂಗಿ, ನಗುತ್ತಾ ನುಡಿದಳು.

''ನಿಮ್ಮನ್ನು ರೇಗಿಸೋಣ ಅಂತನ್ನಿಸ್ತು... ಆದರೆ ಹೀಗೆ ಮಾಡ್ತೀರೀಂತ ಅಂದುಕೊಂಡಿರಲಿಲ್ಲ.''

''ನನಗೂ ಕೋಪ ಬರುತ್ತೆ ಕಣ್ರೀ... ನಾನು ಉಪ್ಪು ಖಾರ ತಿನ್ನೋ ಮನುಷ್ಯನೇ. ... ನಾನು ಹೊತ್ತು ಹೊತ್ತಿಗೆ ಬೇಯಿಸಿ ಹಾಕುವುದಲ್ಲದೇ, ನಿಮ್ಮಗಳ ಮಾತನ್ನು ಕೇಳಬೇಕು...'' ಮುಖವನ್ನು ಊದಿಸಿಕೊಂಡು ನಿಂತ. ಅವಳು ಅವನ ಕಡೆಗೆ ಬಾಗಿ, ಸಾರಿ ದಿವಾಕರ್... ಎಂದು ನುಡಿದು ಅವನ ಎಡಕೆನ್ನೆಯ ಮೇಲೆ ಸಣ್ಣಗೆ ಒಂದು ಪೆಟ್ಟು ಹಾಕಿ ಅಡಿಗೆ ಮನೆಗೆ ಬಂದಳು.

ಒಂದು ತುತ್ತು ಚಿತ್ರಾನ್ನವನ್ನು ಬಾಯಿಗೆ ಹಾಕಿಕೊಂಡಳು. ಅದಕ್ಕೆ ನಿಜವಾಗಿಯೂ ಉಪ್ಪನ್ನು ಹಾಕಿರಲಿಲ್ಲ. ಒಂದು ತುತ್ತನ್ನು ತಿಂದು, ಬಾಯಿ ಬಿಟ್ಟುಕೊಂಡು ನಿಂತಿದ್ದವನ ಬಾಯಿಗೆ ತುರುಕಿದಳು.

''ಮಾಡಿದ್ದುಣ್ಣೋ ಮಹಾರಾಯ ಅಂತ... ಎಷ್ಟು ರುಚಿಯಾಗಿದೆ ತಿಂದು ನೋಡಿ'' ಅವನು ಥೂ ಥೂ ಎಂದು ಬಾಯಿಯಲ್ಲಿದ್ದುದನ್ನು ಉಗುಳಿದ.

''ಯಾಕೆ ಹೀಗಾಯ್ತು ?''ಅವನು ತಲೆ ಕೆರೆದುಕೊಂಡ.

''ಹೀಗಾದದ್ದು ಯಾಕೆ ಅಂತ ಇಡೀ ದಿನ ಕೂತು ಯೋಚಿಸಿ. ಉತ್ತರ ಸಿಕ್ಕರೂ ಸಿಗಬಹುದು. ಸಿಗದಿದ್ದರೆ ಸಂಜೆ ನನ್ನನ್ನು ಕೇಳಿ ನಾನು ಹೇಳ್ತೀನಿ.... '' ಎನ್ನುತ್ತಾ ಡಬ್ಬಿಯನ್ನೆತ್ತಿಕೊಂಡು ಹೊರಟಳು.

''ರೀ ಉಪ್ಪು ಉಪ್ಪು....''ಅವನು ಕೂಗಿದ.

''ಪರವಾಗಿಲ್ಲ. ಇವತ್ತೊಂದು ದಿನ ಹಾಗೆ ತಿನ್ನೋಕೆ ಪ್ರಯತ್ನ ಪಡ್ತೀನಿ''ಎನ್ನುತ್ತಾ ಹೊಸ್ತಿಲನ್ನು ದಾಟಿದಳು. ಅವನು ತಲೆಯ ಮೇಲೆ ಕೈ ಹೊತ್ತು ಕುಳಿತ.

ಸಂಜೆ ಅವಳು ಬರುವುದನ್ನೇ ಕಾದಿದ್ದ. ಅವಳಿಗೆಂದೇ ಸ್ಪೆಷಲ್ ಪಕೋಡವನ್ನು ಕಟ್ಟಿಸಿಕೊಂಡು ಬಂದಿದ್ದ. ಅಂಜುತ್ತಲೇ, ತಿಂಡಿ ಕಾಫಿಯನ್ನು ತೆಗೆದುಕೊಂಡು ಮಹಡಿಯನ್ನು ಹತ್ತಿದ. ರೂಮಿನ ಬಾಗಿಲನ್ನು ಹಾಕಿಕೊಂಡಿದ್ದಳು. ಮೆಲ್ಲಗೆ ಬಾಗಿಲನ್ನು ಬಡಿದ. ಬಾಗಿಲನ್ನು ತೆಗೆದವಳು, ಅವನಿಗಿಂತ ಮುಂದಾಗಿ ಮೆಟ್ಟಿಲನ್ನು ಇಳಿದು ಬಂದಳು.

''ಮಹಡಿ ಹತ್ತಿ ಬರಬೇಡಿ ಅಂತ ಹೇಳಿರಲಿಲ್ವಾ ? ಇಲ್ಲಿಗೇ ಕರೆಯ ಬೇಕಾಗಿತ್ತು...''

''ಬೆಳಿಗ್ಗೆ ದೋಸೆಯನ್ನು ತಿನ್ನಲಿಲ್ಲ. ಚಿತ್ರಾನ್ನ ರುಚಿಯಾಗಿರಲಿಲ್ಲ. .. ಹೊಟ್ಟೆ ಹಸಿದುಕೊಂಡೇ ಇರ್ತೀರೇನೋ ಅಂತ...''

''ನಮ್ಮ ಬ್ಯಾಂಕ್ ಹತ್ತಿರ ಬೇಕಾದಷ್ಟು ಹೋಟೆಲ್ಲುಗಳಿವೆ. ಅದಿರಲಿ, ಜೀವಮಾನವೆಲ್ಲಾ ಹೀಗೆ ಮನೇಲಿ ಅಡಿಗೆ ಭಟ್ಟನ ತರಹ ಕಾಲ ಕಳಿಬೇಕೂಂತ ಮಾಡಿದೀರಾ...?''ಅವನು ಬೆಪ್ಪನಂತೆ ಪಿಳಿ ಪಿಳಿ ನೋಡಿದ.

''ಯಾಕ್ರೀ ನಾನು ಹೇಳಿದ್ದು ಅರ್ಥವಾಗಲಿಲ್ವಾ''

''ಯಾಕ್ರೀ ಹೀಗೆ ಜಬರ್ದಸ್ತು ಮಾಡ್ತಿದೀರಿ... ನನಗೆ ಕೆಲಸ ಸಿಕ್ಕಿಲ್ಲ ಮನೇಲಿದೀನಿ. ಮನೇಲಿದೀನಿ ಅಂತ ಅಡಿಗೆ ಕೆಲಸ ಮಾಡ್ತಿದೀನಿ. ಇದರಿಂದ ನಿಮಗೇನು ತೊಂದರೆ !''

''ಈ ಕಾಲದಲ್ಲಿ ಹೆಣ್ಣು ಮಕ್ಕಳೆಲ್ಲಾ ಹೊರಗೆ ದುಡಿದು ಸಂಪಾದಿಸುತ್ತಿರುವಾಗ, ನೀವು ಹೀಗೆ ಮನೇಲೇ ಕೂತು ಕಾಲ ಕಳೀತಿದೀರಲ್ಲ.... ''

"ಅಯ್ಯೋ ಇದರಲ್ಲಿ ನನ್ನ ತಪ್ಪೇನು ? ಕೆಲಸ ಸಿಗಲಿಲ್ಲ! ಅದಕ್ಕೆ ಹೋಗಲಿಲ್ಲ. ಅಪ್ಲೈ ಮಾಡೀ ಮಾಡೀ ಸೋತಿದೀನಿ... ನನ್ನ ಮನೇಲಿ ನಾನು ಅಡಿಗೆ ಭಟ್ಟನ ತರಹವಾದ್ರೂ ಇರ್ತೀನಿ.... ಅಗಸನ ತರಹವಾದ್ರೂ ಇರ್ತೀನಿ ... ಹೋಗ್ರೀ ... ಹೋಗ್ರೀ..."

"ನೆನ್ನೆ ಸಾಯಂಕಾಲ ನೀವು ಅಗಸನ ತರಹವಂತೂ ಇರಲಿಲ್ಲ. ಒಳ್ಳೇ ಆಫೀಸರ್ ತರಹ ಕಾಣುತ್ತಿದ್ರೀ.... ಸದಾ ಯಾಕೆ ಹಾಗೆ ಇರಬಾರದು ...." ಇದ್ದಕ್ಕಿದ್ದಂತೆ ಮಾತು ಬದಲಾದಾಗ ಗಲಿಬಿಲಿಗೊಂಡು ನಕ್ಕ.

"ಹೋ...ಅದಾ... ನನ್ನನ್ನು ಚೆನ್ನಾಗಿ ಅಬ್ಸರ್ವ್ ಮಾಡೀದೀರಿಂತ ಅರ್ಥವಾಯ್ತು... ಆಗಲೇ ಕಾಂಪ್ಲಿಮೆಂಟ್ಸ್ ಹೇಳಬಹುದಾಗಿತ್ತಲ್ಲ."

"ಉಬ್ಬಿಹೋಗ್ತೀರಿ ಅಂತ ಹೇಳಲಿಲ್ಲ. ಹೇಳಿದ್ದಿದ್ರೆ ಈ ಪಕೋಡ ಸಿಗುತ್ತಿತ್ತಾ ?"

"ಏನೋ ನೀವಂತೂ ನನಗೆ ಅರ್ಥವೇ ಆಗುಲ್ಲ... ಬೈತೀರಿ, ಹೊಗಳ್ತೀರಿ... ಹೊಡಿತೀರಿ.. ಹೀಯಾಳಿಸ್ತೀರಿ..."

"ಈ ತಮಾಷೆ ಸಾಕು. ಸೀರಿಯಸ್ಸಾಗಿ ಮಾತನಾಡೋಣ. ನಾನು ಲೋನ್ ಕೊಡಿಸಿದರೆ ಸೀರಿಯಸ್ಸಾಗಿ ಯಾವುದಾದರೂ ಬಿಸನೆಸ್ ಮಾಡಲು ಸಿದ್ಧವಾಗಿದೀರಾ?"

"ಬಿಸಿನೆಸ್ಸ್! ನನಗೆ ಯಾವ ಎಕ್ಸ್‌ಪೀರಿಯನ್ಸೂ ಇಲ್ಲವಲ್ಲ"

"ಕೆಲಸ ಮಾಡಿದರೆ ತಾನಾಗಿಯೇ ಎಕ್ಸ್‌ಪೀರಿಯನ್ಸ್ ಬರುತ್ತೆ... ನಿಮ್ಮ ಕ್ವಾಲಿಫಿಕೇಷನ್‌ಗೆ ಸೂಟ್ ಆಗುವಂತಹ ಕೆಲಸ ಮಾಡಬಹುದಲ್ಲ."

"ನನ್ನ ಕ್ವಾಲಿಫಿಕೇಷನ್ ಏನು ? ನನ್ನ ಕ್ವಾಲಿಟಿ ಏನು, ನನಗೆ ಎಲ್ಲಾ ಮರೆತು ಹೋಗಿದೆ. ನೀವೇ ಯಾವುದಾದರೂ ಒಂದನ್ನು ಸಜೆಸ್ಟ್ ಮಾಡಿ."

"ನೀವು ತುಂಬಾ ಮಾತನಾಡುವುದರಿಂದ, ನೀವು ರಿಯಲ್‌ಎಸ್ಟೇಟ್ ಏಜೆಂಟ್ ಆಗಬಹುದು."

"ನನ್ನ ಕೈಲಿ ಆಗುಲ್ಲಪ್ಪಾ... ಯಾರು ಬೀದಿ ಬೀದಿ ಸುತ್ತುತ್ತಾರೆ ? ನನ್ನ ಹತ್ತಿರ ವೆಹಿಕಲ್ ಕೂಡಾ ಇಲ್ಲ...."

"ಹೋಗಲಿ ಬಿಡಿ ಸೀರೆ ಬಿಸಿನೆಸ್ ಮಾಡ್ತೀರಾ ?"

ಗೊಳ್ಳನೆ ನಕ್ಕ."ಗಂಡಸಿಗೇಕೆ ಗೌರಿ ಚಿಂತೆ ಅನ್ನೋಹಾಗೆ, ಸೀರೆಯ ಅಂಚು, ಸೆರಗು, ಯಾವುದು ಅಂತ ಗೊತ್ತಿಲ್ಲದೋನು ನಾನು..."

"ಕೋಡುಬಳೆ, ಚಕ್ಕುಲಿ ಮಾಡಿ ಮಾರ್ತೀರಾ ...?"

"ಮಾಡಿಕೊಡಿ . ತಿಂತೀನಿ. ..." ಮತ್ತೆ ನಕ್ಕ.

"ತಮಾಷೆಯಲ್ಲ ದಿವಾಕರ್.... ಇಂಥ ಕಾಂಡಿಮೆಂಟ್ಸ್ ಬಿಸಿನೆಸ್ಸಲ್ಲೂ ಲಾಭ ಇರುತ್ತೆ... ಎಷ್ಟೊಂದು ಜನ ಹೊಟ್ಟೆ ಪಾಡಿಗಾಗಿ ಮನೆ ಮನೆಗೆ ಹೋಗಿ ಮಾರಿ, ಸಂಪಾದಿಸ್ತಾರೆ ಗೊತ್ತಾ ? ನಮ್ಮ ಬ್ಯಾಂಕಿಗೆ ಪ್ರತೀ ಶನಿವಾರ ಒಬ್ಬ ಹುಡುಗ ತಂದು ಮಾರ್ತಾನೆ. ನಿಮಿಷದಲ್ಲಿ ಅವನ ಬ್ಯಾಗ್ ಖಾಲಿಯಾಗಿ ಹೋಗುತ್ತದೆ."

''ಅಂದ್ರೆ... ನಾನು ನಿಮ್ಮ ಬ್ಯಾಂಕ್‌ಗೆ ತಂದು ಮಾರಬೇಕೂಂತ ಸೂಚ್ಯವಾಗಿ ಹೇಳ್ತಿದೀರಾ ...? ''ಅಡ್ಡಡ್ಡ ತಲೆಯಾಡಿಸದ.

''ಛೇ... ಛೇ... ನಾನೆಲ್ಲಿ ಹಾಗಂದೆ... ? ಹೋಗಲಿ ನಿಮಗೆ ಇಷ್ಟವಾದದ್ದು ಯಾವುದಾದರೂ ಇದ್ದರೆ ಹೇಳಿ ನೋಡೋಣ.''

''ನನಗೆ ಕಂಪ್ಯೂಟರ್ ಟ್ಯೂಟರ್ ಆಗಬೇಕೂಂತ ಆಸೆ.''

''ನಿಮಗೆ ಕಂಪ್ಯೂಟರ್ ನಾಲೆಡ್ಜ್ ಇದೆಯಾ ?''

''ಇಲ್ಲ... ಇಲ್ಲವೇ ಇಲ್ಲ. ಮೊದಲು ನಾನು ಕಲಿತು, ನಂತರ ನಾನು ಹೇಳಿಕೊಡಬೇಕು... ಆದರೆ ... ಕಂಪ್ಯೂಟರ್ ಕೋರ್ಸಿಗೆ ಕಟ್ಟಲು ನನ್ನ ಬಳಿ ಹಣ ಇಲ್ಲ....''ಅವನು ವ್ಯಥೆಯಿಂದ ಹೇಳಿಕೊಂಡಾಗ ಅವಳಿಗೆ ಪಿಚ್ಚೆನಿಸಿತು. ಅವನ ಕೈಯೊಳಗೆ ತನ್ನ ಕೈಯನ್ನಿಟ್ಟು ಆತ್ಮೀಯತೆ ತೋರಿದಳು.

''ನೀವು ಕೋರ್ಸ್‌ಗೆ ಸೇರಿಕೊಳ್ಳಿ. ನಾನು ಹಣವನ್ನು ಕೊಡ್ತೀನಿ.''

''ನೀವಾ ? ಲೋನಾ ! ....''

''ಹುಂ, ಲೋನನ್ನೇ ಕೊಡೋದು... ಒಂದು ನಲವತ್ತು ಐವತ್ತು ಸಾವಿರ ಖರ್ಚಾಗಬಹುದು. ವರ್ಷದೊಳಗೆ ನಿಮ್ಮ ಕೋರ್ಸ್ ಮುಗಿಯುತ್ತದೆ. ಆಮೇಲೆ ನಿಮಗೆ ಕೆಲಸ ಸಿಗುವುದು ಕಷ್ಟವಾಗುಲ್ಲ. ಈಗ ಪ್ರೈಮರಿ ಸ್ಕೂಲುಗಳಲ್ಲೂ ಸಹ ಕಂಪ್ಯೂಟರ್ ಟೀಚರ್‌ಗಳನ್ನು ನೇಮಕ ಮಾಡಿಕೊಳ್ತಾರೆ...''

''ಥ್ಯಾಂಕ್ ಯೂ ಪೂರ್ಣಿಮಾ...''ಎನ್ನುತ್ತಾ ಅವಳ ಕೈಯನ್ನು ತನ್ನ ತುಟಿಗೆ ಒತ್ತಿಕೊಂಡು ಚುಂಬಿಸಿದ.ಅವಳು ಮೆಲ್ಲಗೆ ತನ್ನ ಕೈಯನ್ನು ಬಿಡಿಸಿಕೊಂಡಳು.

''ಸಾರಿ ಪೂರ್ಣಿಮಾ... ನಾನು ಎಕ್ಸೈಟ್ ಆದಾಗ, ಹೇಗ್ಹೇಗೋ ಬಿಹೇವ್ ಮಾಡಿ ಬಿಡ್ತೀನಿ.... ಸಾರಿ...''

''ದಟ್ಸ್ ಆಲ್‌ರೈಟ್... ನಾಳೆ ನಾಡಿದ್ದರಲ್ಲಿ ನಾನು ಬ್ಯಾಂಕ್ ಮ್ಯಾನೇಜರ್ ಹತ್ತಿರ ಮಾತನಾಡಿ, ಲೋನ್ ತಗೋಳ್ತೀನಿ. ನೀವು ಅಷ್ಟರಲ್ಲಿ ಕೋರ್ಸ್ ಸೇರಿಕೊಳ್ಳಲು ಏನು ಫಾರ್ಮಾಲಿಟೀಸ್ ಇದೆಯೋ ಅದನ್ನೆಲ್ಲಾ ತಿಳಿದುಕೊಂಡು ಬನ್ನಿ. ಮೊದಲು ನಿಮ್ಮ ಈ ಅಡಿಗೆ ಭಟ್ಟನ ವೇಷವನ್ನು ತೆಗೆದುಹಾಕಿ.. '' ಎನ್ನುತ್ತಾ ಅವನ ಹೆಗಲ ಮೇಲಿದ್ದ ಟವೆಲ್ಲನ್ನು ಕಿತ್ತೊಗೆದಳು. ಅವನು ಬಾಯ್ತುಂಬ ನಕ್ಕ.

ಒಂದು ವಾರದೊಳಗೆ ದಿವಾಕರನ ದಿನಚರಿ ಬದಲಾಗಿತ್ತು. ಸಮೀಪದಲ್ಲೇ ಇದ್ದ ಒಂದು ಇನ್‌ಸ್ಟಿಟ್ಯೂಟ್‌ನಲ್ಲಿ ಕಂಪ್ಯೂಟರ್ ಕೋರ್ಸಿಗೆ ಸೇರಿಕೊಂಡಿದ್ದ. ಪೂರ್ಣಿಮಾಳಿಗೆ ಅನೇಕ ಸಾರಿ ಥ್ಯಾಂಕ್ಸ್ ಹೇಳಿದ್ದ. ಈ ನಡುವೆ ಅವರ ಸ್ನೇಹ ಗಾಢವಾಗಿತ್ತು. ಈ ಬದಲಾವಣೆಯನ್ನು ಗಾಯತ್ರಿ ಗಮನಿಸಿದ್ದಳು. ಮೇಲಿನ ಒಂದು ರೂಮಿನಲ್ಲಿ ಗಾಯತ್ರಿ ತನ್ನ ಪತಿಯೊಂದಿಗೆ ಇರತೊಡಗಿದ್ದಳು. ಮುಂಚಿನಂತೆಯೇ ಗಾಯತ್ರಿ, ಪೂರ್ಣಿಮಾ ಹಾಗೂ ಭಾಸ್ಕರ ಬೆಳಗಿನ ಕಾಫಿ ತಿಂಡಿಯ ನಂತರ ಮನೆಯಿಂದ ಹೊರಟು ಬಿಡುತ್ತಿದ್ದರು. ದಿವಾಕರ ಸಾಯಂಕಾಲದ ಕೋರ್ಸ್‌ಗೆ ಸೇರಿಕೊಂಡಿದ್ದ. ಪೂರ್ಣಿಮಾ ಬ್ಯಾಂಕಿನಿಂದ ಬರುವ ವೇಳೆಗೆ

ಅವನು ಹೊರಟು ಹೋಗಿರುತ್ತಿದ್ದ. ಅವನು ಬರುವುದನ್ನೇ ಎದುರು ನೋಡುತ್ತಿದ್ದಳು. ರಾತ್ರಿಯ ಅಡಿಗೆಯನ್ನು ಗಾಯತ್ರಿ ಪೂರ್ಣಿಮಾ ಒಂದಾಗಿ ತಯಾರಿಸುತ್ತಿದ್ದರು. ಎಲ್ಲರೂ ಒಟ್ಟಿಗೆ ಕುಳಿತು ಊಟ ಮಾಡುತ್ತಿದ್ದರು. ಆಂಟಿಗೆ ಕೆಲಸ ಕಡಿಮೆಯಾಗಿದ್ದುದರಿಂದ ತನ್ನ ಪತಿಯ ಆರೋಗ್ಯದ ಕಡೆ ಹೆಚ್ಚು ಗಮನ ಕೊಡುತ್ತಿದ್ದಳು.

ಅಂತೂ ಕಡೆಗೆ ಕೋರ್ಟು ತೀರ್ಪನ್ನು ನೀಡಿತ್ತು. ಚಂದ್ರನಿಂದ ಪೂರ್ಣಿಮಾಳಿಗೆ ಬಿಡುಗಡೆ ಸಿಕ್ಕಿತ್ತು. ಆ ದಿನವೇನೂ ಅವಳಿಗೆ ಸುದಿನವೆನಿಸಲಿಲ್ಲ. ಮೋಡ ಮುಸುಕಿ ದಂತಾಗಿತ್ತು ಅವಳ ಮನಸ್ಸು. ಅವಳ ಅನ್ಯಮನಸ್ಕತೆಯನ್ನು ಗಮನಿಸಿದ ಗಾಯತ್ರಿ, ಅವಳ ಗಮನವನ್ನು ಬೇರೆಡೆಗೆ ಸೆಳೆಯಲು ಪ್ರಯತ್ನಿಸಿದಳು.

''ಈ ಭಾನುವಾರ, ನಾವುಗಳು ಹೊರಗೆ ಎಲ್ಲಾದರೂ ಪಿಕ್‌ನಿಕ್‌ಗೆ ಹೋಗೋಣ ಬರ್ತೀರಾ?''

''ಈ ಭಾನುವಾರ, ನಮ್ಮ ತಾಯಿ ಹಾಗೂ ಸೋದರ ಮಾವ ಬರ್ತೀದೀವಿ ಅಂತ ಫೋನು ಆಡಿದಾರೆ. ನೀವೇ ಇಬ್ಬರು ಹೋಗಿ ಬನ್ನಿ''

''ನಾವು ಇಬ್ಬರು ಅಲೆದದ್ದು ಜಾಸ್ತಿಯಾಯ್ತು ಪೂರ್ಣಿಮಾ... ನಾವುಗಳು ಒಬ್ಬರಿಗೊಬ್ಬರು ಹೊಸಬರೇನಲ್ಲ. ನೀವೂ, ದಿವಾಕರ ಇಬ್ಬರೂ ಬಂದರೆ, ಒಂದು ಚೇಂಜ್ ಇರುತ್ತೆ ಅಂತ ಅನ್ನಿಸ್ತು. ಹೋಗಲಿ ಬಿಡಿ, ನೆಕ್ಸ್ಟ್ ವೀಕ್ ಹೋಗೋಣ...''

''ನೋಡೋಣ...''

''ಯಾಕೆ ಒಂಥರಾ ಇದೀರಾ ಪೂರ್ಣಿಮಾ... ಎನಿ ಪ್ರಾಬ್ಲಂ ? ''

''ಏನೂ ಪ್ರಾಬ್ಲಂ ಇಲ್ಲ. ಹಳೇ ಪ್ರಾಬ್ಲಂ ಸಾಲ್ವ್ ಆಯ್ತು... ಯಾಕೋ ಮೂಡೇ ಚೆನ್ನಾಗಿಲ್ಲ.''

''ಬರ್ತೀರಾ ಹೊರಗೆ ತಿರುಗಾಡಿ ಬರೋಣ... ನನಗೆ ಹೇಳುವ ವಿಷಯವಾದರೆ ಹೇಳಿ. ನಿಮ್ಮ ಹೃದಯ ಹಗುರವಾಗಬಹುದು.''

''ಇವತ್ತು ಫೈನಲ್ ತೀರ್ಪು ಸಿಕ್ಕಿತು. ಬಿಡುಗಡೆ ಸಿಕ್ಕಿತು. ಮುಂದೇನು ಅಂತ ಚಿಂತಿಸ್ತಿದ್ದೆ ...''

''ಚಿಂತಿಸೋಕೆ ಏನಿದೆ ? ಆದಷ್ಟು ಬೇಗ ಇನ್ನೊಂದು ಮದುವೆಯಾಗಿ...''

''ಮದುವೆ ಅಂತ ನೆನೆಸಿಕೊಂಡರೇ ಮುಜುಗರವಾಗುತ್ತೆ. ಒಂದು ಫೈಲ್ಯೂರ್ ಆದಮೇಲೆ, ಯಾಕೋ ಮದುವೆ ಮೇಲೆ ನಂಬಿಕೇನೇ ಇಲ್ಲ.''

''ಎರಡನೇ ಮದುವೆ ಗ್ರ್ಯಾಂಡ್ ಸಕ್ಸಸ್ ಆಗಬಹುದು.''

''ಏನೋ ಗೊತ್ತಿಲ್ಲ ಗಾಯತ್ರಿ... ಆ ಬಗ್ಗೆ ಯೋಚಿಸೋಕೆ ನನಗೆ ಸಮಯ ಬೇಕು.''

''ನೀವು ನಿಧಾನಿಸಿದ್ರೆ ದಿವಾಕರನ ಗತಿ?''

''ಚೆನ್ನಾಗಿದೆ ನನ್ನ ಮದುವೆಗೂ, ದಿವಾಕರನಿಗೂ ಏನು ಸಂಬಂಧ ?''

''ಸಂಬಂಧವಿಲ್ಲದೇ, ದಿವಾಕರ ನಿಮ್ಮ ಹಿಂದೆ ಹಿಂದೆ ತಿರುಗ್ತಾರಾ ?''

''ಗಾಯತ್ರಿ... ನೀವು ತಪ್ಪು ತಿಳಿದಿದೀರಿ. ನಾವಿಬ್ಬರೂ ಒಳ್ಳೆಯ ಸ್ನೇಹಿತರು ಅಷ್ಟೇ.''

''ಸ್ನೇಹಿತರೇ ಸಂಬಧಿಗಳಾಗಬಾರದು ಅಂತೇನಿಲ್ಲ, ನನ್ನ ಭಾಸ್ಕರನ ಸಂಬಂಧ ಸ್ನೇಹದಿಂದಲೇ ಪ್ರಾರಂಭವಾದದ್ದು. ಒಳ್ಳೆಯ ಸ್ನೇಹವಿದ್ದರೆ, ಸಂಬಂಧ ಕೂಡಾ ಚೆನ್ನಾಗಿಯೇ ಇರುತ್ತದೆ. ''

''ದಿವಾಕರನ ಬಗ್ಗೆ ನಾನು ಹಾಗೇನೂ ಅಂದುಕೊಂಡಿಲ್ಲ ಗಾಯತ್ರಿ...''

''ನಾನು ಅವತ್ತೇ ಒಂದು ಮಾತು ಹೇಳಿದ್ದೆ ಜ್ಞಾಪಕವಿದೆಯಾ ಪೂರ್ಣಿಮಾ. .. ಚಂದ್ರ ನಿಮ್ಮ ಪಾಸ್ಟ್... ದಿವಾಕರ ನಿಮ್ಮ ಫ್ಯೂಚರ್... ಈ ಬಗ್ಗೆ ಆದಷ್ಟು ಬೇಗ ನಿರ್ಧಾರ ತಗೊಳ್ಳಿ. ದಿವಾಕರ ನಿಮ್ಮನ್ನು ಪ್ರೀತಿಸುತಿದಾರೆ. ನನಗೆ ಗೊತ್ತು..''

ಪೂರ್ಣಿಮಾ ಉತ್ತರಿಸಲಿಲ್ಲ. ದಿವಾಕರನ ಕಣ್ಣಿನ ಹೊಳಪಿನಲ್ಲಿ, ಅವನ ಪ್ರೀತಿಯನ್ನು ಗುರುತಿಸಿದ್ದಳು. ಆದರೆ ಈಗಾಗಲೇ ಆಗಿದ್ದ ಅನುಭವ ಅವಳಲ್ಲಿ ಆತಂಕವನ್ನುಂಟು ಮಾಡಿತ್ತು. ಅವಳೂ ದಿವಾಕರನನ್ನು ತನಗೇ ಅರಿವಿಲ್ಲದಂತೆ ಪ್ರೀತಿಸತೊಡಗಿದ್ದಳು. ಆದರೆ ಸಂಬಂಧದ ಕಡೆಗೆ ಒಯ್ಯಲು ಹಿಂಜರಿಯುತ್ತಿದ್ದಳು.

''ನಾನು ಆಂಟಿಯ ಹತ್ತಿರ ಮಾತ್ನಾಡ್ಲಾ?''

''ಬೇಡ .. ಬೇಡ... ನಾನು ಡೈವೋರ್ಸಿ ಅಂತ ಗೊತ್ತಾದ್ರೆ... ಖಂಡಿತಾ ಒಪ್ಪಲ್ಲ. ದಿವಾಕರನಿಗೆ ಕೂಡಾ ನಾನು ಡೈವೋರ್ಸಿ ಅಂತ ತಿಳಿಯದು.''

''ಪ್ರೀತಿಯ ಮಧ್ಯೆ ಡೈವೋರ್ಸ್ ಅಡ್ಡ ಬರುಲ್ಲ....''

''ಒಂದು ವೇಳೆ ಅಡ್ಡ ಬಂದರೆ ? ಆಗ ನಮ್ಮಿಬ್ಬರ ಸ್ನೇಹವೂ ಮುರಿದು ಬೀಳುತ್ತೆ. ನನಗೆ ಬೇರೆ ಕಡೆಗೆ ಟ್ರಾನ್ಸಫರ್ ಆಗೋವರೆಗೂ ಇಲ್ಲಿ ಇರ್ತೀನಿ. ಆಮೇಲೆ ಮುಂದಿನ ಕತೆ ಹೇಗೋ....''

''ಎಲ್ಲೇ ಹೋದರೂ ಕತೆ ಮುಂದುವರಿಯುತ್ತದೆ. ಟ್ರಾನ್ಸ್‌ಫರ್ ಆಗಿ ಹೋದ ಮಾತ್ರಕ್ಕೆ ಪ್ರೀತಿ ಕಡಿಮೆಯಾಗುಲ್ಲ, ಸಂಬಂಧ ಮುರಿದುಹೋಗುಲ್ಲ. ದಿವಾಕರ ನಿಜವಾಗಿಯೂ ನಿಮ್ಮನ್ನು ಪ್ರೀತಿಸುವುದೇ ಆದರೆ, ನಿಮ್ಮ ಪಾಸ್ಟ್ ಖಂಡಿತಾ ಅಡ್ಡ ಬರುಲ್ಲ. ನಾನು ದಿವಾಕರನ ಹತ್ತಿರ ಮಾತಾಡ್ತೀನಿ.''

''ಬೇಡ... ಬೇಡ... ನಾನೇ ಆಡ್ತೀನಿ. ''

''ಹಾಗಾದ್ರೆ ಆದಷ್ಟು ಬೇಗ ನಿಮ್ಮಿಬ್ಬರ ಮದುವೆಯ ಸಿಹಿ ಸುದ್ದಿಯನ್ನು ನನಗೆ ತಿಳಿಸಿಬೇಕು. .. ರೈಟ್....?''

''ನಾನೊಂದು ಮಾತು ಕೇಳಲಾ ? ...''

''ಓಹೋ ಕೇಳಿ... ಧಾರಾಳವಾಗಿ ಕೇಳಿ....''

''ನೀವಿಬ್ಬರೂ ಸ್ನೇಹಿತರಾಗಿ, ಪ್ರೇಮಿಗಳಾಗಿ, ಏಳೆಂಟು ವರ್ಷಗಳು ಹಾಯಾಗಿದ್ದಿರಿ... ಹಾಗಾದರೆ ಈಗ ಆತುರವೇಕೆ ?....''

''ಅದಕ್ಕೆ ಕಾರಣವಿತ್ತು ಪೂರ್ಣಿಮಾ... ಭಾಸ್ಕರನಿಗೆ ಗಟ್ಟಿಯಾದ ಕೆಲಸವಿರಲಿಲ್ಲ, ನನ್ನ ಸಂಪಾದನೆಯಲ್ಲಿ ಸಂಸಾರ ಮಾಡಲು ಅವರಿಗೆ ಇಷ್ಟವಿರಲಿಲ್ಲ.''

''ದಿವಾಕರನಿಗೆ ಕೆಲಸ ಸಿಗಲಿ , ಸಮಯ ನೋಡಿ ನಾನೇ ಮಾತ್ನಾಡುತ್ತೇನೆ. ಅಲ್ಲಿಯವರೆಗೂ ನಾವು ಬರೀ ಸ್ನೇಹಿತರು ಅಷ್ಟೇ...''

''ಓ...ಕೇ... ಹಾಗೇ ಮಾಡಿ. ಗಂಡಸರಿಗೆ ಸ್ವಂತ ಸಂಪಾದನೆ ಇಲ್ಲದಿದ್ದರೆ ಒಂದು ತರಹ ಕೀಳರಿಮೆ ಕಾಡುತ್ತೆ. ಗಂಡಸರಿಗೆ ಸ್ವಾಭಿಮಾನ ಹೆಚ್ಚು... ಅವರದೇ ಮೇಲುಗೈ ಇರಬೇಕು ಅಂತ ಅಪೇಕ್ಷೆ ಪಡುತ್ತಾರೆ. 'ಅಭಿಮಾನ್' ಸಿನಿಮಾನ ನೋಡಿದೀರೋ ಇಲ್ಲವೋ?''

''ನೋಡಿ, ಅತ್ತು ಅತ್ತು ಸಾಕಾಗಿತ್ತು...'' ನಗುವಿನ ಮುಖ ಮಾಡಿದಳು.

''ನಾನು ಆ ಸಿನಿಮಾ ಎಷ್ಟೋ ಸಾರಿ ನೋಡಿದೀನಿ. ಆದರೆ ನಾನು ಅಳಲಿಲ್ಲಪ್ಪಾ.... ಆ ಜನಪ್ರಿಯ ಹಾಡುಗಳನ್ನು ಎಷ್ಟು ಸಾರಿ ಕೇಳಿದರೂ ಮತ್ತೆ ಮತ್ತೆ ಕೇಳಬೇಕೂಂತ ಅನ್ನಿಸುತ್ತೆ... ತೇರೆ ಮೇರೆ ಮಿಲನ್‌ಕಿಯೇ ರೈನಾ... ನಯಾ ಕೋಯಿ ಗುಲ್ ಖಿಲಾಯೇಗಿ....'' ಗಾಯತ್ರಿ ಗೊಗ್ಗರಧ್ವನಿಯಲ್ಲಿ ಹಾಡತೊಡಗಿದಳು... ಪೂರ್ಣಿಮಾಳ ಕಿವಿಯಲ್ಲಿ ಚಂದ್ರ ಬಂಜೆ, ಬಂಜೆ ಎಂದು ಹೀಯಾಳಿಸಿದ ನುಡಿಗಳು ಬಂದು ಬಂದು ಅಪ್ಪಳಿಸಿದವು. ಕಿವಿಗಳನ್ನು ಕೈಗಳಿಂದ ಮುಚ್ಚಿಕೊಂಡಳು... ಗಾಯತ್ರಿ ಹಾಡುವುದನ್ನು ನಿಲ್ಲಿಸಿದಳು.

''ಯಾಕ್ರೀ ಪೂರ್ಣಿಮಾ ನನ್ನ ಧ್ವನಿ ಅಷ್ಟು ಕರ್ಕಶವಾಗಿದೆಯಾ ? ನಂಗೊತ್ತು. ನನ್ನ ಧ್ವನಿ ಚೆನ್ನಾಗಿಲ್ಲ. ನನಗೆ ಚೆನ್ನಾಗಿ ಹಾಡುಕ್ಕೆ ಬರುಲ್ಲ.'' ಗಾಯತ್ರಿ ನಗುತ್ತಾ ಕಿವಿಯ ಮೇಲಿನ ಕೈಗಳನ್ನು ಸರಿಸಿದಳು. ಕೆನ್ನೆಯ ಮೇಲೆ ಹರಿದಿದ್ದ ಹನಿಗಳು ಬೆರಳುಗಳಿಗೆ ತಗುಲಿತು.

''ಅರೇ...ಪೂರ್ಣಿಮಾ.. ಅಳ್ತಿದೀರಾ... ಏನಾಯ್ತು?''

''ಏನೂಇಲ್ಲ.''

''ಅಭಿಮಾನ್ ಸಿನಿಮಾದ ಹಾಡು ಹೇಳಿ ನಿಮ್ಮನ್ನು ಅಳಿಸಿಬಿಟ್ಟೆ... '' ನಗಿಸಲು ಪ್ರಯತ್ನಿಸಿದಳು. ಪೂರ್ಣಿಮಾ ನಕ್ಕಂತೆ ನಟಿಸಿದಳು.

ಗಾಯತ್ರಿ ಭಾಸ್ಕರರ ಮದುವೆಯಾಗಿ ನಾಲ್ಕು ತಿಂಗಳು ಕಳೆದಿತ್ತು. ಗಾಯತ್ರಿ, ಪೂರ್ಣಿಮಾಳ ಕಿವಿಯಲ್ಲಿ ಗುಟ್ಟಾಗಿ ತಾನು ತಾಯಿಯಾಗಲಿರುವ ಸುದ್ದಿಯನ್ನು ತಿಳಿಸಿದಳು. ಪೂರ್ಣಿಮಾಳ ಕಣ್ಣುಗಳು ಸಂತಸದಿಂದ ಅರಳಿದವು...

''ರಿಯಲೀ... ಕಂಗ್ರಾಟ್ಸ್ ಗಾಯತ್ರಿ....''

''ಥ್ಯಾಂಕ್ಸ್ ಪೂರ್ಣಿಮಾ.... ಈ ಖುಷಿಯ ಜೊತೆ ಜೊತೆಗೆ ನನ್ನ ನೆರವೇರದ ಬಯಕೆಗಳು ಮನಸ್ಸನ್ನು ಘಾಸಿಗೊಳಿಸುತ್ತಿದೆ....''

''ಬಯಕೇನಾ ? ಏನು ಬೇಕು ಹೇಳಿ ಗಾಯತ್ರಿ.... ಆಂಟಿ ನಿಮಗೆ ಬೇಕಾದ ತಿಂಡಿಯನ್ನು ಮಾಡಿಕೊಟ್ಟು ಬಯಕೆಯನ್ನು ಪೂರೈಸುತ್ತಾರೆ.''

''ಬಹುಶಃ ನನ್ನ ಈ ಬಯಕೆಯನ್ನು ಯಾರಿಂದಲೂ ಪೂರೈಸಲು ಆಗುತ್ತೋ ಇಲ್ಲವೋ... ನನ್ನ ಅಮ್ಮನನ್ನು ನೋಡಬೇಕು, ಅವಳೊಡನೆ ಮಾತನಾಡಬೇಕು, ಅವಳ ತೊಡೆಯ ಮೇಲೆ ತಲೆ ಇಟ್ಟು ಮಲಗಿ, ಮನಸಾರೆ ಅಳಬೇಕೂಂತ ಏನೇನೋ ಅನ್ನಿಸ್ತಿದೆ. ''

ಪೂರ್ಣಿಮಾ ಗಂಭೀರಳಾದಳು.

''ನನ್ನ ಭಾಸ್ಕರನ ಪ್ರೀತಿ ಎಷ್ಟು ಗಾಢವಾಗಿತ್ತೆಂದರೆ, ಆಗ ನನಗೆ ನನ್ನ ಅಮ್ಮನ ವ್ಯಥೆ ಅರ್ಥವಾಗಲಿಲ್ಲ. ಈಗ ನಾನು ತಾಯಿಯಾಗುತ್ತಿರುವಾಗ ತಾಯಿಯ ಸ್ಥಾನದ ಮಹತ್ವ ಅರಿವಾಗುತ್ತಿದೆ. ''

''ನಿಮ್ಮ ತಾಯಿಗೆ ಈ ವಿಷಯ ತಿಳಿದರೆ, ಖಂಡಿತಾ ನಿಮ್ಮನ್ನು ನೋಡಲು ಬಂದೇ ಬರುತ್ತಾರೆ.''

''ಇಲ್ಲ ಪೂರ್ಣಿಮಾ... ನಮ್ಮ ಅಮ್ಮನಿಗೆ ಆ ಸ್ವಾತಂತ್ರ್ಯವಿಲ್ಲ. ನಮ್ಮ ತಂದೆಯ ಭಾಗಕ್ಕೆ ನಾನು ಬದುಕಿಯೇ ಇಲ್ಲ...''

''ನಿಮ್ಮ ತಾಯಿಗೆ ಒಂದು ಪತ್ರ ಬರೆಯಿರಿ. ಅಥವಾ ಫೋನಿನಲ್ಲಿ ಮಾತನಾಡಿ. ನಿಮಗೆ ಸಮಾಧಾನ ಸಿಗುತ್ತದೆ. ಇಷ್ಟು ವರ್ಷಗಳಲ್ಲಿ ಅವರು ಎಲ್ಲಾ ಮರೆತಿರುತ್ತಾರೆ....''

''ನನಗೆ ಆ ನಂಬಿಕೆ ಇಲ್ಲ. ನನ್ನ ತಂದೆ, ಹಾಗೂ ನನ್ನ ಅಣ್ಣಂದಿರು ಬಡಪಟ್ಟಿಗೂ ಯಾವುದನ್ನೂ ಮರೆಯುವವರಲ್ಲ. ಹಗೆ ಸಾಧಿಸುವವರು. ಅದೇ ನನ್ನನ್ನು ಕೊರೆಯತ್ತಿದೆ.''

''ಕೊರಗಬೇಡಿ ಇದರಿಂದ ನಿಮಗೂ, ಹುಟ್ಟಲಿರುವ ನಿಮ್ಮ ಮಗುವಿನ ಆರೋಗ್ಯಕ್ಕೂ ಒಳ್ಳೆಯದಲ್ಲ ಅಲ್ವಾ ?''

''ಹೌದು... ಪೂರ್ಣಿಮಾ, ನನಗೆ ಗೊತ್ತು. ಆದರೂ....''

ಅಷ್ಟರಲ್ಲಿ ಕಾಲಿಂಗ್ ಬೆಲ್ ಸದ್ದು ಮಾಡಿತು. ಇಬ್ಬರೂ ಮಾತು ನಿಲ್ಲಿಸಿ ಮುಂಬಾಗಿಲಿಗೆ ಬಂದರು. ಹೊರ ಬಾಗಿಲಲ್ಲಿ ದಿವಾಕರ ನಿಂತಿದ್ದ. ಅವನ ಹಿಂದೆಯೇ ತಾಯಿ ಶ್ರೀಮತಿ ತನ್ನ ಕೇಶವಣ್ಣನ ಜೊತೆಯಲ್ಲಿ ನಿಂತಿದ್ದಳು.

''ಇದೇನಮ್ಮಾ..... ನೀನು ? ಇಷ್ಟು ಹೊತ್ನಲ್ಲಿ ? ''

''ಎಷ್ಟೋ ಹೊತ್ನಿಂದ ಈ ರಸ್ತೇಲಿ ಸುತ್ತಾಡಿದಾರೆ. ಮನೆ ಸಿಕ್ಕಿಲ್ಲ. ರಸ್ತೆಯ ಕಾರ್ನರ್‌ನಲ್ಲಿ ಆಟೋ ನಿಲ್ಲಿಸಿ ಯಾರನ್ನೋ ಕೇಳ್ತಿದ್ರು... ಅಷ್ಟು ಹೊತ್ತಿಗೆ ನಾನು ಅಲ್ಲಿಗೆ ಬಂದೆ. ಸೀದಾ ಇವರುಗಳನ್ನು ಕರೆದುಕೊಂಡು ಬಂದೆ. '' ದಿವಾಕರನ ಕೈಯಲ್ಲಿ ಕಿಟ್‌ಬ್ಯಾಗ್ ಇದ್ದುದನ್ನು ಗಮನಿಸಿದಳು. ಏನನ್ನೋ ಸಾಧಿಸಿದವನ ಕಳೆಯನ್ನು ಕಂಡಳು.

''ಬರ್ತೀನಿ ಅಂತ ತಿಳಿಸಿದ್ದ ದಿನ ಬರಲಿಲ್ಲ... ಈಗ ಹೀಗೆ ದಿಢೀರನೆ ಬಂದಿದೀರಿ... ಮುಂಚೇನೇ ತಿಳಿದಿದ್ರೆ ನಾನೇ ಬಸ್‌ಸ್ಟ್ಯಾಂಡಿಗೆ ಬರ್ತಿದ್ದೆ.''

''ಹೋಗಲಿ ಬಿಡಮ್ಮ ಏನಾಯ್ತೀಗ ? ಶ್ರೀಮತಿ ಈ ರಾತ್ರಿ ಇಲ್ಲಿರುತ್ತಾಳೆ. ನಾನು ನಾಳೆ ಬೆಳಿಗ್ಗೆ ಬಂದು ಕರೆದುಕೊಂಡು ಹೋಗ್ತೀನಿ..''

''ಈಗ ಇಷ್ಟು ಹೊತ್ನಲ್ಲಿ ಎಲ್ಲಿಗೆ ಹೋಗ್ತೀರಿ ಮಾವ....? ದಿವಾಕರ್ ಇವರು ನಮ್ಮ ತಾಯಿ, ಇವರು ನಮ್ಮ ಸೋದರ ಮಾವ... '' ಪರಿಚಯ ಮಾಡಿಕೊಟ್ಟಳು.

''ಹಲೋ ಸಾರ್... ಈಗ ಯಾವುದೇ ಹೋಟೆಲನ್ನು ಹುಡುಕಿಕೊಂಡು ಎಲ್ಲಿಗೆ ಅಂತ ಹೋಗ್ತೀರಿ... ಈ ರಾತ್ರಿ ಇಲ್ಲೇ ಇರಬಹುದು. ನಿಮಗೆ ತೊಂದರೆ ಇಲ್ಲದಿದ್ದರೆ....''

''ನಿಮಗೇ ತೊಂದರೆ... ನನಗ್ಯಾಕೆ ತೊಂದರೆ... ಪೇಯಿಂಗ್‌ಗೆಸ್ಟ್ ಇರೋ

ಮನೆ... ಜಾಗ ಸಾಕಾಗುತ್ತೋ ಇಲ್ಲವೋ...''

''ಮೊದಲು ಒಳಗೆ ಬನ್ನಿ ಸಾರ್... ಈಗ ಇಲ್ಲಿ ಯಾರೂ ಪೇಯಿಂಗ್ ಗೆಸ್ಟ್‌ಗಳಿಲ್ಲ...''

''ಅಂದ್ರೆ.... ''

''ಪೂರ್ಣಿಮಾ ಯಾರು ಬಂದಿದಾರಮ್ಮಾ... ?'' ಒಳಗಿನಿಂದ ಆಂಟಿ ಕೂಗಿ ಕೇಳಿದಾಗ ದಿವಾಕರ ಒಳಗೆ ನಡೆದಿದ್ದ. ಕೆಲವೇ ನಿಮಿಷಗಳಲ್ಲಿ ಆಂಟಿ ಹೊರಗೆ ಬಂದಿದ್ದಳು. ಪರಸ್ಪರ ಪರಿಚಯವಾಯಿತು.

''ಈಗಾಗ್ಲೇ ರಾತ್ರಿ ಎಷ್ಟೋ ಹೊತ್ತಾಗಿ ಹೋಗಿದೆ. ಈಗ ಇನ್ನೆಲ್ಲಿಗೆ ಅಂತ ಹೋಗ್ತೀರಿ? ಈ ರಾತ್ರಿ ಇಲ್ಲೇ ಸುಧಾರಿಸಿಕೊಳ್ಳಿ... ಈ ಹುಡುಗಿರೇ ಅಡಿಗೆ ಮಾಡಿದಾರೆ.... ಮೊದಲು ಕೈಕಾಲು ತೊಳೆಯಿರಿ. ಊಟ ಮಾಡೋರಂತೆ'' ಆಕೆಯ ಆದರದ ಮಾತುಗಳಿಗೆ ಇಲ್ಲವೆನ್ನಲಾಗದೇ ಅಲ್ಲಿಯೇ ಉಳಿದುಕೊಂಡರು. ಭಾಸ್ಕರ, ಗಾಯತ್ರಿಯರ ಪರಿಚಯವಾಗಿತ್ತು. ಎಲ್ಲರೂ ಒಂದೇ ಮನೆಯವರಿಗಿಂತ ಹೆಚ್ಚಾಗಿ ಹೊಂದಾಣಿಕೆಯಲ್ಲಿರುವುದನ್ನು ಕಂಡು ಶ್ರೀಮತಿಗೆ ಸಮಾಧಾನವಾಗಿತ್ತು.

ಪೂರ್ಣಿಮಾಳ ರೂಮಿನಲ್ಲಿ ಶ್ರೀಮತಿ ಕಾಲಿಟ್ಟ ಕೂಡಲೇ ಮಾತಿಗೆ ಪ್ರಾರಂಭಿಸಿದಳು.

''ಅಲ್ಲ ಕಣೇ.... ಎಲ್ಲಾ ಮುಗಿಸಿಬಿಟ್ನಲ್ಲ ಆ ಪಾಪಿ... ಕಡೆಗೆ ಎಷ್ಟು ಕೊಟ್ಟ..?''

''ಯಾರಮ್ಮಾ ಯಾರ ವಿಷಯವನ್ನು ಕೇಳ್ತಿದೀಯ ...?''

''ಅವನೇ .. ಆ ಚಂದ್ರ... ಕಡೆಗೂ ನಿನಗೆ ಕೈಕೊಟ್ಟ ಯಾರೋ ರಂಭೆ ಜೊತೆ ತಿರುಗ್ತಿದಾನಂತೆ. ದುಡ್ಡನ್ನು ಏನು ಮಾಡಿದೆ ?''

''ಒಂದೇ ಉಸಿರ್ನಲ್ಲಿ ಎಲ್ಲ ಕೇಳ್ತೀಯಲ್ಲ, ಅಪ್ಪನಿಗೆ ವಿಷಯ ತಿಳೀತಾ ? ಏನಂದ್ರು ?'' ಎನ್ನುತ್ತಾ ರೂಮಿನ ಬಾಗಿಲನ್ನು ಹಾಕಿದಳು.

''ಏನನ್ನಾದರೂ ಸಮಾಧಾನವಾಗಿ ಹೇಳುವ ಕೇಳುವ ತಾಳ್ಮೆ ಅವರಿಗೆ ಎಲ್ಲಿದೆ? ತಾರಸಿ ಕಿತ್ತು ಹೋಗುಂತೆ ಕೂಗಾಡಿದರು. ಜೀವನಾಂಶದ ಹಣ ಕೊಟ್ಟ ಅಂತ ತಿಳಿದ ಮೇಲೆ ಸ್ವಲ್ಪ ಮೆತ್ತಗಾದರು.''

''ಆ ಹಣ ಕೇಶು ಮಾವಂದು. ನನಗೆ ಅದರಲ್ಲಿ ಹಕ್ಕಿಲ್ಲ''

''ನೀನೇನಮ್ಮ ಈಗ ದೊಡ್ಡ ಮನುಷ್ಯೆಯಾಗಿದೀಯ. ಆ ಜೀವನಾಂಶದ ಹಣವೇ ಬೇಡ ಅಂತ ಅಂದೆಯಂತೆ ಕೋರ್ಟಿನಲ್ಲಿ.''

''ಹೌದು ಬೇಡ ಅಂತಂದೆ. ಕೋರ್ಟಿನಲ್ಲಿ ಲಾಯರ್ರು ತಗೊಳ್ಳಲೇಬೇಕೂಂತ ಹೇಳಿ, ಒಂದು ಲಕ್ಷರೂಪಾಯಿಗಳಿಗೆ ಡ್ರಾಫ್ಟ್ ಕೊಡಿಸಿದರು. ಅದನ್ನು ನನ್ನ ಅಕೌಂಟ್‌ಗೆ ಹಾಕಿದೀನಿ.''

''ಅಷ್ಟೇನಾ ? ಎರಡು ಲಕ್ಷನಾದ್ರೂ ಕೇಳಬೇಕಾಗಿತ್ತು. ಮದುವೆಗೆ ನಾವು ಅಷ್ಟು ಖರ್ಚು ಮಾಡಿದ್ದೆವಲ್ಲ....''

''ಅದೆಲ್ಲ ಲೆಖ್ಖ ನನಗೆ ಗೊತ್ತಿಲ್ಲ, ನಿನಗೆಷ್ಟು ಬೇಕು ಹೇಳು. ನಾನು ಕೊಡ್ತೀನಿ. ಇದು

ಮಾತ್ರ ಮಾವನಿಗೆ ಸೇರಬೇಕಾದ ಹಣ.''

''ಅದನ್ನೇನು ಅವನು ಕೇಳಿಲ್ಲ. ನನ್ನ ಮದುವೇಲಿ ನನಗೆ ಒಡವೆ ವಸ್ತ್ರ ಯಾವುದನ್ನೂ ಕೊಟ್ಟಿರಲಿಲ್ಲ. ನಿಮ್ಮಪ್ಪ ಸದಾ ಹಂಗಿಸುರುತ್ತಾರೆ. ಈಗ ಅವರ ಮುಖದ ಮುಂದೆ ಹಿಡಿದು, ಬಾಯಿ ಮುಚ್ಚಿಸಬೇಕು ನಾನು.''

''ಚೆನ್ನಾಗಿದೆ ನಿನ್ನ ಲೆಖ್ಖಾಚಾರ ! ನಿನ್ನ ಮಗಳಿಗೆ ಡೈವೋರ್ಸ್ ಆಗಿದೆ. ಮುಂದೆ ಅವಳ ಗತಿ ಏನೂಂತ ನಿನಗೆ ಏನೂ ಅನ್ನಿಸುವುದಿಲ್ಲವೇನಮ್ಮ ? ''

''ಅನ್ನಿಸ್ದೇ ಏನು ? ಹೊಟ್ಟೆ ಉರಿದು ಹೋಗ್ತಿದೆ. ಆದರೆ ನಿನ್ನ ಹಣೇಲಿ ಬರೆದಿದ್ದನ್ನ ಯಾರಿಂದ ತಪ್ಪಿಸೋಕೆ ಸಾಧ್ಯ ? ಸದ್ಯ ಯಾವ ಜನ್ಮದ ಪುಣ್ಯವೋ... ಕೆಲಸ ಸಿಕ್ಕಿದೆ. ಇನ್ನೇನು ಕೊರತೆ ?''

''ಬರೀ ಹಣ....ಹಣ.... ಇಷ್ಟೇ ಏನಮ್ಮ ಜೀವನದಲ್ಲಿ ?''

''ಹಣ ಇದ್ದರೆ ಎಲ್ಲಾ ಸಲೀಸು ಪೂರ್ಣ... ಕೆಲವೇ ತಿಂಗಳಿನೊಳಗೆ ನಿನ್ನನ್ನು ಮದುವೆಯಾಗೋಕೆ ತಾಮುಂದು, ನಾಮುಂದು ಅಂತ ಗಂಡುಗಳು ಬಂದು ನಿಲ್ಲುತ್ತವೆ ನೋಡ್ತಿರು.''

''ಮದುವೆ ? ನಾನು ಇನ್ನೊಂದು ಮದುವೆಯಾಗಲಿ ಅಂತ ನಿನಗೂ ಆಸೆನೇನಮ್ಮ. ನನ್ನ ಹಣೇಲಿ ಸುಖ ನೆಮ್ಮದಿ ಅಂತ ಬರೆದಿದ್ದರೆ, ಆ ಮದುವೇಲೇ ಸುಖವಾಗಿ ಹಾಯಾಗಿರುತ್ತಿದ್ದೆ.''

''ನಿನ್ನಂತಹ ಹೆಂಡತಿ ಜೊತೆ ಸಂಸಾರ ಮಾಡುವ ಯೋಗ್ಯತೆ ಆ ಅಯೋಗ್ಯನಿಗಿಲ್ಲ. ಈಗ ಬೇರೆ ಯಾವೋಳನ್ನೋ ಮದುವೆಯಾಗ್ತಾನಂತೆ'' ಆಕೇನೇ ಹೇಳಿದಳು.

''ನೀನು ಹೇಳ್ತೀಯಲ್ಲಮ್ಮ ... ಹಾಗೆ ಇದು ಪುರುಷ ಪ್ರಧಾನ ಸಮಾಜ. ಗಂಡಸು ಒಂದಲ್ಲ ನಾಲ್ಕು ಮದುವೆಯಾಗಬಹುದು. ಅವನಿಗೆ ಆ ಅರ್ಹತೆ ಇದೆ. ಹೆಂಗಸಿಗೆ ಆ ಅರ್ಹತೆ, ಯೋಗ್ಯತೆ ಯಾವುದನ್ನೂ ಕೊಟ್ಟಿಲ್ಲ. ಬಿಡು....''

''ಹಾಗಲ್ಲವೇ... ನೀನಿನ್ನು ಚಿಕ್ಕೋಳು. ಆಗ ಪ್ರೀತಿ ಪ್ರೇಮ ಅಂತ ಮೋಸ ಹೋದೆ.... ಈಗ ಜವಾಬ್ದಾರಿ ಬಂದಿದೆ. ಸರಿಯಾದ ಹುಡುಗನನ್ನು ನೋಡಿ ಮದುವೆ ಮಾಡ್ತೀವಿ.''

''ಈ ಡೈವೋರ್ಸಿನ ಯಾರಮ್ಮ ಮದುವೆಯಾಗ್ತಾರೆ ? ನೀನು ಹೇಳುವಷ್ಟು ಸುಲಭವಲ್ಲ. ''

''ಪೇಪರ್ನಲ್ಲಿ ಹಾಕಿಸೋಣ..''

''ಬೇಡಮ್ಮಾ... ಈಗಲೇ ಬೇಡ... ನನಗೆ ಸ್ವಲ್ಪ ಸಮಯ ಬೇಕು. ಈಗ ಮಾತು ಸಾಕು. ನನಗೆ ನಿದ್ದೆ ಬರ್ತಿದೆ.''

''ನಿನ್ನ ತಂಗಿಗೂ ಈ ವರ್ಷ ಡಿಗ್ರಿ ಸಿಗುತ್ತೆ. ಅವಳಿಗೆ ಮದುವೆ ಮಾಡ ಬೇಡವೇ? ಮೊದಲು ನಿನ್ನ ಮದುವೆಯಾಗಲಿ ಅಂತ ನನ್ನ ಆಸೆ.... ''

''ಒಂದಕ್ಕೊಂದುಲಿಂಕ್ ಮಾಡೋದೇನೂ ಬೇಡ. ಯಾವ ಕಾರಣದಿಂದಲೂ

ಅವಳ ಮದುವೆಗೆ ನಾನು ಅಡ್ಡಿಯಾಗುವುದಿಲ್ಲ, ನೀವುಗಳು ಅವಳ ಮದುವೆಯನ್ನು ನಿಶ್ಚಯ ಮಾಡಿ. ಬೇಡವಾದರೆ ನಾನು ಮದುವೆಗೆ ಬರುವುದಿಲ್ಲ.''

''ಹೀಗೆಲ್ಲಾ ಮಾತ್ನಾಡಿ ಯಾಕೆ ಹೊಟ್ಟೆ ಉರಿಸ್ತೀಯೆ ?''

''ಸುಮ್ಮನೇ ಹೀಗೆ ಹೇಳಿದೆ ಅಷ್ಟೇ. ಡೈವೋರ್ಸಿ ಎಂಬ ಬಿರುದು ಈಗ ನನ್ನ ಹಣೆಗೆ ಅಂಟಿದೆಯಲ್ಲ.''

''ಅಂತೂ ಒಂದು ಕತೆಯಾಗಿ ಹೋಯ್ತು ನಿನ್ನ ಜೀವನ.... '' ಪೂರ್ಣಿಮಾ ಉತ್ತರಿಸಲಿಲ್ಲ. ಬೆಳಿಗ್ಗೆ ನಿತ್ಯದಂತೆ ಪೂರ್ಣಿಮಾ ಸಿದ್ಧಳಾಗಿ ಬ್ಯಾಂಕಿಗೆ ಹೊರಟಳು. ಗಾಯತ್ರಿ ಆಫೀಸಿಗೆ ಹೋಗದೇ ಮನೆಯಲ್ಲಿ ಉಳಿದುಕೊಂಡಳು. ಸ್ನಾನ, ತಿಂಡಿಯಾದ ನಂತರ ಕೇಶವ ತನ್ನ ಸ್ನೇಹಿತನನ್ನು ಕಾಣಲು ಹೊರಟು ಹೋದ. ಭಾಸ್ಕರನನ್ನು ಕಳಿಸಿ, ಗಾಯತ್ರಿ ಶ್ರೀಮತಿಯೊಡನೆ ಮಾತಿಗೆ ಕುಳಿತಳು. ತನ್ನ ಪ್ರೇಮಕತೆಯನ್ನು ಹೇಳಿ ಕೊಂಡು, ತಾನು ತಾಯಿಯಾಗಲಿರುವ ಸುದ್ಧಿಯನ್ನು ತಿಳಿಸಿದಳು. ನಂತರ ಮುಖ್ಯವಾದ ವಿಚಾರಕ್ಕೆ ಬಂದಳು.

''ದಿವಾಕರ ತುಂಬಾ ಒಳ್ಳೆಯ ಹುಡುಗ. ಬಹಳ ಮೆದುಗ. ಅವನು ಪೂರ್ಣಿಮಾಳನ್ನು ಪ್ರೀತಿಸುತ್ತಿದಾನೆ. ನಿಮ್ಮ ಮಗಳೇ ಅವಳ ಪ್ರೀತಿಯನ್ನು ಅದುಮಿ ಇಟ್ಟುಕೊಂಡಿದಾಳೆ. ನೀವಾದರೂ ನಿಮ್ಮ ಮಗಳಿಗೆ ತಿಳುವಳಿಕೆ ಹೇಳಿ.''

''ನನ್ನ ಮಾತನ್ನು ತಳ್ಳಿ ಹಾಕಿಬಿಟ್ಟಳು. ಇಂತಹ ವಿಷಯಗಳಲ್ಲಿ ಸ್ನೇಹಿತೆಯರೇ ಸರಿ. ಅದ್ಸರಿ... ಆ ಹುಡುಗನಿಗೆ ಇನ್ನು ಮದುವೆಯಾಗಿಲ್ಲ. ಇನ್ನೂ ಮೊದಲನೇ ಮದುವೆ. ಡೈವೋರ್ಸ್ ಆದವಳನ್ನು ಒಪ್ಪಿಕೊಳ್ತಾನಾ ?''

''ಖಂಡಿತಾ ಒಪ್ಕೋತಾನೆ. ಅವನನ್ನು ಒಪ್ಪಿಸುವ ಜವಾಬ್ದಾರಿ ನನಗಿರಲಿ. ಅವನನ್ನು ನೋಡಿದ್ರಲ್ಲ, ನಿಮಗೆ ಏನನ್ನಿಸಿತು .''

''ಹುಡುಗ ಲಕ್ಷಣವಾಗಿದಾನೆ. ವಿದ್ಯಾವಂತನಂತೆ ಕಾಣ್ತಾನೆ... ಕೆಲಸ ಎಂಥದು? ಸಂಬಳ ಎಷ್ಟು ಬರುತ್ತೆ?''

''ಇನ್ನೂ ಕೆಲಸ ಸಿಕ್ಕಿಲ್ಲ''

''ಹಾಗಾದ್ರೆ ಇವಳ ಸಂಪಾದನೆಯ ಮೇಲೆ ಅವಲಂಬನೆಯಾಗಿರ್ತಾನೆ''

''ಹಾಗೇನಿಲ್ಲ, ಅವರಿಗೆ ಬೇರೆ ಆದಾಯವೂ ಇದೆ.''

''ಆದರೂ ವರದಕ್ಷಿಣೆ ಅದೂ ಇದು ಅಂತ ಕೇಳಿದರೆ ಎಲ್ಲಿಂದ ತರೋದು ? ನಮಗೆ ಇನ್ನು ಒಬ್ಬಳು ಮಗಳಿದಾಳೆ. ಇವಳ ಮದುವೆಯಲ್ಲಿ ಮಾಡಿದ ಸಾಲವೇ ಇನ್ನೂ ತೀರಿಲ್ಲ.''

''ದಿವಾಕರನಾಗಲಿ, ಆಂಟಿಯಾಗಲೀ , ಯಾವುದಕ್ಕೂ ಆಸೆ ಪಡೋರಲ್ಲ.

ನೋಡೋಣ. ನಾನಂತೂ ಯಾವ ವಿಷಯಕ್ಕೂ ಬಲವಂತ ಮಾಡುಲ್ಲ, ಒಂದು ಅವಿವೇಕ ನಡೆದು ಹೋಯಿತು ಭಯವಾಗುಲ್ಲವೇನಮ್ಮ...''

''ಅದು ನಿಜ''ಆಕೆಯ ಮಾತನ್ನು ಒಪ್ಪಿಕೊಂಡರೂ, ಆಕೆಯನ್ನು ಒಪ್ಪಿಸಬೇಕು ಎಂದುಕೊಂಡಳು.

''ಈ ರಾತ್ರಿ ನಾವು ವಾಪಸ್ಸು ಹೊರಡ್ತಾ ಇದೀವಿ. ಮತ್ತೆಯಾವಾಗ ಬರ್ತೀವೋ ಏನೋ ... ನೀನೂ ಅಷ್ಟು ಹೊತ್ತಿಗೆ ಬಾಣಂತನಕ್ಕೆ ಹೊರಟು ಹೋಗ್ತಿರುತ್ತೀಯೋ ಏನೋ ...?''

''ಬಾಣಂತನಕ್ಕೆ ? ... ತವರಿನವರು ಕರೆಸಿಕೊಂಡರೆ ತಾನೇ ಆ ಮಾತು ?''

''ಯಾಕೆ ? ತಾಯಿ ಬದುಕಿದಾರೆ ತಾನೇ ...?''

''ತವರು ಮನೇಲಿ ಎಲ್ಲಾ ಇದಾರೆ... ಆದರೆ ನನಗೆ ಮಾತ್ರ ಪ್ರವೇಶವಿಲ್ಲ. ಅವರಾಗಿಯೇ ಖಂಡಿತಾ ಕರೆಯುವುದಿಲ್ಲ. ನಾನೂ ಹೋಗುವುದಿಲ್ಲ ಅಷ್ಟೇ... '' ಗಾಯತ್ರಿಯ ಧ್ವನಿ ಗದ್ಗದವಾಯಿತು. ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು.

''ಬಸಿರಿ ಹೆಂಗಸು ಕಣ್ಣೀರು ಹಾಕಬಾರದು. ಇಲ್ಲಿ ನಿನಗೆ ಯಾವ ಕೊರತೆಯೂ ಇಲ್ಲ. ಪಾಲಿಗೆ ಬಂದದು ಪಂಚಾಮೃತ ಅಂತ ಅಂದುಕೊಂಡು ಕುಡಿಯಬೇಕಮ್ಮ...''

''ಆಂಟಿ, ನನ್ನದೊಂದು ರಿಕ್ವೆಸ್ಟ್... ಇನ್ನೊಂದೆರಡು ದಿನ ನನ್ನೊಂದಿಗೆ ಇರ್ತೀರಾ .... ನನಗೂ ಖುಷಿಯಾಗುತ್ತೆ.''

''ಇರಬಹುದಾಗಿತ್ತು. ಆದರೆ, ಈ ಮನೆಯವರಿಗೆ ತೊಂದರೆ ಆದರೆ...''

''ತೊಂದರೆ ಏನಿಲ್ಲ. ಈಗ ನಾವುಗಳೆಲ್ಲ ಒಂದೇ ಸಂಸಾರದವರ ತರಹ ಇದ್ದೀವಿ. ಯಾರೂ ಏನೂ ಆಕ್ಷೇಪಣೆ ಮಾಡುವುದಿಲ್ಲ.''

''ಸರಿಯಮ್ಮ... ನಾನು ನನ್ನ ಅಣ್ಣನಿಗೆ ಹೇಳಬೇಕು. ಅವನ ಜೊತೆಯಲ್ಲಿ ಬಂದದ್ದು. ಅವನು ಏನಂತಾನೋ....'' ಹಾಗೆ ಬಾಯಿ ಮಾತಿಗೆ ಹೇಳಿದರೂ ಅವಳಿಗೆ ಇನ್ನೊಂದೆರಡು ದಿನ ಮಗಳ ಜೊತೆಯಲ್ಲಿ ಇರಬೇಕೆಂದೆನಿಸಿದ್ದರಿಂದ ಒಪ್ಪಿಕೊಂಡಳು. ಕೇಶವನನ್ನು ಒಪ್ಪಿಸುವುದು ಕಷ್ಟವೇನಲ್ಲ.

''ನಾಳೆ ಶುಕ್ರವಾರ... ಬೆಳಿಗ್ಗೆ ನಿಮ್ಮಿಬ್ಬರನ್ನು ಬೇಗ ಎಬ್ಬಿಸಿ ಎಣ್ಣೆ ಒತ್ತಿ ನೀರು ಹಾಕಿ ಎರೆಯುತ್ತೀನಿ... ಗಾಯತ್ರಿ ಖುಷಿಗೊಂಡಳು. ಪೂರ್ಣಿಮಾ ಒಪ್ಪಲಿಲ್ಲ. ನಾನು ಭಾನುವಾರ ಎಣ್ಣೆ ನೀರು ಹಾಕಿಕೊಳ್ತೀನಿ. ನಾಳೆ ಗಾಯತ್ರಿಗೆ ಆರೈಕೆ ಮಾಡು. ಅವರಿಗೆ ಅದರ ಅವಶ್ಯಕತೆ ಇದೆ.''

''ನೋಡಿದ್ಯಾ ಗಾಯತ್ರಿ, ಎಷ್ಟು ವರ್ಷವಾಯಿತು ಇವಳಿಗೆ ಎಣ್ಣೆ ನೀರು ಹಾಕಿ? ಓದೋಕೆ ಅಂತ ನಮ್ಮ ಅಣ್ಣನ ಮನೆ ಸೇರಿದಳು... ಅವತ್ತಿಂದ ಅವಳ ತಲೆಗೆ ಎಣ್ಣೆ ಒತ್ತಿಲ್ಲ. ಸೀಗೆಕಾಯಿ ಪುಡಿ ಉಜ್ಜಿಲ್ಲ... ಹೇಗಿತ್ತು ಅಂತೀಯ ಇವಳ ತಲೆಗೂದಲು ಸೊಂಪಾಗಿ ? ಈಗ ನೋಡು ಒಳ್ಳೆ ಕದ್ರತೇ ಜುಂಗು ಇದ್ದ ಹಾಗಿದೆ...''

''ಬಿಡಮ್ಮಾ... ಈಗ ಯಾರು ನನ್ನ ಅಂದ ಚೆಂದ ನೋಡಬೇಕು ?''

''ನೋಡಿ ಆಂಟಿ ಹೇಗೆ ಹೇಳ್ತಾಳೆ ನಿಮ್ಮ ಮಗಳು ! ... ಪಾಪ ಆಗಲೇ ಮುದುಕಿಯಾಗಿ ಬಿಟ್ಟಿದಾಳೆ...ಇವಳಿಗಿಂತ ನಾನೇ ವಾಸಿ... ಅದಕ್ಕೇ ನಾನು ಹೇಳೋದು. ಆದಷ್ಟು ಬೇಗ ಇವಳಿಗೆ ಮದುವೆ ಮಾಡಿ... ಇಲ್ಲದಿದ್ದರೆ ಸನ್ಯಾಸಿನಿಯಾಗಿ ಯಾವುದಾದೂರ ಮಠಕ್ಕೆ ಹೋಗಿ ಸೇರಿ ಬಿಡ್ತಾಳೆ ಅಂತ...''

''ಸನ್ಯಾಸಿನಿಯೂ ಆಗುಲ್ಲ, ಯಾವ ಮಠಕ್ಕೂ ಸೇರಿಕೊಳ್ಳಲ್ಲ. ಆದರೆ ನನ್ನನ್ನು ಮದುವೆಯಾಗು ಅಂತ ಮಾತ್ರ ಬಲವಂತ ಮಾಡಬೇಡಿ. ''ರೊಯ್ಯನೆ ಹೋಗಿ ಅವಳು ಬಾಲ್ಕನಿಯಲ್ಲಿ ನಿಂತಳು. ಹಿಂದಿನಿಂದ ಗಾಯತ್ರಿಬಂದು ಅವಳ ಭುಜದ ಮೇಲೆ ಕೈ ಹಾಕಿದಳು.

''ಸಾರಿ ಪೂರ್ಣಿಮಾ.... ನಿಮ್ಮನ್ನು ಹರ್ಟ್ ಮಾಡಿಬಿಟ್ಟೆ...''

''ಪರವಾಗಿಲ್ಲ ಬಿಡಿ... ಯಾಕೋ ಎರಡು ದಿನದಿಂದ ನನ್ನ ಮನಸ್ಸು ಸರಿಯಾಗಿಲ್ಲ...''

''ಯಾಕೇಂತ ಕೇಳಬಹುದಾ ? ಹೇಳಿದರೆ ನಿನ್ನ ಮನಸ್ಸು ಹಗುರವಾಗುತ್ತೆ''

ನಿಮಗಲ್ಲದೆ ಇನ್ಯಾರಿಗೆ ಹೇಳಲಿ ? ನನ್ನ ಎಕ್ಸ್ ಹಸ್ಬೆಂಡ್ ಮರು ಮದುವೆಯಾಗ್ತಾ ಇದಾನೆ. ನನಗೆ ಇನ್ವಿಟೇಷನ್ ಕಳಿಸಿದ್ದಾನೆ. ಈ ಮುಂಚೇನೇ ಬೇರೆಯವಳ ಜೊತೆಯಲ್ಲಿ ಅಫೇರ್ ಇದ್ದರೆ, ನನ್ನನ್ಯಾಕೆ ಮದುವೆಯಾದ ? ನನ್ನ ಲೈಫ್‌ನ ಯಾಕೆ ಹಾಳುಮಾಡಿದ?

''ಅದೆಲ್ಲಾ ಒಂದು ಕೆಟ್ಟ ಕನಸು ಅಂತ ಮರೆತುಬಿಡಿ ಪೂರ್ಣಿಮಾ. ಯಾವತ್ತಂತೆ ಅವನ ಮದುವೆ ?''

''ಮುಂದಿನ ಸೋಮವಾರ...''

''ಅವನು ಮದುವೆಯಾಗ್ತಿದಾನೆ ಅಂತ ನಿಮಗೆ ದುಃಖವಾಗ್ತಿದೆಯಾ?''

''ಅವನೇ ನನ್ನವನಾಗಿಲ್ಲದಿರುವಾಗ ದುಃಖ ಯಾಕೆ ? ಗಂಡಸರು ಎಲ್ಲವನ್ನೂ ಎಷ್ಟು ಬೇಗ ಮರೆತು ಬಿಡ್ತಾರೆ. ಹೆಂಗಸರಿಗ್ಯಾಕೆ ಆ ಶಕ್ತಿ ಇಲ್ಲ ಅಂತ....''

''ಹಾಗೇನಿಲ್ಲ. ಎಲ್ಲಾ ಹೆಂಗಸರೂ ಹಾಗಿರುವುದಿಲ್ಲ. ಈ ಕಾಲದಲ್ಲಿ ಹೆಂಗಸರೂ ಗಂಡಸರೂ ಎಲ್ಲಾ ಒಂದೇ. ಹುಟ್ಟುಸಾವು, ವಿದ್ಯೆ , ಉದ್ಯೋಗ ಎಲ್ಲಾದರಲ್ಲೂ ಸಮಾತನೆ ಸಮಾನತೆ ಅಂತ ಸಮಾಜ ಹೇಳುತ್ತಿರುವಾಗ, ಹೆಣ್ಣು ಸಹ ಹಳೆಯದನ್ನು ಮರೆತು, ಹೊಸತನ್ನು ಒಪ್ಪಿಕೊಳ್ಳಬೇಕು. ನೀವು ಸೋಲನ್ನೊಪ್ಪಿಕೊಳ್ಳಬಾರದು ! ಹಿಂದುಳಿಯಬಾರದು. ನಿನಗಿಂತ ನಾನೇನು ಕಮ್ಮಿ ಅನ್ನುವಂತೆ, ಅವನಿಗಿಂತ ಮುಂಚೇನೆ ಮದುವೆಯಾಗಿ ಬಿಡಬೇಕು. ನಿಮ್ಮ ಗಂಡನೊಂದಿಗೆ ನೀವು ಧೈರ್ಯವಾಗಿ ಅವನ ಮದುವೆಯ ರಿಸೆಪ್ಷನ್‌ಗೆ ಹೋಗಬೇಕು.''

''ಇದೆಲ್ಲಾ ತಮಾಷೆಯ ಮಾತು..''

''ತಮಾಷೆಯ ಮಾತಲ್ಲ. ಸಾಧ್ಯ ಅಂತ ತೋರಿಸಬೇಕು. ಹೇಗೂ ನಿಮ್ಮ ತಾಯಿ, ಸೋದರ ಮಾವ ಇಬ್ಬರೂ ಇದಾರೆ. ವರ ಕಣ್ಣೆದುರಿಗೇ ಇದಾನೆ... ನೀವು ಹೂಂ ಅನ್ನಿ. ನಾನು ಜಯಮಾಲೆ ಹಾಕಿಸಿಬಿಡ್ತೀನಿ.''

''ಏನೋ ಅಸಂಬದ್ಧವಾಗಿ ಮಾತನಾಡ್ತೀರಿ ನೀವು... ನನ್ನ ಮದುವೆಯ ಮಾತು ಬೇಡವೇ ಬೇಡ ಅಂತ ನಾನು ಅಮ್ಮನೀಗೆ ಹೇಳಿಬಿಟ್ಟಿದೀನಿ. ಅಮ್ಮ ನಿಮ್ಮ ಕೈಲಿ ಏನಾದ್ರೂ ಹೇಳಿದಳಾ ?''

''ನಿಮ್ಮ ತಾಯಿಗೆ ನಿಮ್ಮ ಚಿಂತೆ ಇಲ್ಲದೇ ಇರುತ್ತಾ?''

''ಅವಳಿಗೆ ನನ್ನ ಚಿಂತೆಗಿಂತ ನನ್ನ ತಂಗಿಯ ಚಿಂತೆ... ನನ್ನ ಡೈವೋರ್ಸ್ ವಿಷಯ

ಎಲ್ಲರಿಗೂ ತಿಳಿದರೆ ಅವಳ ಮದುವೆಗೆ ಎಲ್ಲಿ ಅಡ್ಡಿ ಬರುತ್ತೋ ಅಂತ ಭಯ...''

''ನಿಮಗೂ, ನಿಮ್ಮ ತಂಗಿಗೆ ತೊಂದರೆ ಆಗಬಾರದು ಅನ್ನೋ ಆಸೆ ಇದೆ ತಾನೇ....?''

''ಹೂಂ... ಸದ್ಯ ಅವಳಾದರೂ ಹ್ಯಾಪಿಯಾಗಿರಲಿ...''

''ಅವಳೂ ಹ್ಯಾಪಿಯಾಗಿರ್ತಾಳೆ. ನೀವು ಹ್ಯಾಪಿಯಾಗಿದ್ದರೆ... ''

''ಮತ್ತೆ ಮತ್ತೆ ಅದೇ ವಿಷಯಕ್ಕೆ ಬರ್ತೀದೀರಲ್ಲ ನೀವು...''

''ಶುಭಸ್ಯ ಶೀಘ್ರಂ'' ಅಂತ. ಶುಭಕಾರ್ಯಕ್ಕೆ ತಡ ಮಾಡಬಾರದು. ಇದು ಸುಸಮಯ. ನೀವು ಹೂಂ ಅನ್ನಿ... ನಾಳೆ ನಾಡಿದ್ದರಲ್ಲಿ ನಿಮ್ಮಿಬ್ಬರ ಮದುವೆ ನೆರವೇರಿಸಿ ಬಿಡ್ತೀವಿ..

''ದಿವಾಕರ ಇದಕ್ಕೆ ಒಪ್ತಾರಾ ? ನಾನು ಮೊದಲು ಅವರ ಹತ್ತಿರ ಮಾತ್ನಾಡಬೇಕು...''

''ಅಂತೂ ದಿವಾಕರನ ಹೆಸರನ್ನು ನಿಮ್ಮ ಬಾಯಲ್ಲಿ ಹೊರಡಿಸಿದೆ. ಒಪ್ಪದೇ ಏನು ಮಾಡ್ತಾರೆ ? ನೀವು ಯಾವುದರಲ್ಲಿ ಕಡಿಮೆ ಅವರಿಗಿಂತ...?''

''ಅವರಿಗೆ ಇದು ಮೊದಲನೇ ಮದುವೆ... ನಾನು ಡೈವೋರ್ಸಿ...''

''ನಿಮ್ಮಿಬ್ಬರ ಪ್ರೀತಿಗೆ ಈ ಡೈವೋರ್ಸ್ ಖಂಡಿತಾ ಅಡ್ಡ ಬರುಲ್ಲ, ನಾನೇ ದಿವಾಕರನ ಹತ್ತಿರ ಮಾತ್ನಾಡ್ತೀನಿ....''

''ಬೇಡ, ನಾನೇ ಆಡ್ತೀನಿ... ಆಂಟಿ ಏನಂತಾರೋ..?''

''ಬೇಡ, ಬೇಕು, ನಾನು, ನೀನು, ಅನ್ನೋದರಲ್ಲಿ ಸಮಯ ಕಳೆದು ಹೋಗುತ್ತದೆ. ಮುಹೂರ್ತ ಮೀರಿ ಹೋಗುತ್ತದೆ. ಆಂಟಿಗೆ ಈಗಲೇ ತಿಳಿಸುವುದು ಬೇಡ. ನಾನೇ ದಿವಾಕರನ ಹತ್ತಿರ ಮಾತನಾಡ್ತೀನಿ'' ಎನ್ನುತ್ತಾ ಅವನಿಗಾಗಿ ಕಾದಳು.

ದೂರದಿಂದಲೇ ಅವನು ಬರುತ್ತಿರುವುದನ್ನು ಕಂಡು, ಮುಂಬಾಗಿಲಿನಲ್ಲೇ ಅವನನ್ನು ತಡೆದು, ಅವನನ್ನು ಸಮೀಪದ ಪಾರ್ಕಿಗೆ ಕರೆದೊಯ್ದಳು. ಪೂರ್ಣಿಮಾಳ ಎದೆ ಭೀತಿಯಿಂದ ಹೊಡೆದುಕೊಳ್ಳಲಾರಂಬಿಸಿತು. ಆದರೆ ಕೆಲವೇ ನಿಮಿಷಗಳಲ್ಲಿ ಅವರಿಬ್ಬರೂ ನಸುನಗುತ್ತಾ ಮನೆಗೆ ವಾಪಸ್ಸಾದಾಗ ಹಾಯೆನಿಸಿತ್ತು. ಇನ್ನು ಹಿರಿಯರನ್ನು ಒಪ್ಪಿಸುವುದು ಬಾಕಿ ಇತ್ತು. ಗಾಯತ್ರಿಯೇ ಮುಂದಾಳತ್ವವನ್ನು ವಹಿಸಿದಳು. ಮೊದಲಿಗೆ ಆಂಟಿಯೊಡನೆ ಮಾತನಾಡಿದಳು.

''ಪೂರ್ಣಿಮಾಳ ಮದುವೆಯ ಮಾತುಕತೆಗಳು ನಡೆಯುತ್ತಿವೆ. ಈಗ ನೀವು ಮನಸ್ಸು ಮಾಡಿದರೆ, ಪೂರ್ಣಿಮಾ ನಿಮ್ಮ ಸೊಸೆಯಾಗಿ ಈ ಮನೆಯಲ್ಲೇ ಇರ್ತಾಳೆ'' ಎಂದು ಹೇಳಿ ಮೊದಲ ಬಾಣವನ್ನು ಬಿಟ್ಟಳು.

''ದಿವಾಕರ ಒಪ್ಪಬೇಕಲ್ಲಮ್ಮಾ... ಅವನ ಮನಸ್ನಲ್ಲಿ ಏನಿದೆಯೋ ? ಅಲ್ಲದೇ ಅವನಿಗೆ ಕೆಲಸ ಸಹ ಇಲ್ಲ... ಈ ಹುಡುಗಿ ಬ್ಯಾಂಕಿನಲ್ಲಿ ಕೆಲಸದಲ್ಲಿರುವವಳು. ತಿಂಗಳಿಗೆ ಸಾವಿರಾರು ರೂಪಾಯಿ ಸಂಪಾದಿಸುತ್ತಾಳೆ.''

''ಇದು ಹೊರ ನೋಟದ ಮಾತು. ನೀವು ಅವರಿಬ್ಬರನ್ನು ಅರ್ಥಮಾಡಿ ಕೊಂಡಿಲ್ಲ,

ಅವರಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದಾರೆ.''

''ನಿಮಗೆ ಹೇಗೆ ಗೊತ್ತು? ದಿವಾಕರ ಅಂಥವನಲ್ಲ..... ಪೂರ್ಣಿಮಾ ಸಹ ಒಳ್ಳೆಯ ಹುಡುಗಿ. ಹಾಗೆಲ್ಲಾ ಏನೇನೋ ಸುಳ್ಳು ಅಪವಾದ ಹೊರಿಸಬಾರದು.''

''ಇದು ಸುಳ್ಳೂ ಅಲ್ಲ, ಅಪವಾದವೂ ಅಲ್ಲ, ಅವರಿಬ್ಬರು ಯಾವ ಅಪರಾಧವನ್ನು ಮಾಡುತ್ತಿಲ್ಲ, ನಾನು ಭಾಸ್ಕರನಿಗಾಗಿ ನಮ್ಮವರನ್ನು ಬಿಟ್ಟು ಬಂದೆ. ಹಾಗೆ ಪ್ರೀತಿಗೆ ಅಷ್ಟು ಶಕ್ತಿ ಇದೆ.''

''ಅಂದ್ರೆ ? ಹೆದರಿಸ್ತಿದೀಯೇನಮ್ಮಾ.. ದಿವಾಕರ ನಮ್ಮನ್ನು ಬಿಟ್ಟು ಹೋಗ್ತಾನೆ ಅಂತ....'' ಅಗಲವಾದ ಕಣ್ಣುಗಳಿಂದ ನೋಡಿದಳು.

''ಛೇ... ಏನೇನೋ ಅರ್ಥ ಮಾಡಿಕೊಳ್ತೀರಿ... ದಿವಾಕರ ಪೂರ್ಣಿಮಾಳ ಮದುವೆಗೆ ಒಪ್ಪಿಗೆ ಕೊಡಿ. ಎಲ್ಲಾ ಸರಿಹೋಗುತ್ತೆ.ಅಷ್ಟೇ ನಾನು ಹೇಳ್ತಿರೋದು.''

''ದಿವಾಕರನ ಒಪ್ಪಿಗೆ ಇದ್ದರೆ ಆಗಲಿ... ಆದರೆ ಆ ಹುಡುಗಿಯ ತಂದೆ ತಾಯಿ ಒಪ್ಪಬೇಡವೆ? ಅವರಿಗೆ ನಾವು ಸರಿ ಸಮಾನರೇ ?''

''ಇಲ್ಲಿ ಪ್ರೀತಿ ಒಂದೇ ಸಮಾನತೆ. ಪ್ರೀತಿಗೆ ಜಾತಿಮತ, ಆಸ್ತಿ ಅಂತಸ್ತು ಯಾವ ಭೇದವೂ ಇಲ್ಲ, ನೀವು ಹೂಂ ಅಂದ್ರಲ್ಲ ಅಷ್ಟು ಸಾಕು. ನೋಡ್ತಿರಿ ಇನ್ನೆರಡು ದಿನಗಳಲ್ಲಿ ಅವರಿಬ್ಬರ ಮದುವೆ, ಪೂರ್ಣಿಮಾ ನಿಮ್ಮ ಸೊಸೆ....''

''ಯಾಕಮ್ಮಾ ಇಷ್ಟು ಆತುರ ? ಸಲುಗೆಯಿಂದ ಏನಾದರೂ ಎಡವಟ್ಟು ಮಾಡಿ ಕೊಂಡಿದಾರಾ ಹೇಗೆ ?'' ಸಂಶಯ ಕೋಪಗಳಿಂದ ಕಣ್ಣುಗುಡ್ಡೆ ಹೊರಬಂದಿತು.

''ಛೆ ಛೆ ಹಾಗೆಲ್ಲಾ ಏನೂ ಇಲ್ಲ, ನಿಮ್ಮ ಮಗನ ಮೇಲೆ ನಿಮಗೆ ನಂಬಿಕೆ ಇದೆ ತಾನೇ? ಅವರು ಶ್ರೀರಾಮಚಂದ್ರ. ಎಷ್ಟೋ ತಿಂಗಳಿನಿಂದ ಈ ಮನೆಯಲ್ಲಿ ಪೇಯಿಂಗ್ ಗೆಸ್ಟ್‌ಗಳಾಗಿ ಹುಡುಗಿಯರಿದಾರೆ.... ನಿಮಗೆ ಎಂದೂ ಯಾವ ಅನುಮಾನ ಬಂದಿರಲಿಲ್ಲ ಅಲ್ವಾ ? ''

''ನನ್ನ ಮಗ ಅಂಥೋನಲ್ಲ, ಸ್ವಲ್ಪ ಪೆದ್ದನೋ ದಡ್ಡನೋ ನನಗೆ ತಿಳಿಯದು. ಮನೆಯಾಯಿತು. ಅವನಾಯಿತು. ಸ್ನೇಹಿತರ ಗುಂಪು ಕಟ್ಟಿಕೊಂಡು ತಿರುಗಿದವನೇ ಅಲ್ಲ.''

''ಅದೆಲ್ಲಾ ಒಳ್ಳೇಯದಕ್ಕೆ ಬಿಡಿ. ನಿಮ್ಮ ಮಗನಿಗೆ ಪೂರ್ಣಿಮಾಳಂತಹ ಹೆಂಡತಿ ಸಿಕ್ಕರೆ, ಅದಕ್ಕಿಂತ ಇನ್ನೇನು ಬೇಕು?''

''ಮನೆಯಿಂದ ಹೊರಕ್ಕೆ ಸಂಪಾದಿಸಲು ಹೋಗುವ ಹೆಂಗಸು, ಮನೆಯಲ್ಲೇ ಅವಳಿಗಾಗಿ ಕಾದು ಕುಳಿತ ಗಂಡಸು, ಇದು ಅನ್ಯೋನ್ಯ ದಾಂಪತ್ಯವಾಗಲಾರದು ಗಾಯತ್ರಿ....''

''ಇಂದಲ್ಲ ನಾಳೆ ನಿಮ್ಮ ದಿವಾಕರನಿಗೆ ಒಳ್ಳೆಯ ಕೆಲಸ ಸಿಗಬಹುದು. ಆಗ ದುಡಿಯಲು ಗಂಡ ಹೊರಗೆ ಹೋದರೆ, ಹೆಂಡತಿ ಗಂಡನ ದಾರಿಯನ್ನು ಕಾಯುತ್ತಾ ಮನೆಯಲ್ಲಿಯೇ ಕುಳಿತಿರುತ್ತಾಳೆ...''

''ಅದೆಲ್ಲಾ ಸುಳ್ಳು... ಕೈ ತುಂಬಾ ಸಂಪಾದನೆಯನ್ನು ಬಿಟ್ಟು ಯಾವ ಹೆಂಗಸು ಮನೆಯಲ್ಲಿ ಗುಲಾಮಳಂತೆ ಕೂತಿರುತ್ತಾಳೆ ? ''

''ಇಬ್ಬರೂ ಒಟ್ಟಿಗೇ ಕೆಲಸಕ್ಕೆ ಹೋಗ್ತಾರೆ. ಒಟ್ಟಿಗೇ ಬರ್ತಾರೆ ಬಿಡಿ. ಅದೂ ಒಂದು ತರಹ ಚೆನ್ನವೇ....''

''ಒಟ್ನಲ್ಲಿ ನಿನ್ನ ಮಾತಿನ ಪ್ರಕಾರ ಎಲ್ಲಾ ಚೆನ್ನವೇ... ಆ ದೇವರ ಮನಸ್ನಲ್ಲಿ ಏನಿದೆಯೋ ? ಎಲ್ಲಾ ಅವನ ಲೀಲೆ. ಅವನು ಇವರಿಬ್ಬರೇ ಸತಿ ಪತಿಗಳು ಅಂತ ನಿಶ್ಚಯಿಸಿದ್ದರೆ,ಅದನ್ನು ತಪ್ಪಿಸೋಕೆ ನಾನ್ಯಾರು? ... ಏನೇನು ನಡೆಯಬೇಕೋ ಅದು ನಡೆದೇ ನಡೆಯುತ್ತೇ... ನನ್ನದೇನು ?''

''ಹಾಗಾದ್ರೆ ನಿಮ್ಮ ಕಡೆಯಿಂದ ಗ್ರೀನ್ ಸಿಗ್ನಲ್... ಥ್ಯಾಂಕ್ಯೂ ಯೂ ಆಂಟೀ...''

''ಹುಚ್ಚು ಹುಡುಗಿ, ನೀನ್ಯಾಕೆ ಇಷ್ಟು ಉದ್ವಿಗ್ನ ಆಗ್ತೀಯೋ ತಿಳೀದು.. ನಿನ್ನ ಆರೋಗ್ಯಕ್ಕೆ ಒಳ್ಳೇದಲ್ಲ....''

''ಪೂರ್ಣಿಮಾಳ ತಾಯಿ, ಅವಳ ಮದುವೆ ಬಗ್ಗೆ ಮಾತ್ನಾಡ್ತಾ ಇದ್ರು... ಅವರಿಬ್ಬರೂ ಪ್ರೀತಿಸ್ತಿದಾರೆ ಅನ್ನೋ ಸುಳಿವು ಸಿಕ್ಕಿತ್ತು.. ಪ್ರೀತಿಸುತ್ತಿರುವ ಪ್ರೇಮಿಗಳನ್ನು ಒಂದು ಮಾಡುವುದು ನನ್ನ ಕೆಲಸ ಅಂತ ಅನ್ನಿಸ್ತು. ನೀವು ಒಪ್ಪಿಗೆ ಕೊಟ್ರಲ್ಲ, ಅಷ್ಟೇಸಾಕು. ಇನ್ನೆರಡು ದಿನಗಳಲ್ಲಿ ಸಿಂಪಲ್ಲಾಗಿ ಮದುವೆ ಮುಗಿಸಿ ಬಿಡೋಣ ಏನಂತೀರಾ ? ''

''ಅಷ್ಟು ಅರ್ಜೆಂಟೇನು? ಮೊದಲು ಮಾತುಕತೆಯಾಗಬೇಡವೇ ? ಲಗ್ನಪತ್ರಿಕೆ ಶಾಸ್ತ್ರ ನೆರವೇರಬೇಡವೆ ? ಛತ್ರ ಗಿತ್ರ, ಜವುಳಿ, ಒಡವೆ ಎಲ್ಲಾ ಸಿದ್ಧವಾದ ನಂತರ ತಾನೇ ಲಗ್ನ.. ನನ್ನ ಮಗಳು ಅಳಿಯ ಬರಬೇಡವೇ ?''

ಈಗ ಅವಳಿಗೆ ಪೇಚಾಟಕ್ಕಿಟ್ಟುಕೊಂಡಿತು. ಯಾವ ಉಪಾಯ ಹುಡುಕುವುದು? ಈ ದಿಢೀರನೇ ಮರುಮದುವೆಗೆ ಈ ಆಂಟಿ ಒಪ್ಪುವುದಿಲ್ಲವೆನಿಸಿತು. ಸರಸರನೆ ತಲೆ ಓಡಿಸಿದಳು.

''ಇನ್ನು ಎಂಟು ಹತ್ತು ದಿನಗಳಲ್ಲಿ ಆಷಾಢ ಮಾಸ ಶುರುವಾಗುತ್ತೆ. ಆಮೇಲೆ ಅಧಿಕ ಶ್ರಾವಣ. ಆಮೇಲೆ ಶ್ರಾವಣದಲ್ಲಿ ಹಬ್ಬಗಳು, ಗೌರಿ ಹಬ್ಬ ಗಣಪತಿಹಬ್ಬ ಆಮೇಲೆ ಪಿತೃಪಕ್ಷ ಹೀಗೆ ದಸರಾವರೆಗೆ ಮುಹೂರ್ತಗಳು ಸಿಗುವುದೇ ಕಷ್ಟವಾಗುತ್ತೆ. ಅಷ್ಟು ಹೊತ್ತಿಗೆ ನನಗೆ ಹೆರಿಗೆಯ ದಿನ ಬಂದೇ ಬಿಡುತ್ತೆ. ಅದಕ್ಕೇ ಆದಷ್ಟು ಬೇಗ ನನ್ನ ಹಾಗೆ ಸರಳವಾಗಿ ಮದುವೆಯಾಗಲಿ ಅಂತ ನನ್ನ ಆಸೆ... ಇದು ನನ್ನ ಬಯಕೆ ಅಂತ ಬೇಕಾದ್ರೂ ಅಂದುಕೊಳ್ಳಿ. ಆಮೇಲೆ ಬೇಕಾದ್ರೆ ಗ್ರ್ಯಾಂಡಾಗಿ ರಿಸೆಪ್ಷನ್ ಪಾರ್ಟಿ ಇಟ್ಟುಕೊಂಡರಾಯ್ತು. ಮದುವೆಯ ತಯಾರಿಗೆ ನಿಮ್ಮ ಮನೇಲಿ ಓಡಾಡುಕೆ ಯಾರಿದಾರೆ ? ಮದುವೆ ಹುಡುಗನೇ ಎಲ್ಲಾದಕ್ಕೂ ಒದ್ದಾಡಬೇಕು. ಹೀಗೆ ಸಿಂಪಲ್ಲಾಗಿ ಮದುವೆಯಾದರೆ, ಯಾರಿಗೂ ಶ್ರಮವಿಲ್ಲ, ಖರ್ಚು ವೆಚ್ಚವೂ ಉಳಿಯುತ್ತೆ. ''

''ಹೆಣ್ಣಿನವರಿಗೆ ಖರ್ಚುವೆಚ್ಚ ಉಳಿದರೆ, ನಮಗೆ ಬರೋ ಭಾಗ್ಯವೇನು ? ವರೋಪಚಾರ, ಉಡುಗೊರೆ ಅಂತಲಾದ್ರೂ ಖರ್ಚುಮಾಡಲಿ. ನಾವು ನಮ್ಮಮಗಳ ಮದುವೇಲಿ ಯಾವ ಖರ್ಚಿಗೂ ಹಿಂದೆ ಮುಂದೆ ನೋಡಲಿಲ್ಲ.''

''ಅದು ಆಕಾಲ... ಈಗಲೂ ಹಾಗೇ ನಡೆಯಬೇಕೂಂತ ಏನಿಲ್ಲ, ವರೋಪಚಾರ, ಅದೂ ಇದು ಅಂತ ಅವರ ಕೈಲಾದಷ್ಟನ್ನು ಕೊಟ್ಟೇ ಕೊಡ್ತಾರೆ. ಆ ಹಣದಿಂದ ನಿಮ್ಮ ಮಗನಿಗೆ

ಅನುಕೂಲ ಆಗುತ್ತದೆ. ಸುಮ್ಮನೆ ಅಗತ್ಯಕ್ಕಿಂತ ಹೆಚ್ಚಿನ ಹಣ ಖರ್ಚು ಮಾಡಿ ವೇಸ್ಟ್ ಮಾಡುವುದಕ್ಕಿಂತ ಆ ಹಣವನ್ನು ಬ್ಯಾಂಕಿನಲ್ಲಿ ಫಿಕ್ಸೆಡ್ ಡಿಪಾಸಿಟ್‌ನಲ್ಲಿಟ್ಟರೆ, ಬಡ್ಡಿ ಬರುತ್ತದೆ. ಇದು ಲಾಭವೋ ನಷ್ಟವೋ ನೀವೇ ಯೋಚಿಸಿ....''

''ಮಾತಿನಲ್ಲಿ ಚತುರೆ ನೀನು. ಹೇಗಾದರೂ ಮಾಡಿ ನನ್ನನ್ನು ಒಪ್ಪಿಸಲೇ ಬೇಕು ಅಂತ ನಿರ್ಧರಿಸಿರುವ ಹಾಗಿದೆ. ಅದ್ಸರಿ ಅವಳ ಅಪ್ಪ ಅಮ್ಮ ಏನಂತಾರೋ ?''

''ಅವರ ಚಿಂತೆ ನಿಮಗೇಕೆ ನನಗೆ ಬಿಡಿ. ಅವರಿಗೆ ಇಬ್ಬರೇ ಹೆಣ್ಣು ಮಕ್ಕಳು. ಇವಳೇ ಹಿರಿಯಳು. ಇವಳು ಕೆಲಸದಲ್ಲಿದ್ದಾಳೆ. ಬೇರೆ ಊರಿನಲ್ಲಿದ್ದಾಳೆ. ಆದಷ್ಟು ಬೇಗ ಅವಳ ಜವಾಬ್ದಾರಿಯನ್ನು ಕಳೆದುಕೊಳ್ಳುವ ಆತುರ ಅವರಿಗೆ ಇದ್ದೇ ಇರುತ್ತೆ. ನೀವು ಹೇಳಿದ ಹಾಗೆ ಕೇಳ್ತಾರೆ... ಅಲ್ವೇ ಆಂಟಿ ....?''

''ನಂಗೊತ್ತಿಲ್ಲಮ್ಮ ಎಲ್ಲಾ ಮಾತನ್ನು ನೀನೇ ಆಡ್ತಿದೀಯ. ದಿವಾಕರ ಒಪ್ತಾನೋ ಇಲ್ಲವೋ.... ?''

''ದಿವಾಕರನಿಗಾಗಲೀ, ಪೂರ್ಣಿಮಾಳಿಗಾಗಲೀ, ಆಡಂಬರದ ಮದುವೆಯೇ ಆಗಬೇಕು ಅನ್ನೋ ಹಠವಿಲ್ಲ. ಮನೆಯಲ್ಲಿ ದೇವರ ಮುಂದೆ ನಾಲ್ಕು ಜನರ ಸಮ್ಮುಖದಲ್ಲಿ ತಾಳಿ ಕಟ್ಟಿದರೆ ಆಗೋದು ಮದುವೇನೇ, ಕೋರ್ಟಿನಲ್ಲಿ ಮ್ಯಾಜಿಸ್ಟ್ರೇಟ್ ಮುಂದೆ ರಿಜಿಸ್ಟರ್ ಬುಕ್‌ನಲ್ಲಿ ಸೈನ್ ಮಾಡಿ, ಹಾರ ಬದಲಾಯಿಸಿ ಕೊಂಡರೆ , ಅದೂ ಮದುವೇನೇ.... ಇದರಲ್ಲಿ ನಿಮಗೆ ಯಾವುದು ಸರಿ ಅಂತ ಅನ್ನಿಸುತ್ತೋ ಅದನ್ನೇ ಅವರುಗಳು ಒಪ್ತಾರೆ. ನಾನು ಹೇಳ್ತಿದೀನಿ.... ''

''ಸರಿಯಮ್ಮ ಎಲ್ಲವನ್ನು ನೀನೇ ತೀರ್ಮಾನಿಸಿರುವ ಹಾಗಿದೆ. ನಮ್ಮ ಒಳ್ಳೇದಕ್ಕೆ ನೀನು ಹೇಳ್ತಿರುವುದು ಅಂತ ನನಗೂ ಗೊತ್ತು. ಎಲ್ಲಾ ನಿನಗೆ ಒಪ್ಪಿಸಿದ್ದೇನೆ....''

''ಥ್ಯಾಂಕ್ಯೂ ಆಂಟೀ... ಅವಳು ಅತಿಯಾದ ಸಂತೋಷದಿಂದ ಆಂಟಿಯ ಕೆನ್ನೆಗೆ ಮುತ್ತಿಟ್ಟಳು. ಆಂಟಿ ಸಂಕೋಚದಿಂದ ತಳ್ಳಿದಳು. ಗಾಯತ್ರಿ ಹೊರಗೆ ಬಂದಳು. ಹೊರಬಾಗಿಲಿನಲ್ಲಿ ದಿವಾಕರ ನಿಂತಿದ್ದ. ಅವನು ಅಲ್ಲಿ ನಿಂತು ಅವರಿಬ್ಬರ ಮಾತುಕತೆಗಳನ್ನು ಕೇಳಿಸಿಕೊಂಡಿದ್ದ ಎನ್ನುವುದರಲ್ಲಿ ಸಂದೇಹವೇ ಇರಲಿಲ್ಲ. ''

''ದಿವಾಕರ ಸ್ವಲ್ಪ ನನ್ನ ಜೊತೆ ಬರ್ತೀರಾ'' ಅವನ ಕೈ ಹಿಡಿದು ಅವನನ್ನು ತನ್ನೊಡನೆ ಮುಂಬಾಗಿಲಿಗೆ ಕರೆ ತಂದಳು.

''ನಮ್ಮಿಬ್ಬರ ಮಾತನ್ನು ನೀವು ಕೇಳಿಸಿಕೊಂಡಿದೀರಿ ಅಂತ ನನಗೆ ಗೊತ್ತು... ನಿಮ್ಮ ತಾಯಿ ನಿಮ್ಮಿಬ್ಬರ ಮದುವೆಗೆ ಒಪ್ಪಿಗೆಯನ್ನು ಕೊಟ್ಟಿದ್ದಾರೆ. ಈಗ ದಯವಿಟ್ಟು ನೀವು ಕೈ ಕೊಡಬೇಡಿ.''

''ನನಗೆ ಒಂದ್ಮಾತು ತಿಳಿಸದೇ, ನೀವ್ಯಾಕೆ ಅಮ್ಮನಿಗೆ ಹೇಳಿದ್ರಿ ...?''

''ನಿಮ್ಮ ಅಮ್ಮನ ಒಪ್ಪಿಗೆ ಮುಖ್ಯ ಅಲ್ವಾ ? ಸೀದಾ ನೀವು ಹೋಗಿ ಕೇಳಿದ್ರೆ ನಿಮ್ಮ ಅಮ್ಮ ಒಪ್ತಾ ಇದ್ರೋ ಇಲ್ಲವೋ .... ಯಾರಿಗೆ ಗೊತ್ತು ? ''

''ಅಮ್ಮ ಒಪ್ಪುವವರೆಗೂ ನಾನು ಕಾಯ್ತೀನಿ. ನನಗೆ ಆತುರವಿಲ್ಲ.''

''ಆದರೆ ಪೂರ್ಣಿಮಾಳಿಗೆ ಆತುರವಿದೆ....''

''ಯಾಕೆ ಏನಾಯ್ತು ಅವಳಿಗೆ?'' ಗಾಬರಿಯಿಂದ ಪ್ರಶ್ನಿಸಿದ.

''ಗಾಬರಿಯಾಗುವಂಥಾದ್ದೇನಿಲ್ಲ. ಎರಡು ದಿನಗಳೊಳಗೆ ಎಲ್ಲರನ್ನು ಒಪ್ಪಿಸಿ ನಿಮ್ಮಿಬ್ಬರ ಮದುವೆ ಮಾಡಿಸ್ತೀನಿ ಅಂತ ಛಾಲೆಂಜ್ ಮಾಡಿಬಿಟ್ಟಿದೀನಿ. ಈಗ ನನ್ನ ಪ್ರೆಸ್ಟೀಜ್ ಪ್ರಶ್ನೆ.''

''ಇಂಥಾ ಸೀರಿಯಸ್ ವಿಷಯದಲ್ಲಿ ಎಂಥಾ ಛಾಲೆಂಜ್?'' ಅವನು ಅಸಹನೆಯಿಂದ ತಲೆಯಾಡಿಸಿದ.

''ಪೂರ್ಣಿಮಾ ಯಾಕೋ ಅಪ್ಸೆಟ್ ಆಗಿದಾಳೆ. ಅವಳಿಗೆ ಈಗ ನಿಮ್ಮ ಅಗತ್ಯ ಅವಶ್ಯವಾಗಿದೆ. ಪ್ರೇಮಿಗಳಾಗಿರುವುದಕ್ಕಿಂತ ದಂಪತಿಗಳಾದರೆ, ಸರಿ ಅಂತ ಅನ್ನಿಸ್ತು. ಅವರ ತಾಯಿ ಅವಳಿಗೆ ಯಾವುದೋ ಗಂಡನ್ನು ಸಜೆಸ್ಟ್ ಮಾಡಿದರು. ಅದು ಅವಳಿಗೆ ಇಷ್ಟವಾಗಲಿಲ್ಲ. ತಾಯಿ ಮಗಳಲ್ಲಿ ಮಾತುಕತೆಯಾಯ್ತು. ಪೂರ್ಣಿಮಾ ವಿಪರೀತ ಬೇಜಾರು ಮಾಡಿಕೊಂಡಿದಾಳೆ.''

''ಪೂರ್ಣಿಮಾ ಯಾಕೆ ಅಪ್ಸೆಟ್ ಆಗಿದಾಳೆ ಅಂತ ನನಗೆ ಗೊತ್ತು... ಅವಳ ಮಾವ ಎಲ್ಲಾ ಹೇಳಿದಾರೆ.''

''ಅಬ್ಬಾ...'' ಗಾಯತ್ರಿ ತನ್ನಲ್ಲೇ ನುಡಿದುಕೊಂಡಳು.

''ನಮ್ಮಲ್ಲಿ ಸ್ನೇಹವಿದೆ. ಪ್ರೀತಿಯ ಬಗ್ಗೆ ಖಚಿತವಾಗಿ ಹೇಳಲಾರೆ. ಮದುವೆಯಾಗುವ ಮಾತಂತೂ ನಮ್ಮಿಬ್ಬರ ಮಧ್ಯೆ ಸುಳಿದಿರಲೇ ಇಲ್ಲ. ಆ ವಿಷಯ ಬಂದಾಗ ಹೇಳುತ್ತಿದ್ದಲೋ ಏನೋ....? ನನ್ನನ್ನು ಮದುವೆಯಾಗಲು, ಬೇಕಾದ ಅರ್ಹತೆ ನನ್ನಲ್ಲಿ ಏನಿದೆ? ನೀವೇ ಹೇಳಿ? ಗಂಡಸಿಗೆ ಬೇಕಾದ ಮುಖ್ಯವಾದ ಅರ್ಹತೆ ಉದ್ಯೋಗ. ಅದೇ ನನ್ನಲ್ಲಿಲ್ಲ. ಹೆಂಡತಿಯನ್ನು ಸಾಕುವ ಯೋಗ್ಯತೆ ಇಲ್ಲದಿದ್ದ ಮೇಲೆ ಗಂಡಸು ಮದುವೆಯಾಗಬಾರದು ಇದು ನನ್ನ ಥಿಯರಿ.''

''ಅದು ಸರಿಯಪ್ಪಾ.. ಈಗ ನೀನು ಸುಮ್ಮನಿದ್ದು ಬಿಟ್ಟರೆ, ಪೂರ್ಣಿಮಾಳನ್ನು ಮರೆಯಬೇಕಾಗುತ್ತದೆ ಅಷ್ಟೇ. ಅವಳಿಗೆ ಟ್ರಾನ್ಸಫರ್ ಆದರೆ ಬೇರೆ ಎಲ್ಲಿಗಾದರೂ ಹೊರಟು ಹೋಗುತ್ತಾಳೆ. ನೀವಿಬ್ಬರೂ ದೂರ ದೂರ ಆಗ್ತೀರಿ ಅಷ್ಟೇ.''

''ಇಲ್ಲ ಗಾಯತ್ರಿಯವರೇ, ಸ್ನೇಹ,ಪ್ರೀತಿ, ಅಂತಂದ್ರೆ ಅಷ್ಟು ಸುಲಭವಾಗಿ ಮರೆಯುವಂಥದ್ದಲ್ಲ. ಅದಕ್ಕೆ ನೀವು ಭಾಸ್ಕರರೇ ಸಾಕ್ಷಿ... ಬೇರೆ ಏನಾದ್ರೂ ವಿಷಯವಿದ್ದರೆ ಹೇಳಿ...''

''ಓ.ಕೇ. ನಿಮ್ಮ ಪ್ರೀತಿ ಮೇಲೆ ನಿಮಗೆ ನಂಬಿಕೆ ಇದೆ. ಪೂರ್ಣಿಮಾ ಅಪ್ಸೆಟ್ ಆಗಿರುವುದು ಡೈವೋರ್ಸ್ ಸಿಕ್ಕಿದ್ದಕ್ಕಲ್ಲ. ಅವನಿಂದ ಬಿಡುಗಡೆ ಸಿಕ್ಕಿದರೆ ಸಾಕೆಂದು ಕಾದಿದ್ದಳು. ಆದರೆ ಆ ಮನುಷ್ಯ, ಐದಾರು ದಿನಗಳಲ್ಲಿ ಮದುವೆಯಾಗಲಿದ್ದಾನೆ... ಇವಳಿಗೆ ಆಹ್ವಾನ ಪತ್ರಿಕೆ ಕಳಿಸಿದ್ದಾನಂತೆ. ಇವಳನ್ನು ಪ್ರೀತಿಸಿ ಮದುವೆಯಾಗಿ ಇವಳಿಗೆ ಕೈಕೊಟ್ಟು ಈಗ ಇನ್ನೊಬ್ಬಳ ಜೊತೆ ಅಫೇರ್ ಇಟ್ಟುಕೊಂಡು ಅವಳನ್ನೇ ಮದುವೆಯಾಗ್ತಿದಾನೆ... ಗಂಡಸು

ಎಷ್ಟು ಬೇಗ ತನ್ನ ತಪ್ಪನ್ನೆಲ್ಲಾ ಮರೆತು ಹೊಸ ಬಾಳ್ವೆ ಮಾಡ್ತಾನೆ. ಹೆಂಗಸು ಮಾತ್ರ ಕೊರಗಿ ಕೊರಗಿ ಸಾಯ್ತಾಳೆ.... ಅವಳೂ ಅಷ್ಟೇ ದಿಟ್ಟತನದಿಂದ ಇನ್ನೊಬ್ಬನನ್ನು ವರಿಸಿ ಮದುವೆಯಾಗಿ, ಗಂಡನಿಗಿಂತ ಹೆಂಗಸು ಕಡಿಮೆಯೇನಲ್ಲ ಅಂತ ತೋರಿಸಿಕೊಡಬೇಕು ಅಂತ ನನ್ನ ವಾದ. ಅದಕ್ಕೆ ನಾನು ಛಾಲೆಂಜ್ ಮಾಡಿರುವುದು. ಅವನ ಮದುವೆಗೆ ಮೊದಲೇ ಇವಳು ಮದುವೆಯಾಗಬೇಕು. ಗಂಡನನ್ನು ಕರೆದುಕೊಂಡು ರಿಸೆಪ್ಶನ್‌ಗೆ ಹೋಗಬೇಕು... ಆಗಲೇ ಅಂಥವರಿಗೆ ಬುದ್ಧಿ ಬರುವುದು. ''

''ಅಂಥೋರಿಗೆ ಯಾವುದರಿಂದಲೂ ಬುದ್ಧಿ ಬರುಲ್ಲ ಮೇಡಂ...''

''ಬುದ್ಧಿ ಬರದಿದ್ದರೆ ಬೇಡ, ಮುಖವಾದರೂ ಚಿಕ್ಕದಾಗುತ್ತೆ. ರಾಜಾರೋಷ ವಾಗಿ ನಾನು ಮಾಡುತ್ತಿರುವುದು ಸರಿ ಅಂತ ಅವನು ತಲೆ ಎತ್ತಿ ತಿರುಗಾಡುವಾಗ, ನಮ್ಮ ಪೂರ್ಣಿಮಾಗೆ ಕಮ್ಮಿಯಾಗಿರುವುದಾದರೂ ಏನು ? ನೀವು ಪೂರ್ಣಿಮಾಳಿಗೆ ತಕ್ಕನಾದವರು... ನೀವು ಈಗ ಅವಳಿಗೆ ಸಪೋರ್ಟ್ ಮಾಡದಿದ್ದರೆ ಅವಳು ಕುಗ್ಗಿ ಹೋಗ್ತಾಳೆ... ಜೀವಮಾನವೆಲ್ಲ ನರಳ್ತಾಳೆ...''

''ನಾನು ಅವಳಿಗೆ ತಿಳುವಳಿಕೆ ಹೇಳ್ತೀನಿ. ಇದ್ಯಾವ ಮಹಾ ದೊಡ್ಡ ವಿಷಯ. ಅದಕ್ಕೆ ಇವಳೇಕೆ ತಲೆ ಕೆಡಿಸಿಕೊಳ್ಳಬೇಕು... ?''

''ಅದು ಸರಿ, ನನ್ನ ಛಾಲೆಂಜ್ ವಿಷಯ ?''

''ಅದನ್ನು ಯೋಚಿಸೋಣ. ಪೂರ್ಣಿಮಾ ಎಲ್ಲಿ ? ನಾನು ಈಗಲೇ ಅವಳ ಹತ್ತಿರ ಮಾತನಾಡ್ತೀನಿ.'' ಮಹಡಿಯ ಕಡೆ ನೋಡಿದ.

''ಅವಳಿನ್ನೂ ಬ್ಯಾಂಕಿನಿಂದ ಬಂದಿಲ್ಲ.''

''ನಾನು ಅಲ್ಲೇ ಹೋಗಿ ಅವಳ ಹತ್ತಿರ ಮಾತಾಡ್ತೀನಿ. '' ಅವನು ಹಾಗೇ ಚಪ್ಪಲಿ ಮೆಟ್ಟಿ ಹೊರಟ. ಇವಳು ತಡೆಯಲಿಲ್ಲ, ಇಬ್ಬರೂ ಒಟ್ಟಿಗೆ ಸೇರಿ, ಏನಾದರೊಂದು ತೀರ್ಮಾನ ಮಾಡಿಯೇ ಮಾಡ್ತಾರೆ ... ಎಂದು ಸಂತಸಗೊಂಡಳು.

ಸ್ವಲ್ಪ ಸಮಯದ ನಂತರ ಕೇಶವ ತಂಗಿಯನ್ನು ಕರೆದುಕೊಂಡು ಹೋಗಲು ಬಂದ. ಶ್ರೀಮತಿ, ತಾನು ಇನ್ನು ಒಂದೆರಡು ದಿನಗಳು ಇದ್ದು ಮತ್ತೆ ಬರುವುದಾಗಿ ಹೇಳಿದಳು. ಕೇಶವ ಒಪ್ಪಿದ. ಪೂರ್ಣಿಮಾ ಬರುವವರೆಗೂ ಇದ್ದು ಹೇಳಿ ಹೊರಡುವುದೆಂದುಕೊಂಡು ಕುಳಿತಿದ್ದ. ಪೂರ್ಣಿಮಾ ಬರುವುದು ತಡವೇ ಆಯಿತು. ಅವಳೊಂದಿಗೆ ದಿವಾಕರನೂ ಬಂದ. ಅವನು ತಾನು ಊರಿಗೆ ವಾಪಸ್ಸು ಹೊರಟಿರುವನೆಂದು ತಿಳಿಸಿದಾಗ, ದಿವಾಕರ ಮಾತನಾಡಿದ.

''ನಾನು ನಿಮ್ಮ ಹತ್ತಿರ ಸ್ವಲ್ಪ ಮಾತನಾಡಬೇಕಾಗಿತ್ತು.'' ಆತಂಕದಿಂದ ಪೂರ್ಣಿಮಾಳ ಎದೆ ಬಡಿತ ತೀವ್ರವಾಗಿತ್ತು. ಅಲ್ಲಿ ಆಂಟಿ ಸಹ ಕುಳಿತಿದ್ದಳು. ಗಾಯತ್ರಿ ಮನದಲ್ಲೇ ದೇವರನ್ನು ಪ್ರಾರ್ಥಿಸಿದಳು. ಶ್ರೀಮತಿ, ಕೇಶವನನ್ನೇ ನೋಡಿದಳು.

''ನಾನು ಪೂರ್ಣಿಮಾಳನ್ನ ಮದುವೆಯಾಗಬೇಕೆಂದಿದ್ದೇನೆ. ನನಗೆ ನಿಮ್ಮ ಆಶೀರ್ವಾದ ಬೇಕು''ಎಂದು ಹೇಳಿ ಕೇಶವನ ಕಾಲಿಗೆ ನಮಸ್ಕರಿಸಿದ. ಕೇಶವ ಅವನನ್ನು

ಹಿಡಿದು ಎತ್ತಿದ.

''ಪೂರ್ಣಿಮಾ ಇದೆಲ್ಲಾ ಏನಮ್ಮಾ... ''ಅವಳ ಕಡೆ ತಿರುಗಿ ಕೇಳಿದ.

''ಹೌದು ಮಾವ, ನಾವುಗಳು ಮದುವೆಯಾಗಬೇಕೆಂದು ತೀರ್ಮಾನಿಸಿದ್ದೇವೆ. ನಾವುಗಳು ಒಬ್ಬರನ್ನೊಬ್ಬರು ಇಷ್ಟಪಟ್ಟಿದ್ದೇವೆ. ''

''ದಿವಾಕರ, ಸ್ವಲ್ಪ ನನ್ನೊಂದಿಗೆ ಬನ್ನಿ. ನಾನು ಪ್ರೈವೇಟ್ ಆಗಿ ನಿಮ್ಮೊಡನೆ ಮಾತನಾಡಬೇಕು''ಎಂದು ಹೇಳಿ ಬಾಲ್ಕನಿಗೆ ಕರೆತಂದ.

''ಪೂರ್ಣಿಮಾ ಡೈವೋರ್ಸಿ ಎನ್ನುವ ವಿಷಯ ನಿಮಗೆ ತಿಳಿದಿದೆ. ಅವಳು ವಯಸ್ಸಿನಲ್ಲಿ ಚಿಕ್ಕವಳಾದರೂ, ಅನುಭವದಲ್ಲಿ ಬೆಳೆದು ಬಿಟ್ಟಿದ್ದಾಳೆ. ಅವಳ ಮನಸ್ಸು ಒಂದು ತರಹ ಸೂಕ್ಷ್ಮವಾಗಿ ಹೋಗಿದೆ. ಬಾಯ್ನಲ್ಲಿ ಏನನ್ನು ಆಡದಿರಬಹುದು. ಆದರೆ ಏನೋ ಅವ್ಯಕ್ತ ಭಯವಿದ್ದೇ ಇರುತ್ತದೆ. ಅವಳನ್ನು ನೀವು ಅತಿ ಎಚ್ಚರಿಕೆಯಿಂದ ಕಾಪಾಡಬೇಕಾಗುತ್ತದೆ. ಮದುವೆ ಎಂದರೆ ಆಟವಲ್ಲ. ಜವಾಬ್ದಾರಿಯೂ ಹೆಚ್ಚುತ್ತೆ. ಅವಳ ರಕ್ಷಣೆಯ ಹೊರೆ ಬೀಳುತ್ತೆ. ನಿಮ್ಮ ಕರ್ತವ್ಯವನ್ನು ಪಾಲಿಸುವ ಹೊಣೆಗಾರಿಕೆ ನಿಮ್ಮ ಮೇಲಿರುತ್ತೆ. ಇದೆಲ್ಲಾ ನಿಮಗೆ ತಿಳಿದಿದೆ ಅಂತ ಅಂದುಕೊಂಡಿದೀನಿ. ''

''ಪೂರ್ಣಿಮಾಳಿಗೆ ನಾನು ಯಾವ ರೀತಿಯಿಂದಲೂ ಮೋಸ ಮಾಡುವುದಿಲ್ಲ. ನನಗೆ ಪೂರ್ಣ ವಿಶ್ವಾಸವಿದೆ.''

''ಗುಡ್... ನಾನು ಊರಿಗೆ ಹೋಗಿ ಮದುವೆಯ ತಯಾರಿ ನಡೆಸುತ್ತೇನೆ. ''

''ನಾನು ಸಿಂಪಲ್ಲಾಗಿ ಮದುವೆ ಆಗುವ ಅಭಿಲಾಷೆ ಉಳ್ಳವನು. ಯಾವ ಖರ್ಚು ವೆಚ್ಚಆಡಂಬರ ಬೇಡ. ಈ ಭಾನುವಾರ ದೇವಸ್ಥಾನದಲ್ಲಿ ದೇವರ ಸಮ್ಮುಖದಲ್ಲಿ ಮದುವೆಯಾಗುತ್ತೇನೆ....'' ಕೇಶವ ಅಚ್ಚರಿಗೊಂಡ.

''ನಿನ್ನ ಆದರ್ಶದ ಮಾತುಗಳು ಅಪ್ಯಾಯಮಾನವಾಗಿದೆ. ಆದರೆ ಇದಕ್ಕೆ ನಿಮ್ಮ ತಂದೆ ತಾಯಿ ಸಮ್ಮತಿಸುವರೇ... ಯೋಚಿಸೀಪ್ಪಾ.''

''ಪೂರ್ಣಿಮಾಳ ಆಸೆಯೂ ಇದೇ. ಅವಳಿಗೆ ನೆಂಟರಿಷ್ಟರನ್ನು ಕರೆದು ಎಲ್ಲರ ವಿಚಿತ್ರ ನೋಟಕ್ಕೆ ಗುರಿಯಾಗಿ, ಹಸೆಮಣೆಯ ಮೇಲೆ ಗಂಟೆಗಟ್ಟಳೆ ಕುಳಿತು ಶಾಸ್ತ್ರೋಕ್ತವಾಗಿ ಮದುವೆಯಾಗುವ ಆಸೆಯಂತೂ ಇಲ್ಲ. ನನಗೂ ಅವೆಲ್ಲ ಬೇಕಿಲ್ಲ. ಅವಶ್ಯಕತೆ ಇಲ್ಲ. ನೀವು ಒಪ್ಪಿಗೆ ಕೊಡಿ. ನಾನು ಈಗಲೇ ಹೋಗಿ ದೇವಸ್ಥಾನದಲ್ಲಿ ಮಾತನಾಡಿಬರುತ್ತೇನೆ.''

''ನಿಮ್ಮ ತಂದೆ ತಾಯಿ ಏನಂತಾರೆ ಅಂತ ಹೇಳಲೇ ಇಲ್ಲವಲ್ಲ''

''ನಮ್ಮ ತಂದೆಯಂತೂ ಯಾವ ಮಾತಿಗೂ ಬರುವ ಸ್ಥಿತಿಯಲ್ಲಿಲ್ಲ. ತಾಯಿ ನನ್ನ ಮಾತಿಗೆ ಬೇಡ ಎನ್ನುವುದಿಲ್ಲ. ಆ ನಂಬಿಕೆ ನನಗಿದೆ. ಇನ್ನು ನನ್ನ ತಂಗಿ... ಅವಳಿಂದ ಯಾವ ಆಕ್ಷೇಪಣೆ. ಮಾತುಗಳೂ ಬರದಿರುವಂತೆ ನಾನು ನೋಡಿಕೊಳ್ಳುತ್ತೇನೆ.''

''ಸರಿಯಪ್ಪಾ... ನೀವೇ ಎಲ್ಲಾ ನಿರ್ಧರಿಸಿದ ಮೇಲೆ, ನನಗಿನ್ನೇನು ಚಿಂತೆ. ನಾನೂ ದೇವಸ್ಥಾನಕ್ಕೆ ಬರುತ್ತೀನಿ. ನಾನು ನನ್ನ ತಂಗಿಯನ್ನು ಕೇಳಬೇಕು. ನಾವು ನಾವೇ ನಿರ್ಧರಿಸುವಂತಿಲ್ಲ. ಅವಳು ಸ್ವಂತ ತಾಯಿ. ಅವಳ ಆಸೆಗಳುಏನಿವೆಯೋ...? '' ಎನ್ನುತ್ತಾ ಮತ್ತೆ ಒಳಗೆ ಬಂದ.

ಶ್ರೀಮತಿ ಕಾತುರ, ಆತುರಗಳಿಂದ ಒಳಬಂದ ಆ...ಣ್ಣನನ್ನೇ ನೋಡಿದಳು. ಕಣ್ಣು ಸನ್ನೆಯಲ್ಲಿ ಬರುವಂತೆ ಕರೆದ. ಇಬ್ಬರೂ ಬಾಲ್ಕನಿಗೆ ಬಂದರು. ದಿವಾಕರ ಇಳಿದು ಹೊರಟು ಹೋಗಿದ್ದ.

''ಶ್ರೀಮತಿ, ಇವರುಗಳೆಲ್ಲ ಸೇರಿ, ಪೂರ್ಣಿಮಾಳ ಮದುವೆಯ ಬಗ್ಗೆ ತೀರ್ಮಾನ ತಗೊಂಡಿದಾರೆ. ನಿನಗೂ ವಿಷಯ ಗೊತ್ತು ತಾನೇ ?.... ''

''ಹು.... ಗೊತ್ತು. ಇದೆಲ್ಲ ಗಾಯತ್ರಿಯ ಕಿತಾಪತಿ. ಚಂದ್ರನ ಮರುಮದುವೆ ಅಂತ ತಿಳಿದಾಗಿನಿಂದ ಪೂರ್ಣಿಮಾ ಡಲ್ ಆಗಿದಾಳೆ. ಅದಕ್ಕೆ ಮೊದಲೇ ಭಾನುವಾರವೇ ಇಬ್ಬರಿಗೂ ಮದುವೆ ಮಾಡಿ ಮುಗಿಸಬೇಕೂಂತ ಪ್ಲಾನ್ ಮಾಡಿದಾಳೆ. ನನಗಂತೂ ಕೈ ಕಾಲೇ ಆಡುತ್ತಿಲ್ಲ. ಭಯ ಆಗ್ತಿದೆ.''

''ಭಯ ಪಡುಕ್ಕೆ ಏನಿದೆ. ಕೆಲವು ವಿಷಯಗಳಲ್ಲಿ ಸರಿ ಅನ್ನಿಸ್ತಿದೆ. ನಿನ್ನ ಗಂಡ ಏನಂತಾರೋ ಅಂತ.... ಅಷ್ಟೇ...''

''ಅವರು, ಯಾವತ್ತೂ ಯಾವ ಜವಾಬ್ದಾರಿಗೂ ಹೆಗಲು ಕೊಟ್ಟವರಲ್ಲ. ಎಲ್ಲಾದರಲ್ಲೂ ತಪ್ಪು ಕಂಡು ಹಿಡಿದು, ನಡೆಯೋ ಕೆಲಸಕ್ಕೆ ವಿಘ್ನವನ್ನು ತರುವಂತಹವರೇ.. ಈಗ ಅವರಿಗೆ ತಿಳಿಸಿದರೂ ಒಂದೇ ತಿಳಿಯದಿದ್ದರೂ ಒಂದೇ... ಡೈವೋರ್ಸ್ ವಿಷಯವನ್ನು ಕೇಳಿ ಆಕಾಶ ಭೂಮಿಯನ್ನು ಒಂದು ಮಾಡಿದ್ದರು. ತಕ್ಷಣವೇ ಮರುಮದುವೆ ಅಂತ ತಿಳಿದರೆ, ಮತ್ತೇನು ರಂಪ ಮಾಡ್ತಾರೋ ... ಅವರಿಗೆ ನಿಧಾನವಾಗಿ ತಿಳಿಸುವುದೇ ಒಳ್ಳೆಯದು ಅಂತ ಅನ್ನಿಸುತ್ತೆ ನನಗೆ.''

''ನನಗೂ ಅದೇ ಸರಿ ಅಂತ ಅನ್ನಿಸುತ್ತೆ. ಹೇಗೂ ಇದು ಎರಡನೇ ಮದುವೆ, ಇಲ್ಲಿ ಮದುವೆಯಾಗುವವರ ಅಭಿಪ್ರಾಯ ಮುಖ್ಯ ದಿವಾಕರ ಒಪ್ಪಿಕೊಂಡಿರುವಾಗ, ನಾವೂ ಹುಂ ಎನ್ನುವುದು ಜಾಣತನ. ಮುಂದೆ ಇಂತಹ ಅವಕಾಶ ಸಿಗದೇ ಹೋಗಬಹುದು. ಏನಂತೀಯಾ?''

''ಹಾಗಾದರೆ ದೇವರ ಮೇಲೆ ಭಾರಹಾಕಿ, ಹುಂ ಅಂತ ಒಪ್ಪಿಗೆ ಕೊಟ್ಟು ಬಿಡೋಣ. ಪೂರ್ಣಿಮಾಳ ಹಣೆಯ ಬರಹ ಚೆನ್ನಾಗಿದ್ದರೆ, ಖಂಡಿತಾ ಸರಿ ಹೋಗುತ್ತೆ.'' ಅಲ್ಲಿಗೆ ಎಲ್ಲಾ ಇತ್ಯರ್ಥವಾಗಿತ್ತು. ದಿವಾಕರ ಹಾಗೂ ಕೇಶವ ಸಮೀಪದಲ್ಲಿದ್ದ ದೇವಸ್ಥಾನಕ್ಕೆ ಹೋಗಿ ಮಾತನಾಡಿಕೊಂಡು ಬಂದರು.

ಗಾಯತ್ರಿ ಗೆಳತಿಯನ್ನು ತಬ್ಬಿಕೊಂಡು ಮುತ್ತಿಟ್ಟಳು. ''ಕಂಗ್ರಾಟ್ಸ್ ಪೂರ್ಣಿಮಾ... ಅಂತೂ ನೀನು ಗೆದ್ದೆ.''

''ಛಾಲೆಂಜ್ ಮಾಡಿದ್ದವರು ನೀವು ... ಗೆಲವು ನಿಮ್ಮದು... ನನಗೆ ಯಾವ ಆತುರವೂ ಇರಲಿಲ್ಲ.....''ನಾಚಿಕೆಯಿಂದ ನುಡಿದಳು.

''ನಿಮಗೂ ಆತುರವಿರಲಿಲ್ಲ, ದಿವಾಕರನಿಗೂ ಆತುರವಿರಲಿಲ್ಲ. ನಾನು ಈ ಪ್ಲಾನ್ ಮಾಡದೇ ಇದ್ದಿದ್ದರೆ, ನೀವು ಇಬ್ಬರೂ ಬದುಕಿನವರೆಗೂ ಹೀಗೆ ಇರುವುದನ್ನೇ ಪ್ರಿಫರ್ ಮಾಡ್ತಿದ್ರಿ.. ನಿಮ್ಮಿಬ್ಬರನ್ನು ಒಂದು ಮಾಡಿದ ಕ್ರೆಡಿಟ್ ನನಗೇ.'' ಗಾಯತ್ರಿ ಹೆಮ್ಮೆಯಿಂದ

ಹೇಳಿದಳು. ಪೂರ್ಣಿಮಾ ನಕ್ಕಂತೆ ಮಾಡಿದಳು.

''ದಿವಾಕರನ ಬಳಿ ಖರ್ಚಿಗೆ ಹಣ ಇಲ್ಲ ಎನ್ನುವುದು ಎಲ್ಲರಿಗೂ ತಿಳಿದದ್ದೇ. ಪೂರ್ಣಿಮಾ ತನ್ನ ಅಕೌಂಟ್‌ನಿಂದ ಇಪ್ಪತ್ತೈದು ಸಾವಿರ ರೂ.ಗಳನ್ನು ಡ್ರಾ ಮಾಡಿ ಅದನ್ನು ಮಾವನ ಕೈಗೆ ಕೊಟ್ಟಳು. ಕೇಶವ ಅದನ್ನು ವರೋಪಚಾರಕ್ಕೆಂದು ದಿವಾಕರನ ಕೈಗಿತ್ತ. ದಿವಾಕರ ಅದನ್ನು ತಾಯಿಯ ಕೈಗೆ ಕೊಡಲು ಹೋದ.''

''ನಿನ್ನ ಖರ್ಚಿಗೆ ಇಟ್ಕೋ... ನಿನ್ನ ಹೆಂಡತಿಯಾಗುವವಳಿಗೆ ಒಂದು ಒಳ್ಳೆಯ ರೇಶಿಮೆ ಸೀರೆ, ಒಂದು ಮಾಂಗಲ್ಯದ ಸರವನ್ನಾದರೂ ತರಬೇಕು''

''ನನಗೆ ಅದೆಲ್ಲಾ ತಿಳಿಯುಲ್ಲಮ್ಮಾ....''

''ಅದಕ್ಕೆ ಹೇಳೋದು. ಹೆಣ್ಣು ಮಗಳು ಮುಂಚಿತವಾಗಿ ತವರಿಗೆ ಬಂದು ಮದುವೆಯ ಕೆಲಸ ಕಾರ್ಯಗಳಿಗೆ ನೆರವಾಗಬೇಕು ಅಂತ... ಇರೋಳು ಒಬ್ಬಳು ತಂಗಿ. ತವರಿಗೆ ಬರೋದೇ ಅಪರೂಪವಾಗಿ ಹೋಗಿದೆ''

''ನಾನು ನಾಳೇನೇ ಹೋಗಿ ಕರೆದುಕೊಂಡು ಬರ್ತೀನಮ್ಮಾ...''

''ಬೇಡ ಬಿಡು... ಇದ್ದಕ್ಕಿದ್ದ ಹಾಗೇ ಅರ್ಜೆಂಟಾಗಿ ಮದುವೆ ಅಂತಂದ್ರೆ ನಾನಾ ರೀತಿಯ ಊಹಾಪೋಹಗಳು ಹುಟ್ಟಿಕೊಳ್ಳುತ್ತವೆ. ದೇವಸ್ಥಾನದಲ್ಲಿ ನಡೆಯೋ ಮದುವೆಗೆ ಬೀಗರನ್ನು ಕರೆಯೋದು ಹೇಗೆ ? ಆಡಿಕೊಂಡು ನಗ್ತಾರೆ ಅಷ್ಟೇ... ಕೈತುಂಬಾ ಹಣವನ್ನಿಟ್ಟುಕೊಂಡು ಅದ್ದೂರಿಯಾಗಿ ಮದುವೆ ಮಾಡಿ, ಬೀಗರಿಗೂ ಉಪಚಾರ ಉಡುಗೊರೆ ಎಲ್ಲಾ ಮಾಡೋ ಹಾಗಿದ್ರೆ ಆ ಮಾತೇ ಬೇರೆ... ರಿಸೆಪ್ಷನ್ ಪಾರ್ಟಿಗೆ ಕರೆಯೋಣ. ಅಷ್ಟು ಹೊತ್ತಿಗೆ ಏನಾದ್ರೂ ಹೇಳಿ ಬಚಾವಾಗಬಹುದು.'' ತಾಯಿಗೆ ಏನೋ ಅತೃಪ್ತಿ ಎಂದು ಅರಿವಾದರೂ ಅವನು ಕೇಳಲಿಲ್ಲ.

''ಗಾಯತ್ರೀನ ಸ್ವಲ್ಪ ಕರಿ. ನಾನು ಅವಳ ಹತ್ತಿರ ಮಾತನ್ನಾಡಬೇಕು... '' ದಿವಾಕರ ಹೊರಬಂದು ಗಾಯತ್ರಿಗೆ ವಿಷಯ ತಿಳಿಸಿದ.

''ಏನಂಟೀ ಕರೆದ್ರಂತೆ... ''ಎಂದು ವಿಶ್ವಾಸವಾಗಿ, ಹಾಸಿಗೆಯ ಮೇಲೆ ಕುಳಿತಾಗ ಆಂಟಿ ಒಂದು ಗಳಿಗೆ ತಡೆದಳು.

'' ಏನು ಹೇಳಿ ಆಂಟೀ.. ಯಾವುದೋ ವಿಷಯ ನಿಮ್ಮನ್ನು ಕೊರೀತಿದೆ.''

''ಬಡತನ ಕೆಟ್ಟದ್ದು ಗಾಯತ್ರಿ... ಸೊಸೆಯಾಗೋಳಿಗೆ ಒಂದು ರೇಶಿಮೆ ಸೀರೆ, ಬಿಂದೆಲೆ ಮಾಂಗಲ್ಯದ ಸರ ತರೋಣ ಅಂತ ಆಸೆಯಿದ್ರೂ, ಲೆಖ್ಖಾಚಾರ ಹಾಕೋ ಪರಿಸ್ಥಿತಿ ನಮ್ಮದು. ಪೂರ್ಣಿಮಾಳ ಸೋದರ ಮಾವ, ಇಪ್ಪತ್ತೈದುಸಾವಿರ ರೂಗಳನ್ನು ವರೋಪಚಾರದ ಖರ್ಚಿಗ ಅಂತ ಕೊಟ್ಟಿದಾರಂತೆ. ಅದರಲ್ಲಿ ನೀನೇ ದಿವಾಕರನ ಜತೆಯಲ್ಲಿ ಹೋಗಿ, ಸೀರೆ, ಸರಗಳನ್ನು ತಂದುಬಿಡು. ಅವನು ಗಂಡು ಹುಡುಗ, ಅವನಿಗೆ ತಿಳಿಯದು.''

''ಓ ಅಷ್ಟೇನಾ ಆಂಟಿ... ನಾನು ಏನೋ ಅಂತ ಹೆದರಿಬಿಟ್ಟಿದ್ದೆ. ನಾಳೇನೇ ಆ ಕೆಲಸವನ್ನು ಮಾಡಿ ಬಿಡ್ತೀನಿ ಯೂ ಡೋಂಟ್ ವರಿ... '' ಗಾಯತ್ರಿ ಹಸನ್ಮುಖದಿಂದ ಹೊರಬಂದಳು

ಶ್ರೀಮತಿಗೆ ಸಂಕೋಚವೆನಿಸಿತ್ತು. ಅವರ ಮನೆಗೆ ಗೆಸ್ಟ್‌ಗಳಂತೆ ಬಂದು, ಅವರ ಮನೆಯಲ್ಲಿಯೇ ಅಡಿಗೆ ಊಟವನ್ನು ಉಪಚಾರಗಳೊಂದಿಗೆ ಮಾಡಿಸಿಕೊಳ್ಳುವುದು ಮುಜುಗುರವನ್ನುಂಟು ಮಾಡಿತ್ತು. ಪೂರ್ಣಿಮಾ ಬ್ಯಾಂಕಿಗೆ ಹೊರಟು ಹೋಗಿದ್ದಳು. ಭಾಸ್ಕರನೂ ಕೆಲಸಕ್ಕೆ ಹೊರಟು ಹೋಗಿದ್ದ. ಕೇಶವ ಒಂದು ದಿನದ ಮಟ್ಟಿಗೆ ಊರಿಗೆ ಹೋಗಿ, ತಕ್ಷಣವೇ ಆದಷ್ಟು ಬೇಗ ವಾಪಸ್ಸು ಬರುವುದಾಗಿ ಹೇಳಿ ಹೊರಟು ಹೋಗಿದ್ದ.

ಗಾಯತ್ರಿ ತಲೆಗೆ ಹರಳೆಣ್ಣೆಯನ್ನು ಒತ್ತಿಸಿಕೊಂಡು ನೀರು ಹಾಕಿಸಿಕೊಂಡಿದ್ದಳು. ದಿವಾಕರ ಷಾಪಿಂಗ್‌ಗೆಂದು ಸಿದ್ಧನಾಗುತ್ತಿದ್ದ. ಅವರಿಬ್ಬರೂ ಅತ್ತ ಅಂಗಡಿ ಕೆಲಸಕ್ಕೆಂದು ಹೊರಟರು. ಶ್ರೀಮತಿ ಒಬ್ಬಳೇ ಕುಳಿತಿದ್ದಳು. ತಾನಾಗಿಯೇ ಆಕೆಯೊಡನೆ ಮಾತನಾಡಲು ಭಯ. ಏನು ಹೇಳಿಬಿಡುವಳೋ... ಏನಾಗಿ ಹೋಗುವುದೋ ಎಂಬ ದಿಗಿಲು. ಆದರೆ ತಲೆ ಮರೆಸಿಕೊಂಡವಳಂತೆ ಕುಳಿತಿರಲೂ ಇಷ್ಟವಿಲ್ಲ. ಅಡಿಗೆ ಮನೆಯ ಕಡೆಗೆ ಬಂದಳು. ಆಕೆ ತರಕಾರಿ ಹೆಚ್ಚುತ್ತಾ ಕುಳಿತಿದ್ದಳು. ಬಾಗಿಲಿಗೆ ಒರಗಿ ನಿಂತು ಕೇಳಿದಳು.

''ನನಗೂ ಏನಾದ್ರೂ ಕೆಲಸವಿದ್ದರೆ ಹೇಳಿ. ನಾನು ಅಡಿಗೆ ಮಾಡ್ಲಾ''

''ಬೇಡಮ್ಮಾ... ಒಂದೆರಡು ದಿನಗಳಿಗಾಗಿ ಗೆಸ್ಟ್ ತರಹ ಬಂದು ಇರೋರು... ನಿಮಗೇಕೆ ತೊಂದರೆ... ನಾನು ಮಾಡ್ತೀನಿ.''

''ತೊಂದರೆ ಏನಿಲ್ಲ... ನಿಮಗೂ ಆರೋಗ್ಯ ಅಷ್ಟು ಚೆನ್ನಾಗಿರಲಿಲ್ಲ ಅಂತ ಪೂರ್ಣಿಮಾ ಹೇಳಿದಳು. ಈಗ ಹೇಗಿದೀರಿ ....?''

''ನಂಗೇನಮ್ಮಾ, ಒಂದಲ್ಲಾ ಒಂದು ಇದ್ದೇ ಇರುತ್ತೆ. ಮುಂಚಿನ ಹಾಗೆ ಮೈ ಬಗ್ಗಿಸಿ ಕೆಲಸ ಮಾಡುಕ್ಕೇ ಆಗುಲ್ಲ. ಅಡಿಗೆ ಮನೆಯ ಕೆಲಸವನ್ನು ಈ ಹುಡುಗಿಯರೇ ಮಾಡಿಕೊಳ್ಳುತ್ತವೆ. ಈಗ ತರಕಾರಿ ಹೆಚ್ಚಿಡ್ತಿದೀನಿ. ಆಮೇಲೆ ಗಾಯತ್ರಿನೆ ಅಡಿಗೆ ಮಾಡ್ತಾಳೆ''

''ಇವತ್ತು ನಾನು ಮಾಡ್ತೀನಿ ಬಿಡಿ. .. ನನಗೂ ಹೊತ್ತು ಹೋಗ್ತಿಲ್ಲ. ಅಲ್ಲದೇ ನನ್ನ ಕೈನ ಅಡಿಗೆ ಹೇಗಿರುತ್ತೆ ಅಂತ ರುಚಿ ನೋಡೋರಂತೆ''

''ಪೂರ್ಣಿಮಾ ಚೆನ್ನಾಗಿ ಮಾಡ್ತಾಳೆ. ಅಂದ ಮೇಲೆ ನಿಮ್ಮ ಕೈನ ಅಡಿಗೆ ಚೆನ್ನಾಗಿಯೇ ಇರುತ್ತೆ.''

''ಪೂರ್ಣಿಮಾ ಇನ್ನೂ ಚಿಕ್ಕವಳು. ಯಾವ ಅನುಭವವೂ ಇಲ್ಲ. ಅವಳಿಂದ ಏನಾದ್ರೂ ತಪ್ಪು ನಡೆದರೆ, ಅದನ್ನು ಹೊಟ್ಟೆಗೆ ಹಾಕ್ಕೊಳ್ಳಿ. ''

''ಅಯ್ಯೋ ಅದನ್ನು ನೀವು ನನಗೆ ಹೇಳಿಕೊಡಬೇಕೇ ? ನನಗೂ ಒಬ್ಬಳು ಮಗಳಿದಾಳೆ. ಮದುವೆಯಾಗಿ ಗಂಡನ ಮನೇಲಿದಾಳೆ. ಅಲ್ಲಿ ಹೇಗಿದಾಳೋ ಅವರು ಹೇಗೆ ನೋಡಿ ಕೊಳ್ತಾರೋ, ನನಗಂತೂ ಒಂದನ್ನೂ ಹೇಳುವುದಿಲ್ಲ. ನಾನು ಕೇಳುವುದೂ ಇಲ್ಲ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಅಂತ ಗಾದೆ ಇದೆಯೋ ಇಲ್ಲವೋ... ಮನೆ ತುಂಬಿಸಿ ಕಳಿಸಿ ಕೊಟ್ಟ ಮೇಲೆ ಆಯ್ತು. ಅದು ಅವಳ ಮನೆ, ಅಲ್ಲಿಯ ಕಷ್ಟ ಸುಖ ಅವಳದ್ದು. ನನ್ನ ಮಗ ಹೋಗಿ ಅವಳನ್ನು ಕರೆತರ್ತೀನಿ ಅಂತಂದ. ನಾನೇ ಬೇಡಾಂತ ಅಂದೆ. ಇದ್ದಕ್ಕಿದ್ದ ಹಾಗೇ ಹೋಗಿ, ನನ್ನ ಮದುವೆ ಬಾ ಅಂತ ಕರೆದ್ರೆ ಅವಳು ಬರ್ತಾಳ್ಯೆ? ಅವರು ಕಳಿಸ್ತಾರ್ಯೇ ?

ಸುಮ್ಮನೆ ನಗೆಪಾಟಲಾಗುತ್ತೆ ಅಷ್ಟೆ. ಅದಕ್ಕೇ ಬೇಡಾಂದೆ... ಅಲ್ಲ ಹೀಗೆ ಅರ್ಜೆಂಟ್ ಮದುವೆಗೆ ನೀವು ಹೇಗೆ ಒಪ್ಪಿಕೊಂಡಿರ್ರೋ... ನಿಮಗೂ ಆಸೆ ಅಕರಾಸ್ತೆ ಇರುಲ್ವೆ ? ನಿಮ್ಮ ನೆಂಟರಿಷ್ಟರನ್ನು ಕರೆಯಬೇಡವೇ ? ತನಗನ್ನಿಸಿದುದನ್ನು ಆಡಿದಳು.''

ಆಕೆಯ ಮಾತುಗಳು ಇವಳನ್ನು ಕಂಗೆಡಿಸಿತು. ತಾನು ಒಂಟಿಯಾಗಿ ಏಕೆ ಉಳಿದೆನೋ, ತಾನೂ ಹೊರಗೆ ಹೊರಟು ಹೋಗಿದ್ದರೆ ಚೆನ್ನಾಗಿತ್ತೆನ್ನಿಸಿತು. ಈಗ ಈಕೆಯ ಮಾತಿನಿಂದ ಪಾರಾಗುವುದು ಹೇಗೆ .... ತಾನಾಗಿಯೇ ಬಂದು ಮಾತಿಗೆ ಸಿಕ್ಕಿ ಬಿದ್ದಂತಾಯಿತಲ್ಲ ಅಂತ ಚಡಪಡಿಸಿದಳು.

''ದಿವಾಕರನಿಗೆ ಹೀಗೆ ಆತುರಾತುರವಾಗಿ ಮದುವೆ ಮಾಡ್ತೀನೀಂತ ನಾನಂತೂ ಅಂದುಕೊಂಡಿರಲಿಲ್ಲ. ಅವನಿಗೋ ಹೆಚ್ಚು ವಿದ್ಯೆ ಇಲ್ಲ... ಒಳ್ಳೆಯ ಉದ್ಯೋಗವಿಲ್ಲ. ನಾನೇ ಅಷ್ಟು ಇಷ್ಟು ಸಂಪಾದಿಸ್ತೀನಿ. ಅದರಿಂದಲೇ ಈ ಮನೆಯ ಖರ್ಚು ತೂಗುತ್ತಿದೆ. ನಮ್ಮಿಬ್ಬರ ಔಷಧೋಪಚಾರದ ಖರ್ಚಂತೂ ಹೇಳತೀರದು. ನಿಮ್ಮ ಮಗಳು ಸಂಪಾದಿಸ್ತಾಳೆ ... ನಮ್ಮ ಖರ್ಚಿಗೆ ಆಗುತ್ತೆ ಅನ್ನೋ ಆಸೆಯಿಂದ ಮಾತ್ರ ಖಂಡಿತಾ ಈ ಮದುವೆಗೆ ಒಪ್ಪಿಲ್ಲ... ಏನೋ ಋಣಾನುಬಂಧ. ಇಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸ್ತಿದ್ದಾರಂತೆ... ಈಗಲೂ ಸಮಯ ಮೀರಿಲ್ಲ. ನಿಮ್ಮ ಮಗಳಿಗೆ ತಿಳುವಳಿಕೆ ಹೇಳಿ, ನಿಮ್ಮ ಅಂತಸ್ತಿಗೆ ತಕ್ಕಂತಹ ವರನನ್ನು ಹುಡುಕಿ, ನಮ್ಮದೇನೂ ಅಭ್ಯಂತರವಿಲ್ಲ. ದಿವಾಕರನಿಗೆ ಒಂದೆರಡು ದಿನ ಬೇಸರವಾಗಬಹುದು, ಕ್ರಮೇಣ ಎಲ್ಲವನ್ನೂ ಮರೆಯುತ್ತಾನೆ.''

ಶ್ರೀಮತಿಗೆ ಉಸಿರು ಕಟ್ಟಿದಂತಾಗಿತ್ತು. ಈ ಹೆಂಗಸೂ ನಮಗಿಂತ ಹೆಚ್ಚು ಯೋಚನೆ ಮಾಡಿದಾಳೆ. ಮಗನ ಪ್ರೀತಿಗೆ ಬೆಲೆ ಕೊಟ್ಟಿರುವುದಾಗಿ ಹೇಳುತ್ತಿದ್ದಾಳೆ. ನಿಜವೇ ಇರಬಹುದು. ಆದರೂ ಮಾತಿನ ಚಾಟಿಯನ್ನು ಬೀಸುತ್ತಿದ್ದಾಳೆ ಎಲ್ಲಿಗೆ ತಗಲುತ್ತೋ..?

''ಬೆಳೆದ ಮಕ್ಕಳು ಪ್ರೀತಿ ಪ್ರೇಮ ಅಂತ ತಲೆ ಕೆಡಿಸಿಕೊಂಡರೆ, ತಂದೆ ತಾಯಿಯರಿಗೆ ಅದರಲ್ಲೂ ತಾಯಿಗೆ, ಧರ್ಮಸಂಕಟ ಒದಗುತ್ತೆ. ಬೇಡಾಂದ್ರೆ ಮಗ ದೂರ ಆಗ್ತಾನೆ. ಬೇಕು ಅಂದರೆ ಹೀಗೆ.... ಅದಕ್ಕೆ ಹತ್ತಾರು ಮುಖಗಳು ; ಈ ದಿವಾಕರನು ಒಬ್ಬ ಹೆಣ್ಣಾಗಿ ಹುಟ್ಟಿದ್ದಿದ್ರೆ ಮದುವೆ ಮಾಡಿ ಅತ್ತೆಯ ಮನೆಗೆ ಕಳಿಸಿ ನಿರಾತಂಕವಾಗಿರುತ್ತಿದ್ದೆವು. ''

''ಬೆಳೆದ ಹುಡುಗನ್ನು ಮನೆಯಲ್ಲಿಟ್ಟುಕೊಂಡು, ಈ ಪೇಯಿಂಗ್ ಗೆಸ್ಟ್‌ಗೆ ಯಾಕೆ ಕೈ ಹಾಕಿದ್ರಿ ಅಂತ ನೀವು ಕೇಳಬಹುದೇನೋ... ಆದರೆ ಇದೊಂದೇ ಉಪಾಯ ನಮಗೆ ಹೊಳೆದದ್ದು. ನಮ್ಮ ಮಗ ಹೆಣ್ಣಿನ ಕಡೆ ಕತ್ತೆತ್ತಿ ನೋಡೋನೇ ಅಲ್ಲ ಅಂತ ಅಂದುಕೊಂಡಿದ್ದೆ. ಅದು ತಪ್ಪು ಅಂತ ಅನ್ನಿಸ್ತಿದೆ. ಪೂರ್ಣಿಮಾ, ಏನೋ ನೋಡೋರ ಕಣ್ಣು ಸೆಳೆಯುವ ಹಾಗಿದಾಳೆ. ಆದರೆ ಈ ದಾಂಡಿಗನಿಗೇಕೆ ಈ ಬುದ್ಧಿ ಹುಟ್ಟಿತೋ... ನಾಲ್ಕು ಕಾಸನ್ನು ಸಂಪಾದಿಸುವ ಯೋಗ್ಯತೆ ಇಲ್ಲ. ಮದುವೆಗೆ ಆತುರ. ನಾಳೆ ಹೆಂಡತೀನ ಸಾಕುವ ಯೋಗ್ಯತೆ ಅವನಿಗಿದೆಯಾ ? ನೋಡಿದೋರೆಲ್ಲಾ ಖಂಡಿತಾ ಆಡ್ಕೋತಾರೆ... ತಮ್ಮ ಕಷ್ಟ ನೀಗಲಿ ಅಂತ, ಸಂಪಾದಿಸುವ ಹುಡುಗೀನ ಬಲೆಗೆ ಹಾಕಿಕೊಂಡರು ಅಂತ... '' ಆಕೆ ಆಡುತ್ತಲೇ ಇದ್ದಳು ,.

ಈಕೆಯ ಮಾತಿಗೆ ಬ್ರೇಕೇ ಇಲ್ಲ... ಮುಂಬಾಗಿಲ ಬೆಲ್ ಬಾರಿಸಬಾರದೇ, ಫೋನ್

ಗಂಟೆ ಹೊಡೆಯಬಾರದೇ, ಗಡಿಯಾರದ ಗಂಟೆ ಸದ್ದು ಮಾಡಬಾರದೇ.. ದೇವರೇ ದೇವರೆ... ಶ್ರೀಮತಿ ದೇವರಲ್ಲಿ ಮೊರೆ ಇಟ್ಟಳು. ಈಕೆ ಹೇಳುವುದರಲ್ಲಿಯೂ ಸತ್ಯವಿದೆ. ಆದರೆ ಈಗ ಎಲ್ಲಾ ಇತ್ಯರ್ಥವಾಗಿದೆ. ಈಗ ನನ್ನೊಡನೆ ಈಕೆ ಇದೆಲ್ಲವನ್ನೂ ಏಕೆ ಹೇಳುತ್ತಿದ್ದಾಳೆ. ಗಾಯತ್ರಿಯೊಡನೆ ಯಾಕೆ ಹೇಳಲಿಲ್ಲ....?

''ನಾನು ಸುಮ್ಮನೇ ಬೇಡವಾದ ಮಾತನ್ನಾಡಿ ನಿಮಗೆ ಬೇಸರವನ್ನುಂಟು ಮಾಡಿದೀನಿ. ಒಂದು ಮದುವೆ ಅಂತಂದ್ರೆ ಬರೀ ಸಮಾರಂಭವಲ್ಲ, ಸಂಬಂಧ.. ಈ ಸಂಬಂಧ ನಿರಂತರವಾಗಿ ಮುಂದುವರೆಯಬೇಕಾದರೆ, ಆಕ್ಷೇಪಣೆಯ ಮಾತುಗಳು ಬರಬಾರದು. ಅದಕ್ಕೇ ಹೇಳಿದೆ ಅಷ್ಟೇ. ಆಸ್ತಿ ಅಂತಸ್ತನ್ನು ನೋಡಿ ವರದಕ್ಷಿಣೆ ಅದೂ ಇದೂ ಕೊಟ್ಟು, ಲೋಪದೋಷಗಳಿಲ್ಲದಂತೆ ನೆರವೇರಿದ ಮದುವೆಗಳೇ ನೆಗೆದು ಬೀಳುತ್ತವೆ. ಹಾಗಾಗಬಾರದು ಅಂತ ನನ್ನಆಸೆ... ನನ್ನ ಮಗನಿಗೆ ಏನು ಕೊಟ್ರೆ, ಏನು ಬಿಟ್ರೆ,... ಉಡುಗೊರೆ ಉತ್ಸವ ಹೇಗೆ ನಡೆಸಿದಿರಿ, ಅದೆಲ್ಲಾ ನನಗೆ ಮುಖ್ಯವಲ್ಲ. ದಿವಾಕರ ಎಷ್ಟಾಗಲೀ ಗಂಡು ಹುಡುಗ. ಅವನಿಗೂ ಸ್ವಾಭಿಮಾನ ಇರುತ್ತೆ. ಸಂಪಾದನೆ ಮಾಡ್ತಿದೀನಿ ಅನ್ನೋ ಒಂದೇ ಕಾರಣದಿಂದ ಪೂರ್ಣಿಮಾ ಅವನಿಗಿಂತ ಮುಂದಿದಾಳೆ. ಆ ಗರ್ವ ಇದ್ದರೆ, ಅವರಿಬ್ಬರ ಜೀವನ ಮುಳ್ಳಾಗುತ್ತದೆ. ಈಗಲೇ ನಿಮ್ಮ ಮಗಳಿಗೆ ತಿಳುವಳಿಕೆ ಹೇಳಿಬಿಡಿ. ಸಂಪಾದಿಸುತ್ತಿದೀನಿ ಅನ್ನೋ ಅಟ್ಟಹಾಸದಿಂದ ಅವಳು ಮೆರೆದರೆ, ಅದು ಅವಳ ಬಾಳಿಗೆ ನರಕವಾಗುತ್ತದೆ. ಈಗ ಅವಳ ಕಾಲ, ನಾಳೆ ನಮ್ಮ ದಿವಾಕರನಿಗೂ ಒಳ್ಳೆಯ ಕಾಲ ಬರುತ್ತದೆ.. ಜೀವನದಲ್ಲಿ ಏರುಪೇರು ಉಂಟಾಗುತ್ತದೆ. ಅದನ್ನು ಇಬ್ಬರೂ ಅರ್ಥ ಮಾಡಿಕೊಳ್ಳಬೇಕು. ದಿವಾಕರನನ್ನು ನಾನು ಅನಗತ್ಯವಾಗಿ ಹೊಗಳಿಕೊಳ್ಳಬೇಕಾಗಿಲ್ಲ, ಅವನು ಅಪರಂಜಿ. ನಿಮ್ಮ ಮಗಳು ಕೆಟ್ಟವಳು ಅಂತ ನಾನು ದೂಷಿಸುತ್ತಿಲ್ಲ. ನಮ್ಮ ಮನೆಗೆ ಸೇರಿದ ಮೇಲೆ ಅವಳೂ ನಮ್ಮವಳೇ... ಇಷ್ಟೆಲ್ಲಾ ಆಡ್ತೀದೀನಿ ಅಂದ್ಕೋಬೇಡಿ. ಮುಂದೆ ಯಾವ ಭಿನ್ನಾಭಿಪ್ರಾಯ ಬರಬಾರದು ಅಂತ ನನ್ನಾಸೆ... ಆದುದರಿಂದಲೇ ಈಗಲೇ ನೇರವಾಗಿ ಮಾತನಾಡಿ ಬಿಟ್ಟಿದೀನಿ... ನೀವು ಏನಂದುಕೊಂಡಿರೋ ಏನೋ... '' ಆಕೆ ತನ್ನ ಮಾತಿಗೆ ಮುಕ್ತಾಯ ಹಾಕಿದಳು. ಶ್ರೀಮತಿ ನಿರಾಳವಾದ ಉಸಿರನ್ನು ಬಿಟ್ಟಳು. ಆದರೂ ಅವಳ ಮನಸ್ಸಿನಲ್ಲಿ ಒಂದು ಅಳುಕು ಇದ್ದೇ ಇತ್ತು. ಈಕೆ ಇಷ್ಟು ಮಾತನಾಡಿದರೂ, ತಾನು ತನ್ನ ಕಡೆಯ ಗುಟ್ಟನ್ನು ಬಿಟ್ಟುಕೊಡಲಿಲ್ಲ. ಪೂರ್ಣಿಮಾ ಡೈವೋರ್ಸಿ ಅಂತ ಈಕೆಗೆ ತಿಳಿಯದಿರುವುದೇ ಒಳ್ಳೆಯದು. ತಿಳಿದರೆ ಈ ಮದುವೆಯನ್ನು ನಿಲ್ಲಿಸಬಹುದು ಅಂತೆನಿಸಿತು. ಆದರೆ ಒಂದಲ್ಲ ಒಂದು ದಿನ ತಿಳಿದರೆ, ನಮ್ಮ ಗ್ರಹಚಾರವನ್ನು ಬಿಡಿಸುವುದು ಖಂಡಿತಾ.... ಆ ದಿವಸಕ್ಕೂ ನಾವು ರೆಡಿಯಾಗಿರಬೇಕು ಅಂತ ಅಂದುಕೊಂಡಳು.

ಗಾಯತ್ರಿ ಇದೇ ಮನೆಯಲ್ಲಿ ಇರುವವರೆಗೆ ಪರವಾಗಿಲ್ಲ... ಅವರುಗಳು ಬೇರೆ ಮನೆಗೆ ಹೊರಟು ಹೋದರೆ ಪೂರ್ಣಿಮಾಳಿಗೆ ಸಪೋರ್ಟ್ ಇಲ್ಲದಂತಾಗುತ್ತದೆ. ಈಗಲಿಂದ ಆ ಯೋಚನೆ ಯಾಕೆ ? ಆದಿನ ಬಂದಾಗ ನೋಡಿಕೊಂಡರಾಯ್ತು ಎಂದು ತನಗೆ ತಾನೇ ಸಮಾಧಾನವನ್ನು ಹೇಳಿಕೊಂಡಳು. ಆದರೂ ಆ ಸಂಜೆ ಮಗಳಿಗೆ, ಮರೆಯದೇ ಎಚ್ಚರಿಕೆ ಹೇಳಿದಳು.

''ಆ ನಿನ್ನ ಆಂಟಿ, ಸಾಮಾನ್ಯ ಹೆಂಗಸಲ್ಲ, ನೀನು ಸ್ವಲ್ಪ ಎಚ್ಚರಿಕೆಯಿಂದ ಇರಬೇಕು.''

''ಆಯ್ತು ಬಿಡಮ್ಮ.... ಯಾವ ವಿಷಯದಲ್ಲಿ ಎಚ್ಚರವಾಗಿರಬೇಕು ...?''

''ಹಣ ಕಾಸಿನ ವಿಷಯದಲ್ಲಿ.. ತನಗೇನೋ ಯಾವ ಆಸೆಯೂ ಇಲ್ಲ ಅಂತ ಆಕೆ ಹೇಳ್ತಾಳೆ. ಆದರೆ ನಾಳೆ ನಿನ್ನ ಸಂಪಾದನೆಯ ಹಣದ ಮೇಲೆ ಕಣ್ಣು ಹಾಕುಲ್ಲ ಅಂತ ಏನು ಗ್ಯಾರಂಟಿ ? ''

''ಯಾರಿಗೆ ಯಾರೂ ಗ್ಯಾರಂಟಿ ಕೊಡಬೇಕಾಗಿಲ್ಲ... ಯಾವಾಗ ಏನು ಬರುತ್ತೋ ಅದನ್ನು ಫೇಸ್ ಮಾಡಿದರಾಯ್ತು.''

''ನಿನ್ನಗಂಡನಾಗೋನಿಗೆ ಉದ್ಯೋಗವಿಲ್ಲ... ಮನೆಯ ಖರ್ಚು ವೆಚ್ಚ ಜಾಸ್ತಿ. ಎಲ್ಲಾ ನಿನ್ನ ತಲೆಯ ಮೇಲೆ ಬೀಳುತ್ತಲ್ಲೇ...''

''ಅದಕ್ಕೇನು ಮಾಡಲಿ ? ''

''ಈಗಲೇ ದಿವಾಕರನಿಗೆ ಕಟ್ಟುನಿಟ್ಟಾಗಿ ಹೇಳಿಬಿಡು.... ಅದೆಲ್ಲಾ ಸಾಧ್ಯವಿಲ್ಲ ಅಂತ. ಏನಾದ್ರೂ ಮಾಡಿಕೊಳ್ಳಲಿ.''

''ಆ ಮಾತು ಬಂದಾಗ ನಾನು ಏನೋ ಹೇಳಿಕೊಳ್ತೀನಿ. ಸುಮ್ಮನೇ ಈಗಲಿಂದ ತಲೆ ಕೆಡಿಸಬೇಡ. .. ಅದಕ್ಕೆ ನಾನು ಮದುವೇನೇ ಬೇಡಾಂತ ಅಂದಿದ್ದು.''

''ಎಲ್ಲಿ ಬೇಡಾಂತ ಅಂದೇ.... ? ಗಾಯತ್ರಿ ಹೇಳಿದ್ದಕ್ಕೆಲ್ಲಾ ಹೂಂ ಹೂಂ ಅಂತ ತಲೆಯಾಡಿಸಿರಬೇಕು. ನೀನು ... ಅವಳು ಗಾಳ ಹಾಕಿದಳು... ''

''ನನ್ನ ಮದುವೆಯಿಂದ ಅವರಿಗೇನು ಲಾಭ ?''

''ಲಾಭವಲ್ಲದೇ ಇನ್ನೇನು ? ಬಸಿರಿ, ಬಾಣಂತಿ ಅಂತ ಎಲ್ಲಾದಕ್ಕೂ ನಿಮ್ಮಗಳನ್ನೇ ಏಳೀತಾಳೆ...''

''ಅದಕ್ಕೆ ಈಗ ಏನು ಮಾಡು ಅಂತೀಯ ..?''

''ಮೊದಲು ಆ ಗಂಡ ಹೆಂಡತಿಯನ್ನು ಇಲ್ಲಿಂದ ಕಳಿಸು.''

''ಅದನ್ನೆಲ್ಲಾ ನಾನು ಮಾಡುಲ್ಲ. ಅದು ನನಗೆ ಸಂಬಂಧಪಟ್ಟ ವಿಷಯವಲ್ಲ. ಅಲ್ಲದೇ ಅವರುಗಳಿಂದ ನನಗೆ ಯಾವ ತೊಂದರೆಯೂ ಇಲ್ಲ. ಇಂಥದ್ದನ್ನೆಲ್ಲ ನೀನು ನನಗೆ ಹೇಳಿ ಕೊಡಲೇ ಬೇಡ...''

''ಪರವಾಗಿಲ್ಲ ಕಣೇ... ನೀನೂ, ಸಾಕಷ್ಟು ಬದಲಾಗಿದೀಯ. ಎಲ್ಲರೂ ಸೇರಿ ನಿನಗೆ ಮಂಕು ಬೂದಿ ಎರಚಿದಾರೆ....''

''ನನಗೆ ತಾನೇ ಮಂಕುಬೂದೀನ ಎರಚಿದ್ದು ? ನೀನೇಕೆ ಒಪ್ಪಿದೆ. ಈ ಮದುವೆಗೆ ? ಕೇಶು ಮಾವ ಹೇಗೆ ಒಪ್ಪಿದರು ? ನಾನು ಡೈವೋರ್ಸಿ, ನನಗೆ ಮದುವೆಯಾಗುವುದು ಕಷ್ಟ, ನಾನು ಹಾಗೇ ಉಳಿದುಕೊಂಡು ಬಿಟ್ಟರೆ, ನಿಮಗೆ ಕಷ್ಟವಾಗುತ್ತೆ, ಇದನ್ನೆಲ್ಲಾ ಆಡಿದೋಳು ನೀನೇ ತಾನೇ ....''

ಶ್ರೀಮತಿ ಈಗ ಮೆತ್ತಗಾದಳು. ಮಗಳಿಗೆ ಏನುತ್ತರ ಕೊಡಬೇಕೆಂದು ತಿಳಿಯಲಿಲ್ಲ.

''ಪರವಾಗಿಲ್ಲ ಬಿಡಮ್ಮಾ, ನೀನು ಅಂದದ್ದನ್ನೆಲ್ಲಾ ಮನಸ್ಸಿನಲ್ಲಿಟ್ಟು ಕೊಳ್ಳುವುದಿಲ್ಲ. ದಿವಾಕರನನ್ನು ಮದುವೆಯಾಗುತ್ತಿರುವುದರಿಂದ ನನಗೆ ಯಾವ ನಷ್ಟವೂ ಇಲ್ಲ. ಹಾಗೆ ನೋಡ್ತಾ ಹೋದರೆ, ಆಂಟಿಗೆ ನಾನೇ ಮೋಸ ಮಾಡ್ತಿದ್ದೇವೆ. ಈಗ ಈ ಕ್ಷಣದಲ್ಲಿಆಂಟಿಗೆ ನಾನು ಡೈವೋರ್ಸಿ ಅಂತ ಗೊತ್ತಾದರೆ ಮದುವೆಯನ್ನೇ ನಿಲ್ಲಿಸಬಹುದು. .... ಡೈವೋರ್ಸ್ ಹೆಣ್ಣನ್ನು ಸೊಸೆ ಅಂತ ಒಪ್ಪಿಕೊಳ್ಳೋಕೆ ಅವರಿಗೆ ತಾನೇ ಇಷ್ಟ ಇರುತ್ತೇನಮ್ಮ ನೀನೇ ಹೇಳು..''

''ಹಣಕಾಸಿನ ವಿಷಯದಲ್ಲಿ ಎಚ್ಚರವಾಗಿರು ಅಂತ ಹೇಳಿದೆ.. ಅದೇ ತಪ್ಪು ಅನ್ನೋ ಹಾಗೆ ಆಡ್ತಿದೀಯಲ್ಲ''

''ಆಂಟಿಗೂ ಒಬ್ಬಳು ಮಗಳಿದಾಳೆ. ಅವಳು ಅತ್ತೆಯ ಮನೆಯಲ್ಲಿ ಸುಖವಾಗಿಲ್ಲ. ಆದರೆ ಆಂಟಿ ಎಂದೂ ಮಗಳ ಪರವಹಿಸಿ ಅವಳ ಅತ್ತೆಯ ಮೇಲೆ ಅಪವಾದ ಹೊರಿಸಿಲ್ಲ.''

''ಓಹೋ... ನನಗೀಗ ಗೊತ್ತಾಯ್ತು. ನಿನಗೀಗಾಗಲೇ ಜಂಭ ಬಂದು ಬಿಟ್ಟಿದೆ. ನನ್ನ ಮಾತುಗಳೇ ನಿನಗೆ ಬೇಕಿಲ್ಲ''

''ನಿನ್ನ ಮಾತುಗಳನ್ನು ಅವಶ್ಯಕತೆ ಇದ್ದಾಗ ಕೇಳಿದ್ದೀನಿ. ಅದರಿಂದ ಲಾಭವೂ ಆಗಿದೆ. ನಷ್ಟವೂ ಆಗಿದೆ... ಆದರೆ ಈಗ್ಯಾಕೋ ನಿನ್ನ ಮಾತುಗಳು ಹಿಡಿಸುತ್ತಿಲ್ಲ. ದಯವಿಟ್ಟು ತಪ್ಪು ತಿಳಕೋಬೇಡ. ''

''ತಪ್ಪು ನನ್ನದೇ ಬಿಡು. ಬೆಳೆದ ಮಕ್ಕಳಿಗೆ, ಅದರಲ್ಲೂ ನಮ್ಮನ್ನು ಅವಲಂಬಿಸಿದೇ ಇರೋರಿಗೆ ತಿಳುವಳಿಕೆ ಹೇಳಬಾರದು.'' ಶ್ರೀಮತಿಯ ಧ್ವನಿ ಗೊರ ಗೊರ ಅಂತಂದಾಗ, ಪೂರ್ಣಿಮಾ ತಾಯಿಯ ಪಕ್ಕ ಬಂದು ಕುಳಿತಳು.

''ಒಂದು ಮದುವೆಯಿಂದ ಸಾಕಷ್ಟು ಹಿಂಸೆಗಳನ್ನು ಅನುಭವಿಸಿದ್ದಾಗಿದೆ. ಈಗ ನನಗೆ ಬೇಕಾಗಿರುವುದು, ಗಂಡನ ಪ್ರೀತಿ, ಗಂಡನ ಒಡನಾಟ... ಎಷ್ಟೇ ಹಣವಿದ್ದರೂ ಅದನ್ನೆಲ್ಲ ಕೊಳ್ಳಲಾಗುವುದಿಲ್ಲ. ಅದು ತಾನಾಗಿಯೇ ಒದಗಬೇಕು. ದಿವಾಕರ ನನ್ನ ಸಂಪಾದನೆಗೋಸ್ಕರ ನನ್ನನ್ನು ಪ್ರೀತಿಸುತ್ತಿಲ್ಲ ಅಂತ ನನಗೆ ಚೆನ್ನಾಗಿ ಗೊತ್ತು. ಒಂದು ವೇಳೆ ಈ ಪ್ರೀತಿ ಸದಾಕಾಲ ಇರುವುದಕ್ಕೆ ನನ್ನ ಹಣವನ್ನು ಕೊಡಬೇಕಾಗಿ ಬಂದರೂ, ನಾನು ಅದಕ್ಕೆ ಕೇರ್ ಮಾಡುವುದಿಲ್ಲ. ಆ ಚಂದ್ರ ಕೊಟ್ಟ ಜೀವನಾಂಶದ ಹಣವನ್ನು ನಾನು ನಿನಗೇ ಕೊಡ್ತೀನಿ. ಅದನ್ನು ನಿನಗೆ ಹೇಗೆ ಬೇಕೋ ಹಾಗೆ ಖರ್ಚು ಮಾಡ್ಕೋ, ನಾನು ಏನೂ ಕೇಳುವುದಿಲ್ಲ'' ಪೂರ್ಣಿಮಾ ತಾಯಿಯ ಕೈಗಳನ್ನು ತನ್ನ ಕೈಗಳಲ್ಲಿ ತೆಗೆದು ಕೊಂಡಳು.

''ಈ ಮದುವೇನೂ ಸಕ್ಸೆಸ್ ಆಗಲಿಲ್ಲ ಅಂತಂದ್ರೆ, ನಿನ್ನ ಮಗಳು ಖಂಡಿತಾ ಬದುಕಿರುಲ್ಲಮ್ಮ... ಆತ್ಮಹತ್ಯೆ ಮಾಡಿಕೊಂಡು ಬಿಡ್ತಾಳೆ.''

''ಥೂ ಬಿಡ್ತು ಅನ್ನು, ಮದುವೆಗೆ ಮುಂಚೆಯೇ ಅಪಶಕುನದ ಮಾತುಗಳೇಕೆ? ಅಂತ ಸ್ಥಿತಿ ಬರದಿರಲಿ. ನಿನ್ನ ತಾಯಿ ಬದುಕಿರುವವರೆಗೂ ನೀನು ಇಂಥ ಕೆಟ್ಟ ಆಲೋಚನೆಗಳನ್ನು ಮಾಡಬಾರದು.''

''ಹಾಗಾದರೆ ಇದೇ ಕಡೇ, ಇನ್ನೆಂದೂ, ನೀನು ನನ್ನ ಸಂಸಾರದ ವಿಷಯಗಳನ್ನು

ಕೆದಕಿ ಕೇಳಬಾರದು. ಹೇಳುವಂತಹ ವಿಷಯವಾದರೆ ನಾನೇ ಹೇಳ್ತೀನಿ. ನನ್ನ ನಿನ್ನ ಸಂಬಂಧ ಚೆನ್ನಾಗಿರಬೇಕೂಂತ ಇದ್ರೆ, ನೀನು ಈ ಮಾತನ್ನು ನಡೆಸಿಕೊಡಬೇಕು ....ನನ್ನಾಣೆ'' ಎನ್ನುತ್ತಾ ಅವಳ ಕೈಯ್ಯನ್ನು ತನ್ನ ತಲೆಯ ಮೇಲಿಟ್ಟುಕೊಂಡಳು.

''ಇಷ್ಟು ಸಣ್ಣ ವಿಷಯಕ್ಕೆ ಆಣೆ ಪ್ರಮಾಣ ಏಕೆ ? ಬೇಡಾಂದ್ರೆ ಬೇಡ. ನಿನ್ನ ಸುದ್ಧಿಗೇ ನಾನು ಬರುಲ್ಲ.'' ಅವಳಿಗೂ ತುಸು ಕೋಪ ಬಂದಿತ್ತು.

''ಇದು ಕೋಪದ ಮಾತು... ಇನ್ನು ಸಾಕು ಬಿಡು''ಎನ್ನುತ್ತಾ ಆ ಜಾಗದಿಂದ ಎದ್ದಳು. ಶ್ರೀಮತಿ ಮಗಳನ್ನೇ ವಿಚಿತ್ರವಾಗಿ ನೋಡಿದಳು.

ರಾತ್ರಿ ಊಟದ ಸಮಯದಲ್ಲಿ ಆಂಟಿ, ತಾನು ತನ್ನ ಸೊಸೆಗೆಂದು ತಂದಿರುವ ಮಾಂಗಲ್ಯದ ಸರವನ್ನು, ರೇಶಿಮೆ ಸೀರೆಯನ್ನು ಎಲ್ಲರಿಗೂ ತೋರಿಸಿದಳು. ದಿವಾಕರನೆಡೆಗೆ ಪೂರ್ಣಿಮಾ ತನ್ನ ನೋಟವನ್ನು ಹರಿಸಿದಳು. ಅವನು ಮುಗುಳ್ನಕ್ಕ. ಅವಳಲ್ಲಿ ಮಿಂಚು ಹರಿದಂತಾಯಿತು. ಇದು ಪ್ರೀತಿ. ಈ ಪ್ರೀತಿಯಲ್ಲಿ ತಾಯಿ ಏನು ಕುಂದನ್ನು ಕಂಡಳು ? ತಾಯಿಯ ಕಡೆ ನೋಡಿದಳು. ಮನಸ್ಸು ಕಸಿವಿಸಿಕೊಂಡಿತು. ಇನ್ನು ನಾಲ್ಕಾರು ಸೀರೆಗಳಿದ್ದವು. ಗಾಯತ್ರಿ ಒಂದೊಂದನ್ನೇ ತೆಗೆದು ತೋರಿಸಿದಳು. ಇದು ಆ ಆಂಟಿಗೆ, ಇದು ಈ ಆಂಟಿಗೆ, ಇದು ನನಗೆ, ಇದು ದಿವಾಕರನ ತಂಗಿಗೆ, ಇದು ಅವಳ ಅತ್ತೆಗೆ.

ದಿವಾಕರ ಕಣ್ಣು ಸನ್ನೆಯಲ್ಲಿಯೇ ಪೂರ್ಣಿಮಾಳಿಗೆ, ನಾನು ನಿನ್ನ ಹತ್ತಿರ ಸ್ವಲ್ಪ ಮಾತನಾಡಬೇಕು ಅಂತ ತಿಳಿಸಿದ. ಅದನ್ನು ಗಾಯತ್ರಿ ಗಮನಿಸಿದಳು. ಅವಳ ಗಂಡ ಭಾಸ್ಕರನಿಗೆ ಪಿಸುದನಿಯಲ್ಲಿ ಹೇಳಿ, ಅವರಿಬ್ಬರನ್ನು ಹೊರಕ್ಕೆ ಕರೆಯುವಂತೆ ತಿಳಿಸಿದಳು. ಮೊದಲು ಭಾಸ್ಕರ ದಿವಾಕರನನ್ನು ಎಬ್ಬಿಸಿಕೊಂಡು ಹೊರಹೋದ. ಕೆಲವೇ ನಿಮಿಷದ ನಂತರ, ಭಾಸ್ಕರನನ್ನು ಕರೆಯುವಂತೆ ಪೂರ್ಣಿಮಾಳನ್ನು ಹೊರಕ್ಕೆ ಕಳುಹಿಸಿದಳು ಗಾಯತ್ರಿ. ಭಾಸ್ಕರ ಮತ್ತೆ ಬಂದು ಕುಳಿತು, ಮಾತಿನಲ್ಲಿ ಸೇರಿಕೊಂಡ.

''ತಂಗಾಳಿ ಹಿತವಾಗಿದೆ, ಅಷ್ಟು ದೂರ ವಾಕಿಂಗ್ ಹೋಗಿ ಬರೋಣ ಬರ್ತೀರಾ ? '' ದಿವಾಕರ ಕೇಳಿದ.

''ಇಷ್ಟು ಹೊತ್ನಲ್ಲಿ? ಹತ್ತು ಗಂಟೆಯಾಗುತ್ತಾ ಬಂದಿದೆ.... ಯಾರಾದ್ರೂ ನೋಡಿದ್ರೆ ಏನಂದುಕೊಳ್ತಾರೆ ?''

''ಯಾರು ನೋಡಿದರೆ ನಮಗೇನು ? ನಾಳೆಯವರೆಗೆ ನಾವು ಪ್ರೇಮಿಗಳು..... ನಾಡಿದ್ದರಿಂದ ನಾವು ದಂಪತಿಗಳು... ಎನ್ನುತ್ತಾ ಅವಳ ಕೈ ಹಿಡಿದ.''

''ದಂಪತಿಗಳು ಪ್ರೇಮಿಗಳಾಗಿರಬಾರದು ಅಂತಾ ಏನಾದ್ರೂ ಇದೆಯಾ ? ''

''ಇಲ್ಲ, ಖಂಡಿತಾ ಇಲ್ಲ''ಎನ್ನುತ್ತಾ ಅವಳ ಭುಜವನ್ನು ಬಳಸಿದ. ...

''ನಾನು ಸುಮ್ಮನಿದೀನಿ ಅಂತ ಅದರ ಅಡ್ವಾಂಟೇಜ್ ತಗೋತಿದೀರಿ ಇದು ರಸ್ತೆ .... ನೆನಪಿರಲಿ.''

''ನಾನೇನು ಮಾಡಲಿ ? ರೋಮಾನ್ಸ್‌ಗೆ ಈ ವೆದರ್ ತುಂಬಾ ಚೆನ್ನಾಗಿದೆ. .. ನೀಲಿಯಾಕಾಶ, ನಕ್ಷತ್ರಗಳು, ಈ ತಂಗಾಳಿ ... ಆಹಾಹಾ... ಬೆಚ್ಚಗೆ... ಆಹಾಹಾ ''

ಅವಳು ಹುಸಿಕೋಪದಿಂದ ಅವನನ್ನು ತಳ್ಳಿದಳು.

''ನಿಮ್ಮ ಈ ರೋಮಾನ್ಸನ್ನೆಲ್ಲಾ ನಾಡಿದ್ದಿನ ತನಕ ಮನಸ್ಸಲ್ಲಿ ಯೋಚಿಸಬೇಡಿ. ನಾಳೆ ಒಂದು ದಿನ ಅಷ್ಟೇ... ''

''ಕದ್ದು ಮುಚ್ಚಿ ಮಾಡುವ ಈ ರೋಮಾನ್ಸ್‌ನಲ್ಲಿ ಒಂಥರಾ ಥ್ರಿಲ್ ಇರುತ್ತೆ. ನಾಡಿದ್ದಿನ ರೋಮಾನ್ಸ್‌ನಲ್ಲಿ ಈ ಮಜಾ ಎಲ್ಲಿರುತ್ತೆ? '' ಕುಡಿನೋಟ ಬೀರಿದ.

ಯಾಕೆ ? ಎಂದು ಕೇಳುವ ತವಕವಾದರೂ ತಡೆದುಕೊಂಡಳು. ನಾಡಿದ್ದಿನ ರಾತ್ರಿ ಫಸ್ಟ್‌ನೈಟ್.... ಆ ರಾತ್ರಿ ಇವನಿಗೆ ನನ್ನ ಬಗ್ಗೆ ಏನನ್ನಿಸಬಹುದು ? ನನ್ನನ್ನು ಏನು ಪ್ರಶ್ನೆಗಳನ್ನು ಕೇಳಬಹುದು ! ಮೈ ಕೊಡವಿಕೊಂಡಳು.

''ಯಾಕೆ ಪೂರ್ಣಿಮಾ, ಚಳಿಯಾಗುತ್ತಿದೆಯಾ ?... ಮನೆಗೆ ವಾಪಸ್ಸು ಹೋಗೋಣ್ವಾ''

ಅವನು ಅಷ್ಟು ಕೇಳಿದ್ದೇ ಸಾಕು ಎಂಬಂತೆ ಮನೆಯ ಕಡೆ ಹೆಜ್ಜೆ ಹಾಕಿದಳು. ಅವನೂ ಅವಳನ್ನು ಹಿಂಬಾಲಿಸಿದ. ಇಬ್ಬರನ್ನೂ ಪ್ರಶ್ನಾರ್ಥಕವಾಗಿ ನೋಡಿದಳು ಗಾಯತ್ರಿ... ಪೂರ್ಣಿಮಾಳ ಕದಪುಗಳು ಕೆಂಪೇರಿರಲಿಲ್ಲ, ಅವಳ ತುಟಿಗಳು ಅದುರುತ್ತಿರಲಿಲ್ಲ, ದಿವಾಕರನ ಕಣ್ಣುಗಳಲ್ಲಿ ನಿರಾಸೆಯ ಛಾಯೆಯಿದ್ದುದನ್ನು ಗಮನಿಸಿದಳು. ಪೂರ್ಣಿಮಾಳಲ್ಲಿ ಏನೋ ಅಧೈರ್ಯವಿದೆ, ಅವಳಿನ್ನು ಈ ಮದುವೆಗೆ ಸಿದ್ಧಳಾಗಿಲ್ಲ, ಮದುವೆಯ ರಾತ್ರಿಯೇ ಇವರಿಬ್ಬರಲ್ಲಿ ವಿರಸ ಮೂಡಿದರೆ... ದಿವಾಕರ ಕಾತುರತೆಯಿಂದ ಆ ರಾತ್ರಿಯನ್ನು ನಿರೀಕ್ಷಿಸುತ್ತಿರಬಹುದು. ಈ ಹುಡಿಗಿಯೋ ನಿರಾಸೆಯ ಕೊಡದಂತೆ ಇದಾಳೆ. ಅವನ ಆಸೆಗಳಿಗೆ ತಣ್ಣೀರೆರಚಿದರೆ...?

ಆ ರಾತ್ರಿ ಗಾಯತ್ರಿ ಭಾಸ್ಕರನೊಡನೆ ಮಾತನಾಡಿ, ತಮ್ಮ ಫಸ್ಟ್‌ನೈಟ್ ಕಳೆದ ಹೋಟೆಲ್ಲಿನಲ್ಲಿಯೇ ಇವರಿಬ್ಬರಿಗೂ ರೂಮನ್ನು ಬುಕ್ ಮಾಡಿಸಬೇಕೆಂದು ಹೇಳಿದಳು.

''ನೀನ್ಯಾಕೆ ಇಷ್ಟು ಒದ್ದಾಡ್ತೀಯೋ ನನಗೆ ಗೊತ್ತಿಲ್ಲ... ಅವರಿಬ್ಬರೂ ಚಿಕ್ಕವರಲ್ಲ....''

''ಚಿಕ್ಕವರಲ್ಲ, ಆದರೆ ಪೂರ್ಣಿಮಾ ಈ ಮದುವೆಗೆ ಪ್ರಿಪೇರ್ ಆಗಿಲ್ಲ ಅಂತಲೇ ನನಗೆ ಅನ್ನಿಸುತ್ತಿದೆ. ಹೀಗೆ ಇದ್ದರೆ ದಿವಾಕರನಿಗೆ ನಿರಾಸೆಯಾಗುವುದು ಖಂಡಿತಾ. ''

''ಹೋಟೆಲ್ಲಿನಲ್ಲಿ ಫಸ್ಟ್ ನೈಟ್ ಕಳದ್ರೆ ಎಲ್ಲಾ ಸರಿ ಹೋಗುತ್ತಾ? ನೀನೇನು ಕಮ್ಮಿ ಸತಾಯಿಸಿದೆಯಾ ?''

''ನಮ್ಮಿಬ್ಬರ ಮಾತು ಬೇರೆ ಭಾಸ್ಕರ್... ಅರ್ಥ ಮಾಡಿಕೊಳ್ಳಿ... ನಮ್ಮಿಬ್ಬರಿಗೂ ಮೊದಲನೇ ಮದುವೆ... ನಾನು ಬೇಕು ಬೇಕೂಂತ ಸತಾಯಿಸಿದೆ. ನೀವು ಎಂಟು ವರ್ಷ ನನ್ನನ್ನು ಸತಾಯಿಸಲಿಲ್ವಾ ? ''

''ಒಬ್ಬರನ್ನೊಬ್ಬರು ಸತಾಯಿಸಿದ್ರೂ, ಆ ರಾತ್ರಿ ನಮ್ಮ ಅಮರ ಪ್ರೇಮಕ್ಕೆ ಸಾಕ್ಷಿ, ನಮ್ಮಿಬ್ಬರ ಪ್ರೇಮದಲ್ಲಿ ಅಮೃತವಿತ್ತು. ಮಧುರವಿತ್ತು. ಎಲ್ಲಕ್ಕಿಂತಲೂ ಹೆಚ್ಚಾಗಿ ವಿಶ್ವಾಸವಿತ್ತು. ಗೌರವವಿತ್ತು. ''

''ಸಾಕು, ಸಾಕು... ಎಲ್ಲಾ ಇತ್ತು ನಂಗೂ ಗೊತ್ತು. ನೀವು ಈಗ ಒಂದು ಕೆಲಸ ಮಾಡಿ. ಹೊರಗೆ ಹೋಗಿ ಮಲಕ್ಕೊಳ್ಳಿ... ನಾನು ಅರ್ಜೆಂಟಾಗಿ, ಪೂರ್ಣಿಮಾಳಿಗೆ ಕೆಲವು

ಸಲಹೆಗಳನ್ನು ಕೊಡಬೇಕು.''

''ನಿನ್ನ ತಲೆ ! ನಿನ್ನ ಸಲಹೆಯ ಅಗತ್ಯವೇನಿದೆ ! ನಿನಗಿಂತ ಮೊದಲೇ ಮದುವೆಯಾಗಿದ್ದವಳು. ಅವಳಿಗೆ ಸಾಕಷ್ಟು ಅನುಭವವಿದೆ. ಬೇಕಾದರೆ ದಿವಾಕರನಿಗೆ ಹೇಳಿ ಕೊಡ್ತಾಳೆ. ''

''ಥೂ ಇಷ್ಟು ಕೀಳಾಗಿ ಮಾತನಾಡಬೇಡಿ. ಅವಳಿಗೆ ಎರಡನೇ ಮದುವೆ ಆಗಿರುವುದೇ ಈಗ ಸಮಸ್ಯೆ. ಅವಳು ಆ ಹಳೆಯ ಅನುಭವಗಳನ್ನು ಮರೆತಿಲ್ಲ, ಅದು ಇವರಿಬ್ಬರ ಮಧುರ ರಾತ್ರಿಯನ್ನು ಕೆಡಿಸಬಾರದು ಅಂತ ನನ್ನ ಆಸೆ....''

'' ಈಚೀಚೆಗೆ, ನಿನ್ನ ಆಸೆಗಳ ಮೇಲೇ ನಿನ್ನ ಗಮನ ಜಾಸ್ತಿಯಾಗಿದೆ.'' ಎನ್ನುತ್ತಾ ಅವಳ ತುಸು ಉಬ್ಬಿದ ಹೊಟ್ಟೆಯ ಮೇಲೆ ಕೈಯಾಡಿಸಿದ. ನನ್ನ ಆಸೆಯ ಬಗ್ಗೆ ನಿನಗೆ ಆಸಕ್ತಿಯೇ ಇಲ್ಲ,

''ಥೂ ಹೋಗೀಪ್ಪಾ.. ನನಗೆ ನಾಚಿಕೆಯಾಗುತ್ತೆ. ನಮ್ಮ ಮಗು, ನಿಮ್ಮ ಮಾತನ್ನೆಲ್ಲಾ ಕೇಳಿಸಿಕೊಳ್ಳುತ್ತಿದೆ. ..''

''ಸದಾ ನಮ್ಮಿಬ್ಬರ ಮಾತನ್ನು ಕದ್ದು ಕೇಳೋಕೆ, ಅವನೇನು ಅಭಿಮನ್ಯುನ.... ಸುಮ್ಮನೆ ಮಲ್ಕೋ ಅಂತ ಹೇಳು...''

''ಹುಂ ಆಗಲಿ ಹೇಳ್ತೀನಿ. ಈಗ ನೀವು ಹೊರಗೆ ಹೋಗಿ ಮಲಗ್ತೀರಾ ?''

''ನಾನು ನಿನ್ನ ಗಂಡ ಕಣೇ... ಹೀಗೆ ರೂಮಿನಿಂದ ಹೊರಕ್ಕೆ ದಬ್ಬಿ ಕಳಿಸಬೇಡಾ.. ಒಳ್ಳೇದಲ್ಲ...''

''ಸರಿ ಇಲ್ಲೇ ಬಿದ್ಕೊಳ್ಳಿ. ನಾನು ನಾಳೆ ರಾತ್ರಿ ಅವಳ ಹತ್ರ ಮಾತನಾಡ್ತೀನಿ...''

''ಅಂತೂ ನಿನ್ನ ಸತಾಯಿಸುವ ಗುಣ ಹೋಗಿಲ್ಲ ಎನ್ನುತ್ತಾ ಅವಳನ್ನು ತನ್ನೆಡೆಗೆ ಎಳೆದುಕೊಂಡ. ಅವಳೂ ಅವನಿಗೆ ತಗುಲದಂತೆ ಅವನನ್ನು ತಳ್ಳಿದಳು. ''

''ದೂರ... ದೂರ... ''ಅವಳು ಅಟ್ಟಿದಳು. ಅವನು ಅವಳ ಮಾತಿಗೆ ಬೆಲೆ ಕೊಡಲಿಲ್ಲ.. ದೂರವೂ ಹೋಗಲಿಲ್ಲ, ''ಷ್... ಸುಮ್ಮನೆ ನನ್ನನ್ನು ಬೈಯಬೇಡ.. ನಿನ್ನ ಮಗನೂ ಅದನ್ನೇ ಕಲಿತುಬಿಡ್ತಾನೆ'' ಎನ್ನುತ್ತಾ ಅವಳ ಬಾಯಿ ಮುಚ್ಚಿದ.

ಮಾರನೇ ದಿನವೂ ಗಾಯತ್ರಿಗೆ ಪೂರ್ಣಿಮಾಳಗೆ ಕಿವಿ ಮಾತುಗಳನ್ನು ಹೇಳಲು ಸಮಯ ಸಿಗಲಿಲ್ಲ, ಪೂರ್ಣಿಮಾ ಬ್ಯಾಂಕಿಗೆ ಹೋಗಿರಲಿಲ್ಲ, ಅವಳು ದಿವಾಕರನೊಂದಿಗೆ ರೆಡಿಮೇಡ್ ಬಟ್ಟೆ ಅಂಗಡಿಗೆ ಹೋಗಿದ್ದಳು.

''ದಿವಾಕರ, ಪಂಚೆ, ಜುಬ್ಬಾ ಸಾಕು ಎಂದಿದ್ದ, ಆದರೆ ಪೂರ್ಣಿಮಾಳೇ ಬಲವಂತದಿಂದ ತುಂಬು ತೋಳಿನ ಷರ್ಟುಗಳನ್ನು ಕೊಡಿಸಿದ್ದಳು. ''

''ನಿಮಗೆ ಈ ಕಲರ್ ತುಂಬಾ ಒಪ್ಪುತ್ತೆ'' ಎಂದು ಹೇಳಿ ಬಿಸ್ಕತ್ ಹಾಗೂ ಕ್ರೀಂ ಕಲರಿನ ಷರ್ಟುಗಳನ್ನು ಖರೀದಿಸಿದಳು. ಆ ಎರಡೂ ಷರ್ಟುಗಳಿಗೆ ಒಪ್ಪುವ ಪ್ಯಾಂಟ್‌ಗಳನ್ನು ಕೊಂಡಿದ್ದಾಯಿತು.

''ಸೂಟು , ಜೀನ್ಸ್ ಪ್ಯಾಂಟ್ ಯಾವುದೂ ಬೇಡ ಅಂತೀರಿ... ಬರ್ಮುಡಾ

ತಗೊಳ್ಳಿ... '' ಕೀಟಲೆ ಧ್ವನಿಯಲ್ಲಿ ಹೇಳಿದ್ದಳು.

''ಥೂ, ಬರ್ಮುಡಾ ಗಿರ್ಮುಡಾ ನನಗೆ ಬೇಡಪ್ಪಾ'' ಮುಖ ಹುಳ್ಳಗೆ ಮಾಡಿದ.

''ಅದು ಲೇಟೆಸ್ಟ್ ಫ್ಯಾಶನ್ ದಿವಾಕರ್... ಇರಲಿ ಒಂದೆರಡು''

''ನೀವು ಮಿನಿ ಸ್ಕರ್ಟ್ ಹಾಕ್ಕೊಳ್ಳೋದಾದ್ರೆ, ನಾನೂ ಬರ್ಮುಡಾ ಟ್ರೈ ಮಾಡಬಹುದು.....'' ಕೀಟಲೆಯ ಧ್ವನಿಯಲ್ಲಿ ಕೇಳಿದ.

''ಮಿನಿಸ್ಕರ್ಟ್, ಮ್ಯಾಕ್ಸಿ, ಜೀನ್ಸ್ ಎಲ್ಲಾ ಹಾಕ್ಕೋತಿದ್ದೆ. ಅದೊಂದು ಕಾಲ ಇತ್ತು. ಈಗ ಚೂಡಿದಾರ್ ಕಂಫರ್ಟಬಲ್ ಅಂತ ಅನ್ನಿಸುತ್ತೆ ನನಗೆ.''

''ನಿಮಗೆ ಚೂಡಿದಾರ್‌ಗಿಂತ, ಸೀರೆ ಚೆನ್ನಾಗಿ ಒಪ್ಪುತ್ತೆ ಪೂರ್ಣಿಮಾ... ಸೀರೆ ಯಲ್ಲಿ ನೀವು ಯುವತಿಯಂತೆ ಕಾಣ್ತೀರಿ. ಚೂಡಿದಾರ್ ಹಾಕ್ಕೊಂಡಾಗ ಓದೋಕೆ ಹೋಗೋ ಹುಡುಗಿಯರ ತರಹ ಕಾಣ್ತೀರಿ.. ತುಂಬಾ ಚಿಕ್ಕೋರ ತರಹ.''

''ಯಾಕೆ ? ನಾನು ಯಂಗಾಗಿ ಕಾಣೋದು ನಿಮಗಿಷ್ಟವಿಲ್ವಾ ?''

''ಹಾಗೇನಿಲ್ಲ... ನೀವು ಹೇಗೆ ಕಂಡರೂ ನನಗೆ ಚೆನ್ನವೇ. ಆದರೆ ಬೇರೆಯವರು ನಿಮ್ಮ ಮೇಲೆ ಕಣ್ಣು ಹಾಕಿದರೆ, ನನಗೆ ಸಹಿಸುಲ್ಲ ''

''ನಾನು ಬ್ಯಾಂಕ್ನಲ್ಲಿ ಹತ್ತಾರು ಜನಗಳ ಜೊತೆ ಕೆಲಸ ಮಾಡೋಳು. ಒಬ್ಬೊಬ್ಬರ ದೃಷ್ಟಿ ಒಂದೊಂದು ಥರ ಇರುತ್ತೆ. ಅದಕ್ಕೆಲ್ಲಾ ಕೇರ್ ಮಾಡುಕ್ಕೆ ಆಗುತ್ಯೆ....''

''ಹಾಗಲ್ಲ ನಾನು ಹೇಳಿದ್ದು... ಡೀಸೆಂಟ್ ಆಗಿ ಡ್ರೆಸ್ ಮಾಡಿಕೊಂಡಿದ್ದರೆ, ನೋಡೋರ ದೃಷ್ಟಿಕೋನವೂ ಬದಲಾಗಿರುತ್ತೆ.''

''ಅಂದ್ರೆ... ಸೀರೆ ತುಂಬಾ ಡೀಸೆಂಟ್ ಆಗಿರುತ್ತೆ. ಅದನ್ನೇ ನಿತ್ಯ ಉಟ್ಕೋ ಅಂತ ತಾನೇ ನಿಮ್ಮ ಅರ್ಥ. ಚೂಡಿದಾರ್ ಸಹ ಅಷ್ಟೇ ಡೀಸೆಂಟ್ ಆಗಿರುತ್ತೆ.''

''ಹೋಗಲಿ ಬಿಡಿ, ಹೆಂಗಸರ ಉಡುಗೆ ಬಗ್ಗೆ ನನಗೇನು ತಿಳಿಯುತ್ತೆ ! ನನಗೆ ಅನ್ನಿಸಿದ್ದನ್ನು ಹೇಳಿದೆ ಅಷ್ಟೇ... ನಿಮಗೆ ಯಾವ ಉಡುಗೆ ಇಷ್ಟವೋ ಅದನ್ನೇ ಧರಿಸಿಕೊಳ್ಳಿ. ಆದರೆ ನಾನು ಕೊಡಿಸಿದ್ರೆ ಮಾತ್ರ ಸೀರೇನೇ ಕೊಡಿಸೋದು. ''

''ಒಳ್ಳೆ ದಿವಾಕರ್ ನೀವು... ಒಟ್ನಲ್ಲಿ ಹೆಂಡತಿಗಿಂತ, ಹೆಂಡತಿ ಉಡೋ ಸೀರೆಗೆ ಬೆಲೆ ಕೊಡ್ತೀರಿ ಅಂತಾಯ್ತು...'' ಅಂತ ಹೇಳಿ ಅವನ ಕೈ ಹಿಡಿದು ಮನಸಾರೆ ನಕ್ಕಳು. ನಗುತ್ತಿದ್ದವಳನ್ನೇ ಮನಸಾರೆ ನೋಡಿದ. ನಾಳೆಯಿಂದ ಇವಳು ನನ್ನವಳು. ಆ ಭಾವನೆಯೇ ಅವನ ಮನದಂಗಳದಲ್ಲಿ ಬಣ್ಣ ಬಣ್ಣದ ರಂಗೋಲಿಯನ್ನು ಬರೆದವು...

''ಎಕ್ಸ್‌ಕ್ಯೂಸ್ ಮಿ....'' ಹಿಂದಿನಿಂದ ಕೇಳಿಬಂದ ಧ್ವನಿಗೆ ಪೂರ್ಣಿಮಾ ಹಿಂತಿರುಗಿದಳು. ನಿಂತ ನೆಲವೇ ಕುಸಿದ ಅನುಭವವಾಯಿತು.... ದಿವಾಕರನೂ ಎಚ್ಚೆತ್ತ..

''ಇತ್ಲಾಗೆ ಬನ್ನಿ ಪೂರ್ಣಿಮಾ.... '' ಪೂರ್ಣಿಮಾ ಅವನ ಇನ್ನೊಂದು ಪಕ್ಕಕ್ಕೆ ಬಂದು ನಿಂತಳು.

''ಓ ಪೂರ್ಣಿಮಾ.... ಹಲೋ ... ಹೇಗೀದೀಯಾ ?'' ಚಂದ್ರ ಮಾತನಾಡಿಸಿದಾಗ ಅವಳಿಗೆ ಉಸಿರು ಕಟ್ಟಿದಂತಾಗಿತ್ತು. ಉತ್ತರಿಸಬೇಕೆನಿಸಲಿಲ್ಲ.

"ನಾನು ಪೂರ್ಣಚಂದ್ರಅಂತ... ನಾನು ಪೂರ್ಣಿಮಾಳ ಎಕ್ಸ್ ಹಸ್ಬಂಡ್." ತಾನಾಗಿಯೇ ಪರಿಚಯ ಹೇಳಿಕೊಂಡ. ದಿವಾಕರ ಪೂರ್ಣಿಮಾಳ ಕಡೆ ನೋಡಿದ. ಅವಳ ಮುಖದ ಕಳೆಯೇ ಇಳಿದು ಹೋಗಿತ್ತು. ದಿಢೀರನೇ ಇವನು ಯಾಕೆ ಪ್ರತ್ಯಕ್ಷನಾದ ಅಂತನ್ನಿಸಿತ್ತು... ಆದರೂ ಸಾವರಿಸಿಕೊಂಡಳು.

"ನಾನು ದಿವಾಕರ್.... ಪೂರ್ಣಿಮಾರ ವುಡ್‌ಬೀ..." ಎಂದು ತನ್ನ ಪರಿಚಯ ಮಾಡಿಕೊಂಡ.

" ಓ... ವ್ಹಾಟ್‌ಎ ಸರ್ಪೈಸ್... ನನಗೆ ಈ ವಿಷಯ ಗೊತ್ತಿರಲೇ ಇಲ್ಲ, ಎನಿವೇ ಕಂಗ್ರಾಚುಲೇಷನ್ಸ್... ಯಾವಾಗ ಮದುವೆ ?"

"ನಾಳೇನೇ ನಮ್ಮ ಮದುವೆ..."

"ಹ್ಹಾ... ಹ್ಹಾ... ಮತ್ತೆ ನನಗೆ ಇನ್ವಿಟೇಷನ್ ಕೊಡಲೇ ಇಲ್ಲ...."

"ಬನ್ನೀ ದಿವಾಕರ್ ಹೊತ್ತಾಯ್ತು ಹೋಗೋಣ... " ಅವಳು ಆತುರ ಪಡಿಸಿದಾಗ ಚಂದ್ರ ನಕ್ಕ.

"ಪರವಾಗಿಲ್ಲ ಪೂರ್ಣಿಮಾ... ನಿನ್ನ ಫೀಲಿಂಗ್ಸ್ ನನಗೂ ಅರ್ಥವಾಗುತ್ತೆ. ಆಫ್ಟರ್ ಆಲ್ ನಾನ್ಯಾರು, ನಿನ್ನ ಎಕ್ಸ್ ಹಸ್ಬೆಂಡ್. ಆದರೆ ನನ್ನ ಮದುವೆ ರಿಸೆಪ್ಶನ್‌ಗೆ ನೀವು ಇಬ್ಬರೂ ಖಂಡಿತಾ ಬರಬೇಕು ತಪ್ಪಿಸ್ಕೋಬಾರದು."

ದಿವಾಕರನಿಗೆ ಏನನ್ನಾದರೂ ಹೇಳುವ ಅವಕಾಶವನ್ನು ಕೊಡದೆ ಪೂರ್ಣಿಮಾ ಅವನ ಕೈ ಹಿಡಿದೆಳೆದಳು. ಇಬ್ಬರೂ ಕೌಂಟರ್ ಬಳಿಗೆ ಬಂದರು. ಅಷ್ಟರಲ್ಲಿ ಅಂಗಡಿಯವನು ಬಿಲ್ ರೆಡಿ ಮಾಡಿ, ಷರ್ಟು ಪ್ಯಾಂಟುಗಳನ್ನು ಪ್ಯಾಕ್ ಮಾಡಿಸಿದ್ದ. ಪೂರ್ಣಿಮಾ ತಾನೇ ದುಡ್ಡನ್ನು ಕೊಟ್ಟು ರಶೀದಿ ಪಡೆದಳು. ಇದೆಲ್ಲವನ್ನು ಚಂದ್ರ ನಿಂತಲ್ಲೇ ಗಮನಿಸಿದ.

ಪೂರ್ಣಿಮಾ ಪೂರಾ ಬೆವೆತು ಹೋಗಿದ್ದಳು. ರಿಕ್ಷಾದ ಒಳಗೆ ಕುಳಿತ ಮೇಲೆ ಸೆರಗಿನಿಂದ ಗಾಳಿಯನ್ನು ಬೀಸಿಕೊಂಡಲು.

"ಕೂಲ್‌ಡ್ರಿಂಕ್ಸ್, ಎಳನೀರು ಏನಾದ್ರೂ ಬೇಕಾ ...."

"ಏನೂ ಬೇಡ ಸೀದಾ ಮನೆಗೆ ಹೋಗೋಣ...."

"ಯಾಕೆ ಎಕ್ಸೈಟ್ ಆಗಿದೀರಾ ? .... ಆ ಮನುಷ್ಯ ಸಿಕ್ಕಿದ ಅಂತ್ಲಾ... ಅವನನ್ನು ಮರೆಯದೇ ಇದ್ದರೆ ಹೇಗೆ ?" ಅವಳ ಅಂಗೈಯೊಳಗೆ ತನ್ನ ಕೈ ತೂರಿಸಿದ.

"ಎಲ್ಲಾ ಮರೆತಿದೀನಿ ದಿವಾಕರ್. ಆದ್ದರಿಂದಲೇ ತಾನೇ ನಿಮ್ಮನ್ನು ಮದುವೆಯಾಗುವ ತೀರ್ಮಾನ ಮಾಡಿದ್ದು. ಆದರೆ ಮಧ್ಯೆ ಬಂದು, ನನ್ನ ಮೂಡ್‌ನೇ ಕೆಡಿಸಿಬಿಟ್ಟ ಹಾಳಾದೋನು....."

"ಬಿಡಿ... ನಿಮ್ಮ ಮೂಡ್‌ನ ಸರಿಮಾಡೋಕೆ ನಾನು ಇಲ್ಲೇ ಇದೀನಲ್ಲ.... ಯಾವುದಾದರೂ ಹೋಟೆಲ್ಲಿಗೆ ಹೋಗೋಣ್ವಾ ?"

"ಪ್ಲೀಸ್.. ಈಗ ಎಲ್ಲಿಗೂ ಬೇಡ. ಮೊದಲು ಮನೆಗೆ ಹೋಗೋಣ."

"ಹುಂ. ಸರಿ, ಮನೆಗೇ ಹೋಗೋಣ. ಆದರೆ, ಹೀಗೆ ಮುಖ ಕೆಡಿಸಿಕೊಂಡಿದ್ರೆ

ಅವರೆಲ್ಲಾ ಏನಂದುಕೊಳ್ತಾರೆ ? ನಾನೇನೋ ಮಾಡಿಬಿಟ್ಟೆ ಅಂತ ಅಂದ್ಕೊಳ್ತಾರೆ ಅಷ್ಟೇ... ಪ್ಲೀಸ್.... ಸ್ವಲ್ಪ ನಗುಮುಖ ಎಂದ. ಅವಳು ನಕ್ಕಂತೆ ಮಾಡಿದಳು. ಅವನು ಅವಳ ಕಿವಿಯಲ್ಲಿ 'ಐ ಲವ್ ಯೂ ಪೂರ್ಣಿಮಾ' ...ಎಂದ. ರಿಕ್ಷಾದಿಂದ ಇಳಿದು ಮನೆಯೊಳಕ್ಕೆ ಹೆಜ್ಜೆ ಇಡುವ ಮೊದಲು ಮತ್ತೆ ಜ್ಞಾಪಿಸಿದ. ''

''ಇವತ್ತೇ ಕಡೆ, ಇನ್ನೆಂದೂ ಹೀಗೆ ಮೂಡ್ ಕೆಡಿಸಿಕೊಳ್ಳಬಾರದು.. ನನಗೆ ಇಷ್ಟವಾಗುವುದಿಲ್ಲ.''

''ಪ್ರಯತ್ನ ಪಡ್ತೀನಿ ದಿವಾಕರ್... '' ಭರವಸೆಯ ಧ್ವನಿಯಲ್ಲಿ ನುಡಿದಳು.

''ನಾಳೆಯಿಂದ ನಮ್ಮಿಬ್ಬರ ಜೀವನದ ಹೊಸ ಅಧ್ಯಾಯ ಪ್ರಾರಂಭವಾಗುತ್ತದೆ. ನಿಮ್ಮ ಹಳೆಯ ನೆನಪಿನ ಗಂಟುಗಳನ್ನೆಲ್ಲಾ ಮೂಟೆ ಕಟ್ಟಿ ಎಸೆದುಬಿಡಿ. ಇನ್ನು ಮುಂದೆ ನಿಮ್ಮ ಬಾಳಿನಲ್ಲಿ ನಾನು ಮಾತ್ರ... ಕೇವಲ ನಾನು ಮಾತ್ರ... ತಿಳೀತಾ?''

''ಹು....''ಎಂದು ತಲೆಯಾಡಿಸಿದಳು. ಇಬ್ಬರೂ ಮನೆಯೊ ಳಗೆ ಬಂದರು.

''ರಾತ್ರಿಯೆಲ್ಲಾ ಹೊರಳಾಡಿದಳು ಪೂರ್ಣಿಮಾ. ಪದೇ ಪದೇ ಚಂದ್ರ ಎದುರಿಗೆ ಬಂದು ನಿಂತು ನಕ್ಕಂತೆ ಅನ್ನಿಸಿದೊಡನೆ ಫಕ್ಕನೆ ಎಚ್ಚರವಾಗುತ್ತಿತ್ತು. ಈ ಚಂದ್ರನಿಂದ ತನಗೆ ಬಿಡುಗಡೆಯೇ ಇಲ್ಲವೇ ? ಅವನ ನೆನಪು ಹೀಗೆ ಕಾಡುತ್ತಿದ್ದರೆ, ತಾನು ದಿವಾಕರನೊಂದಿಗೆ ಹೇಗೆ ಸುಖವಾಗಿರಬಲ್ಲೆ...? ದಿವಾಕರ ಒಳ್ಳೆಯವನು. ಆದರೆ, ಅವನ ಒಳ್ಳೆತನವನ್ನು ತಾನು ದುರುಪಯೋಗ ಪಡಿಸಿಕೊಳ್ಳುವುದೇ ? ಈ ಆಲೋಚನೆಗಳಲ್ಲೇ ರಾತ್ರಿ ಕಳೆಯಿತು. ಬೆಳಗಿನ ಝಾವದ ಹೊತ್ತಿಗೆ ನಿದ್ದೆ ಬಂದಂತಾಗಿದ್ದಾಗ, ಶ್ರೀಮತಿ ಎಬ್ಬಿಸಿದಳು.

''ಪೂರ್ಣಿಮಾ ಏಳೇ... ಅಣ್ಣ ಅತ್ತಿಗೆ ಬಂದಿದಾರೆ...''

''ಹೌದೇನಮ್ಮಾ... ಅಪ್ಪ ಬರಲಿಲ್ವಾ ?''

''ಇಲ್ಲ ಕಣೇ. ಅಷ್ಟು ಸುಲಭವಾಗಿ ಅವರೆಲ್ಲಿ ಬರ್ತಾರೆ. ಯಾವುದಾದ್ರೂ ಕೆಲಸಕ್ಕೆ ಅವರನ್ನು ಒಪ್ಪಿಸೋದೇ ಒಂದು ಯಾಗ .''

''ಹೋಗಲಿ ನಿಮ್ಮೇನಾದ್ರೂ ಬರಬಹುದಿತ್ತಲ್ಲ.''

''ನಿಮ್ಮಗೆ ಏನೋ ಟೆಸ್ಟಂತೆ... ನಿಧಾನವಾಗಿ ಬರ್ತಾಳೆ ಬಿಡು.'' ಮಾವ ಹೇಳಿದಾಗ ಅವಳು ನಂಬಲೇಬೇಕಾಯಿತು. ಆದರೂ ಮನಸ್ಸಿಗೆ ಮುದವೆನಿಸಲಿಲ್ಲ.

''ನಾನು ಹೋಗಿ ಅಣ್ಣ ಅತ್ತಿಗೆಗೆ ಕಾಫಿ ಮಾಡಿಕೊಂಡು ಬರ್ತೀನಿ.'' ಶ್ರೀಮತಿ ಕೆಳಗಿಳಿದಳು. ಅಷ್ಟರಲ್ಲಿ ಗಾಯತ್ರಿಯೂ ಎದ್ದು ಬಂದಿದ್ದಳು. ಶ್ರೀಮತಿ ಕಾಫಿಯನ್ನು ಬೆರೆಸುತ್ತಿರುವಾಗ ದಿವಾಕರನೂ ಎದ್ದು ಅಡಿಗೆಯ ಮನೆಗೆ ಬಂದ.

''ಅಣ್ಣ ಅತ್ತಿಗೆ ಇಬ್ಬರೂ ಊರ್ನಿಂದ ಈಗ ತಾನೇ ಬಂದರು. ಅವರಿಗೆ ಕಾಫಿ ಮಾಡ್ತಾ ಇದೀನಿ.''

''ನನಗೂ ಕಾಫಿ ಕೊಡಿ ಆಂಟಿ... ಯಾಕೋ ಸಣ್ಣಗೆ ತಲೆನೋವು. ರಾತ್ರಿಯೆಲ್ಲಾ ನಿದ್ದೆ ಇಲ್ಲ...'' ಶ್ರೀಮತಿ ಅವನಿಗೂ ಕಾಫಿ ಬೆರೆಸಿಕೊಟ್ಟು, ನಾಲ್ಕಾರು ಕಪ್‌ಗಳಲ್ಲಿ ಕಾಫಿಯನ್ನು ಹಾಕಿಕೊಂಡು ಮಹಡಿ ಹತ್ತಿದಳು.

''ದಿವಾಕರ ಆಗ್಻ೆ ಎದ್ದು ಬಿಟ್ಟಿದಾರೆ. ರಾತ್ರಿಯೆಲ್ಲಾ ನಿದ್ದೆಯಿಲ್ಲವಂತೆ. ತಲೆನೋವು ಅಂತ ಅಂದ್ರು... ಅವರಿಗೂ ಕಾಫಿ ಕೊಟ್ಟೆ.. ಏಳೇ ಪೂರ್ಣಾ ನೀನೂ ಕಾಫಿ ಕುಡಿ, ನಿದ್ದೆ ಮಂಪರು ಹೋಗುತ್ತೆ.. ''

''ನಾನು ಈಗ ಬಂದೆ ಎನ್ನುತ್ತಾ ಗಾಯತ್ರಿ ಕಾಫಿ ಕಪ್‌ನೊಂದಿಗೆ ಕೆಳಗಿಳಿದು ಬಂದಳು. ದಿವಾಕರ ತಾಯಿಯ ರೂಮಿನಲ್ಲಿ ಕುಳಿತಿದ್ದ. ಆಕೆ ಎದ್ದು ಬಚ್ಚಲು ಮನೆಗೆ ಹೋಗಿದ್ದಳು.''

''ಏನ್ರೀ ರಾತ್ರಿಯೆಲ್ಲಾ ಜಾಗರಣೆ ಅಂತೆ... ಹಾಗಾದ್ರೆ ಈ ರಾತ್ರೀ.....''

ದಿವಾಕರ ನಾಚಿದ. ''ಯಾಕೋ ನಿದ್ದೆ ಬರಲಿಲ್ಲ. ಇವತ್ತು ರಾತ್ರಿ ಗಡದ್ದಾಗಿ ನಿದ್ದೆ ಹೊಡೆದರಾಯ್ತು. ಏನೀಗ ?''

''ಏನಂತಮ್ಮಾ ? ಏನಂತೆ ? ಯಾಕೋ ತಲೆನೋವು ಅಂತಿದಾನೆ. ಇನ್ನು ಮುಂದೆ ಇದ್ದೇ ಇದೆಯಲ್ಲ ತಲೆನೋವು. ಇದುವರೆಗೂ ಆರಾಮವಾಗಿದ್ದ. ಇನ್ನು ಜವಾಬ್ದಾರಿ ಹೆಚ್ಚುತ್ತೆ... ಅದೇ ಚಿಂತೆ... ಅವನಿಗೆ'' ಆಂಟಿ ರೂಮಿಗೆ ಬಂದಲು.

''ಹಾಗೇನಿಲ್ಲ ಆಂಟೀ..... ಮದುವೆ ಅಂದರೆ ಒಂಥರ ಎಕ್ಸೈಟ್‌ಮೆಂಟ್ ಅಲ್ವಾ ? ಅದಕ್ಕೆ ನಿದ್ದೆ ಬಂದಿಲ್ಲ. ತಲೆನೋಯ್ತಿದೆ. ಅಲ್ಲಿ ನೋಡಿ, ನಮ್ಮ ಮದುಮಗಳೂ ಸಹ ರಾತ್ರಿಯೆಲ್ಲಾ ನಿದ್ದೆ ಮಾಡಿಲ್ಲವಂತೆ. .. '' ನಕ್ಕಳು.

''ಏನು ಮದುವೆಯ ಸಡಗರವೋ... ದಿಬ್ಬಣವಿಲ್ಲ, ದಂಡು ಇಲ್ಲ, ಮದುವೆಯ ಮನೆ ಅನ್ನೋ ಕಳೆಯೇ ಇಲ್ಲ. ಬಾಗಿಲು ಮುಂದೆ ಹಸಿರು ತೋರಣ ಚಪ್ಪರವಿಲ್ಲ. ವಾದ್ಯ ಮೇಳಗಳ ಗದ್ದಲವಿಲ್ಲ. ಸರಭರ ಓಡಾಡೋ ಹೆಣ್ಣು ಮಕ್ಕಳ ಸಂಭ್ರಮವಿಲ್ಲ. ಪಡ್ಡೆ ಹುಡುಗರ ಹರಟೆ ಕೇಕೇ ಇಲ್ಲ... ಮನೆಯೆಲ್ಲಾ ಭಿಂ ಅಂತಿದೆ. ಹುಂ... ಇದೂ ಒಂದು ಮದುವೆ, ಅಪರೂಪದ ಮದುವೆ, ಹಿಂದೆ ಕಂಡಿರಲಿಲ್ಲ, ಮುಂದೆ ಏನು ಕತೆಯೋ?...'' ದಿವಾಕರ ಪೆಚ್ಚಾದ. ತಾಯಿ ಹೀಗೆಲ್ಲಾ ಗಾಯತ್ರಿ ಮುಂದೆ ಆಡುವಳೆಂದುಕೊಂಡಿರಲಿಲ್ಲ. ಗಾಯತ್ರಿಯ ಕಡೆ ನೋಡಿದ. ಅವಳೂ ಗಲಿಬಿಲಿಗೊಂಡಿದ್ದಳು.

''ಹಾಗಾದ್ರೆ ಮದುವೇನ ಮುಂದಕ್ಕೆ ದೂಡೋಣ್ವಾ ಆಂಟಿ ?''

''ಬೇಡಮ್ಮಾ... ನಡೆಯೋ ಮಂಗಳ ಕಾರ್ಯಕ್ಕೆ ನಾನೇಕೆ ಅಡ್ಡಿ ಬರಲಿ ? ಏನೋ ನನಗೆ ಅನ್ನಿಸಿದ್ದನ್ನು ಹೇಳಿದೆ... ನನ್ನ ಗಂಡನಿಗೆ ಇವುಗಳ ಪರಿಜ್ಞಾನವೇ ಇಲ್ಲ, ಮಗಳು ಬಂದಿಲ್ಲ ... ಏನೋ ಒದರಿಕೊಂಡೆ ಅಷ್ಟೇ.... ಹೀಗೆ ಒಂದು ಸನ್ನಿವೇಶ ಒದಗಿ ಬರುತ್ತೋ ಅಂತ ನಾನಂತೂ ಅಂದುಕೊಂಡಿರಲಿಲ್ಲ.''

''ನಿಜ ಹೇಳಿ ಆಂಟೀ, ನಿಮ್ಮ ಮನಸ್ಸಿಗೆ ಸಮ್ಮತವಿಲ್ಲದಿದ್ದರೆ, ಮದುವೆಯ ದಿನವನ್ನು ಮುಂದಕ್ಕೆ ಹಾಕಿಸೋಣ. ನಾವು ಯಾರಿಗೂ ತಿಳಿಸಿಲ್ಲ, ಯಾರನ್ನೂ ಕರೆದಿಲ್ಲ.''

''ಅದೆಲ್ಲಾ ಏನೂ ಬೇಡಾಂತ ಅಂದ್ನಲ್ಲ, ನನ್ನ ಮನಸ್ಸಿನಲ್ಲಿ ಯಾವ ಅಸಮಾಧಾನವೂ ಇಲ್ಲ, ಏಳೋ ದಿವಾಕರ...ಹಣೆಗೆ ಬೊಟ್ಟು ಇಟ್ಟು ಎಣ್ಣೆ ಒತ್ತಿದ ಶಾಸ್ತ್ರ ಮಾಡ್ತೀನಿ. ಆ ಹುಡಿಗಿಗೂ ಎಣ್ಣೆ ನೀರು ಹಾಕ್ಕೋ ಅಂತ ಹೇಳಬೇಕಾಗಿತ್ತು. ''

"ಅವರ ಅಮ್ಮ ಇದಾರೆ ಸೋದರತ್ತೆ ಊರ್ನಿಂದ ಬಂದಿದಾರೆ.."

"ಅಣ್ಣ ಅತ್ತಿಗೆ ಬಂದಿದಾರಾ ? ಯಾಕೆ ಅಪ್ಪ ಬರಲಿಲ್ವಾ ?"

"ಅಪ್ಪ ಮದುವೆಯ ಹೊತ್ತಿಗೆ ಬರ್ತೀನಿ ಅಂತ ಅಂದಿದಾರಂತೆ. ಹೇಗೂ ದೇವಸ್ಥಾನದ ಮದುವೆ. ನಮ್ಮ ಮದುವೆಯ ತರಹ. ಅಲ್ಲಿ ಮದುಮಗ, ಮದುಮಗಳಿಬ್ಬರಿದ್ದರೆ ಸಾಕು. ತುಂಬಾ ಸಿಂಪಲ್ಲು. ಹಾರ ಹಾಕಿಸೋದ, ತಾಳಿ ಕಟ್ಟಿಸೋದ, ಸಪ್ತಪದಿ ತುಳಿಸೋದುಇಷ್ಟೇ ಕಲಾಪ....."

"ಸಾಕು ಬಿಡು. ಉರುಟಣೆ, ಉಯ್ಯಾಲೆ ಕೇಳೋಕೆ, ನೋಡೋಕೆ ಯಾರಿಗೆ ಬಿಡುವಿದೆ ! ದಿವಾಕರನ ಅಪ್ಪಇಲ್ಲೇ ಇದ್ದರೂ, ಹಸೆಮಣೆಯ ಮೇಲೆ ಕುಳಿತುಕೊಳ್ಳುವ ಭಾಗ್ಯ ಅವರಿಗಿಲ್ಲ, ಆತ ಬಂದೇ ಇಲ್ಲ. ಅದೇನು ಆಗುತ್ತೋ ಹಾಗೇ ಆಗಲಿ.... ಹುಂ ಮೇಲೆ ಬಾಯ್ಲರ್ ನೀರು ಕಾದಿದೆಯೋ ಅಂತ ನೋಡು.. ಮೇಲೆ ನೀರು ಕಾದಿಲ್ಲದೇ ಇದ್ದರೆ, ಇಲ್ಲೇ ಕೆಳಗೆ ಬಂದು ಸ್ನಾನ ಮಾಡಿ ಅಂತ ಹೇಳಿಬಿಡಮ್ಮ... ಏಳೋ ದಿವು ಅಪ್ಪನಿಗೆ ಮೊದಲು ಸ್ನಾನ ಮಾಡಿಸಿ ಬಿಡೋಣ... ಆಮೇಲೆ ಬಿಡುವಾಗುಲ್ಲ..."

"ಅವರಲ್ಲಿ ಎಣ್ಣೆ ಶಾಸ್ತ್ರದ ಪದ್ಧತಿ ಇದ್ದರೆ,ಇಲ್ಲಿಗೆ ಬರಲಿ. ಎರಡು ಬೇರೆ ಬೇರೆ ಹಸೆಮಣೆಗಳನ್ನು ಹಾಕಿ, ಇಬ್ಬರಿಗೂ ಎಣ್ಣೆ ಒತ್ತಿ ಮುತ್ತೈದೆಯರು ಆರತಿ ಮಾಡಿ." ಗಾಯತ್ರಿ ಈ ಸಂದೇಶವನ್ನು ಮಹಡಿಯಲ್ಲಿದ್ದವರಿಗೆ ತಲುಪಿಸಿದಳು.

ಮೊದಲು ದಿವಾಕರನನ್ನು ಹಸೆ ಮಣೆಯ ಮೇಲೆ ಕೂಡಿಸಿ ಆರತಿಯನ್ನು ಎತ್ತಿ ನಂತರ ಎಣ್ಣೆ ಒತ್ತಿದರು. ದಿವಾಕರ ಖುಷಿಯಿಂದ ಎಲ್ಲವನ್ನೂ ಮಾಡಿಸಿಕೊಂಡ. ಗಾಯತ್ರಿಗೆ ಸಂತೋಷವಾಗಿತ್ತು.

"ನೋಡಿ , ನಮ್ಮ ಮದುಮಗ ಎಷ್ಟು ಜಾಲಿಯಾಗಿದಾರೆ..." ದಿವಾಕರನ ಬೆನ್ನುತಟ್ಟಿ ಹೊಗಳಿದಳು. ಪೂರ್ಣಿಮಾ ಯಾವ ಭಾವನೆಯನ್ನು ಹೊರಗೆಡವದೇ ಸಪ್ಪಗೆ ಕುಳಿತಿದ್ದಳು.

"ತುಂಬಾ ಎಣ್ಣೆ ಒತ್ತಬೇಡಿ ಅತ್ತಿಗೆ. ಅವಳ ತಲೇಲಿ ಬೇಗ ಎಣ್ಣೆ ಹೋಗುವುದಿಲ್ಲ. ತಲೇಲಿ ಎಣ್ಣೆ ಹಾಗೇ ಉಳಿದು ಬಿಟ್ಟರೆ ಶೀತವಾಗುತ್ತದೆ" ಶ್ರೀಮತಿ ತನ್ನ ಅತ್ತಿಗೆಗೆ ಹೇಳಿದಳು.

"ಇದು ಕೊಬ್ಬರಿ ಎಣ್ಣೆ ಅಂತ ಕಾಣುತ್ತೆ. ಹರಳೆಣ್ಣೆ ಅಲ್ಲ."

"ನಾವ್ಯಾರೂ ಹರಳೆಣ್ಣೆಯನ್ನು ಉಪಯೋಗಿಸುವುದೇ ಇಲ್ಲ, ಅದು ಶೀತ" ಆಂಟಿ ನುಡಿದಾಗ ಯಾರೂ ಮಾತನಾಡಲಿಲ್ಲ, ಮತ್ತೆ ಅವಳೇ ನುಡಿದಳು.

"ನಾನು ಬೇಗ ಸ್ನಾನ ಮಾಡಿ ಉಪ್ಪಿಟ್ಟು ಸಜ್ಜಿಗೆ ಮಾಡಿ ಬಿಡ್ತೀನಿ. "

"ನಾನೂ ಬೇಗ ಸ್ನಾನ ಮಾಡಿಕೊಂಡು ಬಂದು ಬಿಡ್ತೀನಿ. ಇಬ್ಬರೂ ಸೇರಿ ಮಾಡೋಣ." ಶ್ರೀಮತಿ ನುಡಿದಳು. ಅಲ್ಲಿಗೆ ಸ್ವಲ್ಪ ವಾತಾವರಣ ಹಗುರಾಗಿತ್ತು. ಎಲ್ಲರೂ ಉತ್ತೇಜಿತಗೊಂಡರು. ಮತ್ತೊಮ್ಮೆ ಎಲ್ಲರಿಗೂ ಕಾಫಿ ಸಮಾರಾಧನೆಯಾತ್ತು.

ಒಬ್ಬೊಬ್ಬರಾಗಿ ಎಲ್ಲರ ಸ್ನಾನವೂ ಮುಗಿಯಿತು. ತಿಂಡಿ ಕಾಫಿ. ಉಪಚಾರವೂ ಆಯಿತು. ಪೂರ್ಣಿಮಾಳನ್ನು ಹಸೆ ಮಣೆಯ ಮೇಲೆ ಕೂರಿಸಿ, ಅವಳಿಗಾಗಿ ತಂದಿದ್ದ ಸೀರೆಯನ್ನು ಕೊಟ್ಟರು. ಪೂರ್ಣಿಮಾ ಅದನ್ನೇ ಉಟ್ಟು ಸಿದ್ಧಳಾದಳು. ಹಸಿರು ಬಣ್ಣದ ಒಡಲಿನ

ಕೆಂಪು ಅಂಚಿನ ಸೀರೆ, ಒಡಲಲ್ಲಿ ಕೆಂಪು ಹೂಗಳು, ಕೆಂಪು ಬಣ್ಣದ ಝರಿಯ ಸೆರಗು... ಕೆಂಪು ಬಣ್ಣದ ರವಿಕೆಯನ್ನು ತೊಟ್ಟಿದ್ದಳು. ಕೇಶವನ ಹೆಂಡತಿ ಪಂಕಜ, ತನ್ನದೇ ಕೆಲವು ಒಡವೆಗಳನ್ನು ತಂದಿದ್ದಳು. ಆ ಸೀರೆ ರವಿಕೆಗೆ ಒಪ್ಪುವ ಒಡವೆಯನ್ನು ತೊಡಿಸಿದಳು. ಪೂರ್ಣಿಮಾ ತನ್ನ ಉದ್ದನೆಯ ಕೇಶರಾಶಿಯನ್ನು ಗಂಟಿಲ್ಲದಂತೆ ಸಿಕ್ಕು ಬಿಡಿಸಿಕೊಂಡು, ಅಳ್ಳಕವಾಗಿ ಜಡೆ ಹಾಕಿಕೊಂಡಳು. ಮುಡಿಯನ್ನು ಹೂವಿನಿಂದ ಶೃಂಗರಿಸಿದ್ದಾಯಿತು. ಕೈಗಳಿಗೆ ಹಸಿರು ಕೆಂಪಿನ ಗಾಜಿನ ಬಳೆಗಳನ್ನು ತೊಟ್ಟಿದ್ದಳು. ಹಣೆಯಲ್ಲಿ ಕೆಂಪನೆಯ ಕುಂಕುಮ. ಮದುಮಗಳ ಮುಖದ ರಂಗು ಏರಿತ್ತು. ಗಾಯತ್ರಿ, ಅವಳ ಕೆನ್ನೆಗಳನ್ನು ತಡವಿ, ನೆಟ್ಟಿಗೆಯನ್ನು ತೆಗೆದಳು.

''ನಮ್ಮ ಮದುಮಗಳು ರೆಡಿ... ಮದುಮಗ ರೆಡೀನಾ ಅಂತ ನೋಡಿ ಬರ್ತೀನಿ ಅಂತ ಕೆಳಗಿಳಿದಳು.''

''ಅದೆಷ್ಟು ಸಾರಿ, ಹತ್ತಿ ಇಳಿದು ಮಾಡ್ತೀಯಮ್ಮಾ... ಬಸಿರಿ ಹುಡುಗಿ, ಆಯಾಸವಾಗುತ್ತೆ.. ಅಲಂಕಾರ ಎಲ್ಲಾ ಮುಗಿಸ್ಕೊಂಡು ಒಂದೇ ಸಲಕ್ಕೆ ಇಳಿಯಬಾರದಾ?''

ತಾಯಿಯ ಮಾತು ದಿವಾಕರನ ಕಿವಿಗೆ ಬಿತ್ತು. ಬಸಿರಿ ಹುಡುಗಿ ಯಾರು ? ಕುತೂಹಲದಿಂದ, ರೂಮಿನಿಂದ ಇಣುಕಿದ. ಗಾಯತ್ರಿ ಪ್ರತ್ಯಕ್ಷಳಾದಳು. ಮೇಲಿನಿಂದ ಕೆಳಗೆ ಅವಳನ್ನೇ ದೃಷ್ಟಿಸಿ ನೋಡಿದ. ಅವನಿಗೆ ಯಾವ ಸೂಚನೆಯೂ ಕಾಣಲಿಲ್ಲ, ಆದರೆ ಅವಳನ್ನು ಕೇಳುವುದು ಹೇಗೆ ?

''ಏನ್ರೀ ನೀವಿನ್ನು ಹೀಗೇ ಲುಂಗಿ ಉಟ್ಕೊಂಡು ತಿರುಗಾಡ್ತಾ ಇದೀರಲ್ಲ, ನಮ್ಮ ಮದುಮಗಳು ಆಗಲೇ ರೆಡಿ... ನಿಮಗೆ ಅವಳ ಹೆಲ್ಪ್ ಬೇಕಾ ಕಳಿಸ್ಲಾ.... ? '' ಕಣ್ಣು ಹೊಡೆದು ಪ್ರಶ್ನಿಸಿದಳು.

''ಏನೂ ಬೇಡ ಇನ್ನು ಹತ್ತು ನಿಮಿಷ ನಾನು ರೆಡಿಯಾಗಿ ಬಿಡ್ತೀನಿ.''

''ದೇವಸ್ಥಾನದೋರು ನಮಗೋಸ್ಕರ ಕಾಯ್ತಾ ಇರ್ತಾರೆ. ಸಮಯಕ್ಕೆ ಸರಿಯಾಗಿ ಹೋಗೋದು ಒಳ್ಳೇದಲ್ವಾ !...''ಗಾಯತ್ರಿ ನುಡಿದಳು.

''ಅದೇನು ನಿನ್ನ ಆಫೀಸೇ... ಸಮಯಕ್ಕೆ ಸರಿಯಾಗಿ ಎಲ್ಲರೂ ಹಾಜರಾಗಿರುಕ್ಕೆ... ಒಂದು ನಿಮಿಷ ಹಿಂಚು ಮುಂಚೆ .... '' ಭಾಸ್ಕರ ನುಡಿದ.

''ನೋ... ಟೈಮು ಅಂದ್ರೆ ಟೈಮು.... ಡಿಸಿಪ್ಲೀನ್ ಇರಬೇಕು. ಪಂಕ್ಚ್ಯುಯಾಲಿಟಿ ಇರಬೇಕು. ... ''

''ಇರಬೇಕು...ಇರಬೇಕು... ಇನ್ನು ನಾಲ್ಕು ತಿಂಗಳು ಕಳೀಲಿ, ನಿನ್ನ ಡಿಸಿಪ್ಲೀನ್, ಪಂಕ್ಚ್ಯುಯಾಲಿಟಿ ಎಲ್ಲಾ ಎಗರಿ ಹೋಗುತ್ತೆ.'' ಹೆಂಡತಿಯನ್ನು ಗೇಲಿ ಮಾಡಿದ. ಅವರಿಬ್ಬರ ಸರಸ ಸಂಭಾಷಣೆಯನ್ನೇಆಲಿಸುತ್ತಾ ದಿವಾಕರ ಸಿದ್ಧನಾದ. ಗರಿಗರಿಯಾದ ಹೊಸ ಬಿಳಿಯ ಪಂಚೆ, ಮೇಲೆ ತುಂಬು ತೋಳಿನ ಬಿಳಿಯ ಷರಟು, ತಲೆಯನ್ನು ಒಪ್ಪವಾಗಿ ಬಾಚಿಕೊಂಡು, ಕನ್ನಡಿಯಲ್ಲಿ ತನ್ನನ್ನೊಮ್ಮೆ ನೋಡಿಕೊಂಡು ಹೊರಬಂದ.

''ಅರೆವ್ಹಾ... ಮದುಮಗ ರೆಡಿ..ಏನ್ರೀ ಅಡ್ಡಪಂಚೆ ಉಟ್ಟಿದೀರಾ ಕಚ್ಚೆಪಂಚೆ ಉಡೋಲ್ವಾ ? .....''ಭಾಸ್ಕರ ಚುಡಾಯಿಸಿದ.

''ಕಚ್ಚೆಪಂಚೆ, ಶಲ್ಯ ಯಾವುದೂ ಬೇಡ. ಇದು ಸರಿಯಾಗಿದೆ.''

''ನನ್ನದೇ ಒಂದು ಶಲ್ಯವನ್ನು ಇವರಿಗೆ ಕೊಡು ಗಾಯತ್ರಿ. ಹೆಗಲ ಮೇಲೆ ಶಲ್ಯವೊಂದಿದ್ದರೆ ಆ ಕಳೆಯೇ ಬೇರೆ. ಒಂದು ಡಿಗ್ನಿಟಿ ಇರುತ್ತೆ. ''

''ನನ್ನನ್ನು ಹತ್ತಿ ಇಳಿದು ಮಾಡಬೇಡಾಂತ ಆಂಟಿ ಆಗಲೇ ವಾರ್ನಿಂಗ್ ಕೊಟ್ಟಿದಾರೆ. ನೀವೇ ಹೋಗಿ ತನ್ನಿ.'' ಭಾಸ್ಕರ ಹೆಂಡತಿಯ ಜಡೆ ಎಳೆದು ಮೇಲೆ ಎದ್ದಾಗ, ದಿವಾಕರನಿಗೆ ಏನೋ ಹೊಸ ಅನುಭವ.

''ಹ್ಲಾಂ.... ನನ್ನ ಜಡೇ.... ನನ್ನ ಜಡೆಯ ಮೇಲೆ ನಿಮಗೇಕೆ ಕಣ್ಣು...?''

''ನಿಮ್ಮ ಜಡೆ ತುಂಬಾ ಚೆನ್ನಾಗಿದೆ ಗಾಯತ್ರಿಯವರೇ...''

''ಆಂ.... ನನ್ನ ಜಡೆಯ ಮೇಲೆ ನಿಮ್ಮ ಕಣ್ಣೂ ಬಿತ್ತಾ?.... ಬಿ ಕೇರ್‌ಫುಲ್ ಪೂರ್ಣಿಮಾ ಕೇಳಿಸ್ಕೊಂಡ್ರೆ ಏನು ಗತಿ ?''

''ಪೂರ್ಣಿಮಾಗೆ ಉದ್ದ ಜಡೆ ಇದೆ ಅಲ್ವಾ ಅದಕ್ಕೇ ಹೇಳಿದೆ.''

''ಅದನ್ನು ಅವಳಿಗೆ ಹೇಳಬೇಕು. ನನ್ನ ಹತ್ತಿ ಹೇಳಿದರೆ ಏನು ಉಪಯೋಗ ? ನೋಡಿ ಅಲ್ನೋಡಿ.... ನಮ್ಮ ಮದುಮಗಳು ಇಳಿದು ಬರುತ್ತಿದ್ದಾಳೆ. ಬ್ಯೂಟಿಫುಲ್ ... ಲವ್ಲೀ.... '' ಗಾಯತ್ರಿ ಉದ್ಗರಿಸಿದಳು. ದಿವಾಕರ ಬಿಟ್ಟ ಕಣ್ಣು ಬಿಟ್ಟುಕೊಂಡು, ಅವಳನ್ನೇ ನೋಡಿದ. ಪೂರ್ಣಿಮಾ ದೇವಲೋಕದ ಅಪ್ಸರೆಯಲ್ಲ, ಭೂಲೋಕದ ಸುಂದರಿಯಲ್ಲ... ನನ್ನ ಮನೋಲೋಕದ ಚೆಲುವೆ....

ಅವನ ಕಣ್ಣೋಟಕ್ಕೆ ಪೂರ್ಣಿಮಾ ನಾಚಿದ್ದಳು. ಕೆನ್ನೆಗಳು ಕೆಂಪು ಸೇಬಿನ ಹಣ್ಣಿನಂತೆ ಹೊಳೆಯುತ್ತಿದ್ದವು.

''ರೀ ದಿವಾಕರ್ ಎಚ್ಚರವಾಗಿದೀರಿ ತಾನೇ... ಇತ್ಲಾಗೆ ಬನ್ನಿ... ನಮ್ಮ ಹುಡುಗಿಗೆ ದೃಷ್ಟಿ ಆಗುತ್ತೆ....'' ಪೂರ್ಣಿಮಾ ನಕ್ಕಳು.

''ನೀವು ತುಂಬಾ ಚೆನ್ನಾಗಿ ಕಾಣ್ತಿದೀರಿ. ನಾನು ಹೇಗೆ ಕಾಣ್ತಿದೀನಿ ? ಅಡಿಗೆ ಭಟ್ಟನ ತರಹವೋ.. ಆಫೀಸರ್ ತರಹಾನೋ...?'' ಕೆಣಕಿದ.

''ಎರಡೂ ಅಲ್ಲ, ಮದುಮಗನ ತರಹ...ಅಲ್ವೇನ್ರಿ ಪೂರ್ಣಿಮಾ ?'' ಎನ್ನುತ್ತಾ ನಿಮ್ಮಿಬ್ಬರ ಜೋಡಿ ತುಂಬಾ ಚೆನ್ನಾಗಿದೆ...''ಐ ವಿಷ್ ಯೂ ಬೋತ್ ಆಲ್‌ದ ಬೆಸ್ಟ್... ಆಲ್ ದಿ ಸಕ್ಸಸ್ ಇನ್ ಯುವರ್‌ಲೈಫ್... '' ಇಬ್ಬರ ಕೈಗಳನ್ನು ಕುಲುಕಿ ವಿಷ್ ಮಾಡಿದಳು.

''ಭಾಸ್ಕರ ತಂದುಕೊಟ್ಟಶಲ್ಯವನ್ನು ನೀಟಾಗಿ ಮಡಿಸಿ, ಹೆಗಲ ಮೇಲೆ ಹೊದ್ದುಕೊಂಡ. ಭಾಸ್ಕರ ದೇವರ ಮುಂದೆ ಇದ್ದ ಕುಂಕುಮದ ಬಟ್ಟಲಿನಿಂದ ಒಂದು ಬೊಟ್ಟನ್ನು ತೆಗೆದು ದಿವಾಕರನ ಹುಬ್ಬುಗಳ ನಡುವೆ ಇರಿಸಿದ.... ''

''ಎಲ್ರೂ ರೆಡೀನಾ ರಿಕ್ಷಾ ತರಲಾ ?''

''ನಮ್ಮ ತಂದೇನೂ ಮದುವೆಮಂಟಪಕ್ಕೆ ಕರೆದೊಯ್ಯಬೇಕು ಅಂತನ ನನ್ನ ಆಸೆ... ರಿಕ್ಷಾದಲ್ಲಿಅವರನ್ನು ಕೂರಿಸೋಕೆ ಸ್ವಲ್ಪ ಹೆಲ್ಪ್ ಬೇಕು.''

''ಧಾರಾಳವಾಗಿ, ಅದಕ್ಕೇನಂತೆ... ದೇವಸ್ಥಾನದಲ್ಲಿ ಕುರ್ಚಿ ಇರುತ್ತೋ

ಇಲ್ಲವೋ...ಒಂದೆರಡು ಕುರ್ಚಿಗಳನ್ನು ತಗೊಂಡು ಹೋಗೋಣ...."

"ಅವರೇನೂ ಬೇಡ.... ಅವರ್‍ಯಾಕೆ ? ಅವರನ್ನು ನೋಡಿಕೊಂಡು ನಾನೂ ಮನೇಲಿ ಇರ್ತಿನಿ. ನೀವುಗಳು ಹೋಗಿ ಮಂಗಳ ಕಾರ್ಯವನ್ನು ಮುಗಿಸಿಕೊಂಡು ಬನ್ನಿ. ನಾನು ಸೋಸೇನ ಮನೆ ತುಂಬಿಸ್ಕೊಳ್ಳೋಕೆ ಸಿದ್ಧ ಮಾಡಿಕೊಳ್ತೀನಿ. ... " ಆಂಟಿಯ ಮಾತು ಎಲ್ಲರನ್ನೂ ನಿಶ್ಯಬ್ಧಗೊಳಿಸಿತು.

"ಇಲ್ಲಮ್ಮಾ... ನೀವಿಬ್ಬರೂ ಬರಲೇಬೇಕು. ಇಲ್ಲದಿದ್ದರೆ, ನಾನು ಮದುವೇನೇ ಮಾಡಿಕೊಳ್ಳುಲ್ಲ... "

"ಸುಮ್ಮನೆ ಹೋಗಿ ಬಾಪ್ಪಾ.. ಅವರ ಸ್ಥಿತಿ ನಿನಗೆ ಗೊತ್ತಿದೆ. ಅವರು ಒಬ್ಬರೇ ಹೇಗಿರುತ್ತಾರೆ ? ಅದಕ್ಕೆ ನಾನು ಇರ್ತೀನಿ ಅಂದೆ. ನನಗೆ ಯಾವ ಅಸಮಾಧಾನವೂ ಇಲ್ಲ. ಅಲ್ಲಿ ಕಲಾಪವೇ ಇಲ್ಲ ಅಂದಮೇಲೆ ನಮ್ಮ ಅಗತ್ಯ ಏನಿದೆ ? "

"ಇಲ್ಲಮ್ಮ, ಇದು ನಿಮ್ಮ ಮಗನ ಮದುವೆ. ಜೀವಮಾನದಲ್ಲಿ ನಾನು ಮತ್ತೆ ಮತ್ತೆ ಮತ್ತೆ ಏನೂ ಮದುವೆಯಾಗುವುದಿಲ್ಲ. ಈಗ ನೀವುಗಳು ಬರದಿದ್ದರೆ ನಾನು ಹೀಗೆ ಬ್ರಹ್ಮಚಾರಿಯಾಗಿದ್ದು ಬಿಡುತ್ತೇನೆ."

"ಅಯ್ಯೋ ರಾಮಾ... ಒಳ್ಳೆ ಆಂಜನೇಯನ ತರಹ ಆಡ್ತೀಯಲ್ಲೋ... ಅವರು ಎದ್ದು ಬಿದ್ದು ಗಲಾಟೆ ಮಾಡಿಕೊಂಡ್ರೆ, ನನಗೇನೂ ಹೇಳಬಾರದು. ಏನಾದ್ರೂ ಮಾಡಿಕೊಳ್ಳಿ. ..."ಎನ್ನುತ್ತಾ ತನ್ನ ಕತ್ತಿನಲ್ಲಿದ್ದ ಸರವನ್ನು ಮಗನಿಗೆ ತೊಡಿಸಿದಳು.

ಅಷ್ಟರಲ್ಲಿ ಕೇಶವ ಹಾಗೂ ಭಾಸ್ಕರ ತಮ್ಮ ಸ್ಕೂಟರ್ರಿನಲ್ಲಿ ಟ್ಯಾಕ್ಸಿ ಸ್ಟ್ಯಾಂಡಿಗೆ ಹೊರಟರು. ಆಂಟಿ ಸರಸರನೆ ,ಅಕ್ಕಿ ಬೆಲ್ಲವನ್ನು ಸೇರಿನೊಳಗೆ ಹಾಕಿ ಇಟ್ಟು, ಕದಲಾರತಿಗೆ, ಸುಣ್ಣ ಅರಿಶಿನ ನೀರನ್ನು ಬೆರೆಸಿ, ಸಿದ್ಧಮಾಡಿಟ್ಟಳು.

ಎರಡು ಟ್ಯಾಕ್ಸಿಗಳು ಬಂದು ಮನೆ ಬಾಗಿಲಲ್ಲಿ ನಿಂತವು. ಅಕ್ಕ ಪಕ್ಕದವರು ಇಣುಕಿ ನೋಡಿದರು. ದಿವಾಕರ ಭಾಸ್ಕರನ ಸಹಾಯದೊಂದಿಗೆ ಅಪ್ಪನನ್ನು ನಡೆಸಿಕೊಂಡು ಬಂದು ಟ್ಯಾಕ್ಸಿಯಲ್ಲಿ ಕೂರಿಸಿದ. ಆ ಟ್ಯಾಕ್ಸಿಯಲ್ಲಿ ದಿವಾಕರನ ತಂದೆ ತಾಯಿ ಹಾಗೂ ಭಾಸ್ಕರ ಗಾಯತ್ರಿಯೊಡನೆ ಕುಳಿತ.

ಮುಂಬಾಗಿಲಿಗೆ ಬೀಗವನ್ನುಹಾಕಿ, ಕೇಶವ ತನ್ನ ತಂಗಿ, ತನ್ನ ಪತ್ನಿ ಹಾಗೂ ಮದುಮಗಳೊಂದಿಗೆ ಇನ್ನೊಂದು ಟ್ಯಾಕ್ಸಿಯಲ್ಲಿ ಕುಳಿತ. ಟ್ಯಾಕ್ಸಿಗಳು ಹೊರಟವು.

ದೇವಸ್ಥಾನದ ಪ್ರಾಂಗಣದಲ್ಲಿ ಒಂದು ಕಡೆ , ಮದುವೆಯ ಕಾರ್ಯಕ್ಕಾಗಿ ವ್ಯವಸ್ಥೆ ಮಾಡಲಾಗಿತ್ತು. ಪುರೋಹಿತರು, ಇವರುಗಳಿಗಾಗಿಯೇ ಕಾದಿದ್ದರು. ಟ್ಯಾಕ್ಸಿಯಿಂದ ತಂದೆಯನ್ನು ಇಳಿಸಿಕೊಂಡು ಬಂದು, ಕುರ್ಚಿಯ ಮೇಲೆ ಕೂರಿಸಿದ. ಅವರ ಪಕ್ಕದಲ್ಲಿ ಭಾಸ್ಕರ ಕುಳಿತ. ಹಸೆಮಣೆಗೆ ಸಮೀಪವಾಗಿ ಉಳಿದವರು ಜಮಖಾನದ ಮೇಲೆ ಕುಳಿತರು. ಪುರೋಹಿತರು ಕರೆದೊಡನೆ, ದಿವಾಕರ ಪೂರ್ಣಿಮಾಳಿಗೂ ಬಾ ಎಂದು ಸಂಜ್ಞೆಮಾಡಿದ. ಇಬ್ಬರೂ ಹಸೆಮಣೆಯನ್ನೇರಿದರು. ಗಣಪತಿಯ ಪ್ರಾರ್ಥನೆ ಯೊಂದಿಗೆ ವಿವಾಹ ವಿಧಿ ಪ್ರಾರಂಭವಾಯಿತು. ಎಲ್ಲಾ ಸಿದ್ಧತೆಯನ್ನು ದೇವಸ್ಥಾನದವರೇ ವಹಿಸಿಕೊಂಡಿದ್ದರು.

ಮೊದಲಿಗೆ ವಧೂವರರು, ಪರಸ್ಪರ ಹೂಹಾರಗಳನ್ನು ಬದಲಾಯಿಸಿ ಕೊಂಡರು. ನಂತರ ವೇದೋಕ್ತ ಮಂತ್ರಗಳ ನಡುವೆ, ದಿವಾಕರ, ಪೂರ್ಣಿಮಾಳ ಕೊರಳಿಗೆ ಮಾಂಗಲ್ಯ ದಾರಣೆ ಮಾಡಿದ. ಅವಳ ಹಣೆಗೆ ಕುಂಕುಮವನ್ನಿಟ್ಟು, ಜಡೆಗೆ ಹೂ ಮುಡಿಸಿದ. ನಂತರ ಸಪ್ತಪದಿ. ಪೂರ್ಣಿಮಾಳ ಕೈ ಹಿಡಿದು ಸಪ್ತಪದಿ ತುಳಿಯುವಾಗ, ಪತಿಯ ಕರ್ತವ್ಯವನ್ನು ನಿಭಾಯಿಸುವುದಾಗಿ ವಚನವಿತ್ತ. ಪೂರ್ಣಿಮಾಳೂ, ತಾನು ಪತ್ನಿಯ ಕರ್ತವ್ಯಕ್ಕೆ ಭಂಗ ತರುವುದಿಲ್ಲವೆಂದು ವಚನವಿತ್ತಳು. ಅಲ್ಲಿಗೆ ಕಲಾಪ ಮುಗಿಯಿತು. ಪೂರ್ಣಿಮಾಳಿಗೆ ಬೇಡ ಬೇಡವೆಂದರೂ ತನ್ನ ಮೊದಲನೆಯ ಮದುವೆ ನೆನಪಿಗೆ ಬರುತ್ತಿತ್ತು. ಪತಿ ಪತ್ನಿಯರು ಕೊಡುವ ಈ ವಚನಕ್ಕೆ ಅರ್ಥವಿದೆಯೇ ಎಂದು ಚಿಂತಿಸುತ್ತಿದ್ದಳು.

ಮದುಮಕ್ಕಳಿಗೆ ಆರತಿಯನ್ನೆತ್ತಿ ಉಡುಗೊರೆಗಳನ್ನು ಓದಿಸಿದರು. ಮದುಮಕ್ಕಳು ಹಿರಿಯರಿಗೆ ನಮಸ್ಕಾರ ಮಾಡಿ ಆಶೀರ್ವಾದ ಪಡೆದರು. ದಿವಾಕರ ತಾಯಿಯನ್ನು ತಬ್ಬಿಕೊಂಡು 'ಥ್ಯಾಂಕ್ಸ್' ಅಂತಂದ. ಆಕೆಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಮಗನ ತಲೆ ಸವರಿ, ಹೃತ್ಪೂರ್ವಕವಾಗಿ ಆಶೀರ್ವದಿಸಿದಳು. ತಂದೆ ಕಣ್ಣುಗಳಲ್ಲೇ ತಮ್ಮ ಸಂತಸವನ್ನು ವ್ಯಕ್ತಪಡಿಸಿದರು. ಶ್ರೀಮತಿ ತನ್ನ ಗಂಡನನ್ನು ನೆನೆಸಿಕೊಂಡಳು ಅವರು ಬಂದಿದ್ದರೆ, ಇಷ್ಟು ಸುಲಭವಾಗಿ ಈ ಕಾರ್ಯಗಳು ನೆರವೇರಲು ಬಿಡುತ್ತಿದ್ದರೇ ?... ಬರದೇ ಇದ್ದುದೇ ಒಳ್ಳೇಯದಾಯಿತು ಅಂತ ಅಂದುಕೊಂಡರೂ, ಈ ಮದುವೆಯ ಬಗ್ಗೆ ತಿಳಿದರೆ, ಏನೇನು ಆಡುವರೋ ಅಂತೆನ್ನಿಸಿತ್ತು. ಮಗಳು ಅಳಿಯನಿಗೆ ಉಡುಗೊರೆಯನ್ನು ಕೊಡಲು ಏನನ್ನೂ ತಂದಿರಲಿಲ್ಲ. ಎಲ್ಲರ ಪರವಾಗಿ ಕೇಶವನೇ ಓದಿಸಿದ್ದ.

ದೇವಸ್ಥಾನದ ಅರ್ಚಕರ ಮನೆಯಲ್ಲಿ ಇವರುಗಳ ಊಟಕ್ಕೆ ಸಿದ್ದಮಾಡಿದ್ದರು. ಅಡಿಗೆ ವಿಶೇಷ ರುಚಿಯಿಂದ ಕೂಡಿತ್ತು. ಯಾರಿಗೂ ಮಾತು ಬೇಕಿರಲಿಲ್ಲ. ಮೌನವಾಗಿ ಊಟ ಮಾಡಿದರು. ನಂತರ ಅರ್ಚಕರ ಮನೆಯವರೇ ಎಲ್ಲರಿಗೂ ಫಲ ತಾಂಬೂಲವನ್ನು ನೀಡಿ, ಗೌರವಿಸಿದರು. ಮದುವೆ. ಪಾರ್ಟಿ ಅಲ್ಲಿಂದ ಮನೆಯ ಕಡೆಗೆ ಹೊರಟಿತು. ಅದೇ ಟ್ಯಾಕ್ಸಿಯಲ್ಲಿ ಎಲ್ಲರೂ ಮನೆಗೆ ಹಿಂದಿರುಗಿದರು. ಈಗ ದಿವಾಕರ ತನ್ನ ಪತ್ನಿಯೊಂದಿಗೆ ಮುಂದಿನ ಸೀಟಿನಲ್ಲೂ ಅವನ ತಂದೆತಾಯಿ ಹಿಂದಿನ ಸೀಟಿನಲ್ಲೂ ಕುಳಿತರು. ಉಳಿದವರು ಇನ್ನೊಂದು ಟ್ಯಾಕ್ಸಿಯಲ್ಲಿ ಕುಳಿತರು.

ಆಂಟಿ, ಮುಂದಾಗಿ ಮನೆಯೊಳಗೆ ಹೋಗಿ, ಮಣೆಗಳನ್ನು ತಂದು ಮುಂಬಾಗಿಲಲ್ಲಿ ಇಟ್ಟು ಮದುಮಕ್ಕಳಿಗೆ ಆರತಿಯನ್ನು ಎತ್ತಿದಳು. ಹೊಸ್ತಿಲ ಮೇಲೆ ಸೇರನ್ನು ಅಕ್ಕಿಯಿಂದ ತುಂಬಿ ಮೇಲೆ ಬೆಲ್ಲದ ಅಚ್ಚನ್ನು ಇಟ್ಟು, ಬಲಗಾಲಿನಿಂದ ಅದನ್ನು ಚೆಲ್ಲಿ ಒಳಗೆ ಬಲಗಾಲನ್ನಿಟ್ಟು ಬಾ ಎಂದು ಸೊಸೆಗೆ ಅಪ್ಪಣೆಯನ್ನಿತ್ತಳು.

''ಎಷ್ಟೋ ಸಾರಿ ಈ ಹೊಸ್ತಿಲಿನ ಮೇಲೆ ಕಾಲಿಟ್ಟು ಓಡಾಡಿದೀರಿ... ಆದರೆ ಈ ದಿನ ಸ್ಪೆಶಲ್...'' ಎಂದ ದಿವಾಕರ ಅವಳೆಡೆ ತಿರುಗಿ.

''ಅದೇನು ಇನ್ನು ಬಹುವಚನದಲ್ಲಿ ಕರಿತಿದೀಯ ನಿನ್ನ ಹೆಂಡತೀನ. ಅದು ಚೆನ್ನಾಗಿರುಲ್ಲ. ಅವಳು ನಿನಗಿಂತ ವಯಸ್ಸಿನಲ್ಲಿ ಚಿಕ್ಕವಳು... ಏಕವಚನದಲ್ಲಿ ಕೂಗು'' ಅಪ್ಪಣೆ ಕೊಟ್ಟಳು. ಅವನು ಸುಮ್ಮನೆ ನಕ್ಕ.

''ಆಯ್ತಮ್ಮಾ... '' ಮಗ ವಿಧೇಯತೆಯಿಂದ ನುಡಿದಾಗ ಆಕೆಗೆ ಖುಷಿಯಾಗಿತ್ತು. ''ಹೋಗಿ, ಮೊದಲು ಇಬ್ಬರೂ ದೇವರಿಗೆ ನಮಸ್ಕಾರ ಮಾಡಿ'' ಒಳಬಂದ ನವದಂಪತಿಗಳಿಗೆ ಹೇಳಿದಳು.

ಪೂರ್ಣಿಮಾ ಈಗಾಗಲೇ ಎಷ್ಟೋ ತಿಂಗಳುಗಳಿಂದ ಆ ಮನೆಯಲ್ಲಿ ಇದ್ದವಳು. ಮನೆಯ ಪರಿಚಯ ಮಾಡಿಕೊಡಬೇಕಾಗಿರಲಿಲ್ಲ. ದಿವಾಕರನ ಕೈ ಹಿಡಿದು ದೇವರ ಮನೆಯನ್ನು ಪ್ರವೇಶಿಸಿದಳು. ದೇವರಿಗೆ ನಮಸ್ಕಾರ ಮಾಡಿ, ಭಕ್ತಿಯಿಂದ ಪ್ರಾರ್ಥಿಸಿದಳು.

''ಈ ಮನೆಗೆ ನನ್ನನ್ನು ಸೇರಿಸಿ, ನನ್ನ ಬಾಳಿಗೆ ಬೆಳಕನ್ನು ನೀಡಿದ್ದೀಯೆ. ಈ ಬೆಳಕು ನಿರಂತರವಾಗಿರುವಂತೆ ಮಾಡು... ಭಗವಂತಾ...''

ದಿವಾಕರ ಕೈ ಮುಗಿದು ನಿಂತಿದ್ದ. ಅವಳನ್ನೇ ಅವಲೋಕಿಸಿದ. ಅವಳು ಕಣ್ಣು ಬಿಟ್ಟಳು. ಏನನ್ನು ಕೇಳಿಕೊಂಡೆ....? ಅವಳ ಕಣ್ಣಲ್ಲೇ ಕಣ್ಣಿಟ್ಟು ಕೇಳಿದ.

''ಏನೂ ಇಲ್ಲ... ವೆರಿ ಪರ್ಸನಲ್...''

''ನೀನು ನನ್ನ ಅರ್ಧಾಂಗಿ... ನಿನ್ನ ಪರ್ಸನಲ್ ವಿಷಯದಲ್ಲಿ ನನಗೂ ಅರ್ಧಭಾಗವಿದೆ...''

''ಹಾಗಾದರೆ ಅದು ಏನೂಂತ ನಿಮಗೆ ಅರ್ಥವಾಗಿರಲೇಬೇಕು. ''

''ಹೂಂ. ಅರ್ಥವಾಗಿದೆ. ಆದರೆ ಈ ಮಾತು ಈಗ ಬೇಡ... ಬಾ. ನಮ್ಮ ರೂಮಿಗೆ ಹೋಗೋಣ... ಅಲ್ಲಿ ಕೂತು ಮಾತನಾಡೋಣ. ...'' ದಿವಾಕರ ಅವಳ ಕೈ ಹಿಡಿದು ಅವಳನ್ನು ಎಲ್ಲರ ಎದುರಿಗೇ ತನ್ನ ರೂಮಿಗೆ ಕರೆದುಕೊಂಡು ಹೋದ. ಆ ರೂಮಿಗೆ, ಪೂರ್ಣಿಮಾ ಅಂದೇ ಮೊದಲು ಕಾಲಿಟ್ಟಿದ್ದು. ಅಲ್ಲಿದ್ದ ಮಂಚವನ್ನು ಕಂಡೊಡನೆ, ಅವಳಿಗೆ ಆಯಾಸ ಎದ್ದು ತೋರಿತು... ಆದರೆ ನಾಚಿಕೆಯಿಂದ ಹಾಗೇ ನಿಂತಳು. ಅಷ್ಟರಲ್ಲಿ ಭಾಸ್ಕರ ಬಾಗಿಲಿಗೆ ಬಂದು ನಿಂತಿದ್ದ..

''ಒಂದ್ನಿಮಿಷ ದಿವಾಕರ್... '' ದಿವಾಕರ ಹೊರಬಂದ.

''ಫಸ್ಟ್ ನೈಟ್‌ಗೆ ನಾನು, ಹೋಟೆಲ್ ಹನಿಮೂನ್‌ನಲ್ಲಿ ಒಂದು ರೂಮು ಬುಕ್ ಮಾಡಿದೀನಿ. ಇದು ತಗೊಳ್ಳಿ ಬುಕ್ಕಿಂಗ್ ರಿಸೀಪ್ಟ್''

''ಅದೆಲ್ಲಾ ಬೇಕಿರಲಿಲ್ಲ... ಇಲ್ಲೇ....'' ದಿವಾಕರ ತಲೆ ಕೆರೆದುಕೊಂಡ.

ನಿಮಗೆ ಗೊತ್ತಿಲ್ಲ, ಈ ರಾತ್ರಿ ನಿಮಗೆ ಪ್ರೈವಸಿಯ ಅಗತ್ಯವಿದೆ. ನಿಮ್ಮ ಪಾಡಿಗೆ ನೀವು ಅಲ್ಲಿ ಆರಾಮವಾಗಿರಬಹುದು. ಯಾರೂ ಬಂದು ಎಬ್ಬಿಸೋಲ್ಲ. ಒಂದು ವಾರ ನೀವು ಅಲ್ಲಿ ಹಾಯಾಗಿ ಮಜವಾಗಿರಬಹುದು... ''ಬೆಸ್ಟ್ ಆಫ್ ಲಕ್... ಹ್ಯಾಪೀ ಹನಿಮೂನ್''

''ಥ್ಯಾಂಕ್ಸ್... ಆದರೆ ಪೂರ್ಣಿಮಾ ಏನಂತಾಳೋ ?''

''ಅವಳು ಏನಾದರೂ ಅಂದುಕೊಳ್ಳಲಿ. ನಿಮಗಿಂತ ಅವಳಿಗೆ ಪ್ರೈವೆಸಿಯ ಅಗತ್ಯವಿದೆ. ಅವಳು ನಿಮ್ಮೊಡನೆ ಜಾಸ್ತಿ ಇದ್ದಷ್ಟೂ ಅವಳು ಹಿಂದಿನದನ್ನು ಮರೆಯಬಲ್ಲಳು. ಆದಷ್ಟು ಅವಳನ್ನು ಒಂಟಿಯಾಗಿರಲು ಬಿಡಲೇಬೇಡಿ. ನಿಮ್ಮ ಪ್ರೀತಿಯನ್ನು ಇಲ್ಲಿ ಎಲ್ಲರ ಎದುರಿಗೆ ಪ್ರಕಟಿಸಲು ಸಾಧ್ಯವಾಗುತ್ತಾ ನೀವೇ ಹೇಳಿ... ನೀವು ಇಲ್ಲಿಯ ಚಿಂತೆ ಮಾಡಬೇಡಿ.

ನಿಮ್ಮ ಪೇರೆಂಟ್ಸ್ ನನಗೂ ಪೇರೆಂಟ್ಸ್ ಇದ್ದಹಾಗೆ. ನಾನು ಗಾಯತ್ರಿ ಎಲ್ಲವನ್ನೂ ನೋಡಿಕೊಳ್ಳುತ್ತೇವೆ. ನೀವು ಆತಂಕ ಪಡಬೇಡಿ.'' ವಿಶ್ವಾಸದಿಂದ ಹೇಳಿದ.

''ಥ್ಯಾಂಕ್ಸ್ ಭಾಸ್ಕರ್... ಥ್ಯಾಂಕ್ಯೂ ವೆರಿಮಚ್.... ದಿವಾಕರ ಅವನ ಎರಡೂ ಕೈಗಳನ್ನು ಹಿಡಿದ. ನನಗೆ ಸ್ವಂತ ಅಣ್ಣನೆ ಇದ್ದಿದ್ದರೂ, ಇಷ್ಟು ಧೈರ್ಯ ಹೇಳುತ್ತಿದ್ದನೋ ಇಲ್ಲವೋ... ? ''

''ನಾನು ನಮ್ಮವರಿಂದ ದೂರ ಬಂದವನು. ನನಗೂ ತುಂಬಿದ ಸಂಸಾರದಲ್ಲಿ ಇರುವ ಯೋಗ ಸಿಕ್ಕಿದೆ. ನೀವು ನನಗೆ ತಮ್ಮನ ಸಮಾನ... ನಮ್ಮಿಬ್ಬರಿಗೂ ನಿಮ್ಮ ಮೇಲೆ ನಂಬಿಕೆ ಇದೆ. ಆದರೆ ಪೂರ್ಣಿಮಾ.... ಈ ಮೊದಲು ಪೆಟ್ಟು ತಿಂದವಳು. ಬಹಳ ಸೆನ್ಸಿಟಿವ್ ಆಗಿರುತ್ತಾಳೆ... ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು ನೀವು.... '' ದಿವಾಕರ ತಲೆಯಾಡಿಸಿದ.

ದಿವಾಕರ ಹೊರಗೆ ನಿಂತಿದ್ದಾಗ, ಪೂರ್ಣಿಮಾ ಮಂಚದ ಮೇಲೆ ಕುಳಿತು ರೂಮನ್ನೇ ಅವಲೋಕಿಸಿದಳು. ರೂಮಿನ ತುಂಬಾ ಏನೇನೋ ಸಾಮಾನುಗಳು... ಗಾಳಿ ಬೆಳಕು ಹೆಚ್ಚು ಇರಲಿಲ್ಲ. ಏನೋ ಒಂದು ತರಹ ವಾಸನೆ ತುಂಬಿಕೊಂಡಿತ್ತು. ಈ ರಾತ್ರಿ ಇಲ್ಲಿ ಹೇಗಪ್ಪಾ ಮಲಗೋದು ...? ಅವಳ ಯೋಚನೆಯನ್ನು ತುಂಡರಿಸುವನಂತೆ ದಿವಾಕರ ಬಂದು, ಭಾಸ್ಕರ ಹೋಟೆಲಿನಲ್ಲಿ ತಮಗಾಗಿ ರೂಮನ್ನು ಬುಕ್ ಮಾಡಿರುವುದನ್ನು ತಿಳಿಸಿದ. ಅವಳಿಗೆ ಹಾಯೆನಿಸಿತ್ತು. ಜೊತೆಗೇ ನಗುತ್ತಾ ಕೇಳಿದಳ.

''ಈ ರೂಮ್ನಲ್ಲಿ ಅದ್ಹೇಗೆ ಮಲಗ್ತೀರಿ... ಎಂತೆಂತಹದೋ ವಾಸನೆ ತುಂಬಿಕೊಂಡಿದೆ.''ಆಕ್ಷೇಪಣೆಯಿಂದ ಕೇಳಿದಳು.

''ಹೆಸರಿಗೆ ಇದು ನನ್ನ ರೂಮು. ಬೇಡದ ವಸ್ತುಗಳೆಲ್ಲಾ ತುಂಬಿಕೊಂಡಿದೆ ಈ ಉಗ್ರಾಣ. ನಾನೆಲ್ಲಿಇಲ್ಲಿ ಮಲಗ್ತೀನಿ ? ಟಿ.ವಿ. ನೋಡ್ತಾ ನೋಡ್ತಾ ಸೋಫಾ ಮೇಲೆ ಮಲಗಿ ನಿದ್ದೆ ಮಾಡ್ತೀನಿ.''

''ಮೊದಲು ಈ ರೂಮನ್ನು ಕ್ಲೀನ್ ಮಾಡಿಸೀಪ್ಪಾ...''

''ಅಯ್ಯೋ ಹೀಗೆ ಇರಲಿ ಬಿಡು... ಸದ್ಯಕ್ಕೆ ನಾವು ಇಲ್ಲೇನು ಮಲಗುವುದಿಲ್ಲವಲ್ಲ. ... ಆಮೇಲೆ ನಾನು ನಿನ್ನ ರೂಮಿನಲ್ಲೇ ಬಂದಿರ್ತೀನಲ್ಲ....ಓರೆಗಣ್ಣಿನಿಂದ ಅವಳ ಕಡೆ ನೋಡಿದ. ಅವಳು ನೋಡಿದಂತೇನೂ ಅನ್ನಿಸಲಿಲ್ಲ. ಮೆಲ್ಲಗೆ ಅವಳಪಕ್ಕ ಕುಳಿತ....''

''ಷ್... ಬಾಗಿಲು ತೆಗೆದೇ ಇದೆ..''ಎಚ್ಚರಿಸಿದಳು.

''ತೆಗೆದಿದ್ದರೇನಂತೆ... ಯಾರೂ ಈ ರೂಮಿನ ಕಡೆ ಇಣುಕುವುದಿಲ್ಲ.'' ಎನ್ನುತ್ತಾ ಅವಳನ್ನು ತಬ್ಬಿಕೊಂಡು ಅವಳ ಕೆನ್ನೆಗಳನ್ನು ಮೃದುವಾಗಿ ಚುಂಬಿಸಿದ. ಅವಳು ಕೊಸರಿಕೊಂಡಳು.'' ಪ್ಲೀಸ್ ಬಿಡಿ... ಇದೆಲ್ಲಾ ಏನು?''

''ನಿನ್ನ ಕೆನ್ನೆಗಳು ಎಷ್ಟು ಮೃದುವಾಗಿವೆ... ಕಚ್ಚಿ ತಿಂದುಬಿಡೋಣ ಅಂತ ಅನ್ನಿಸುತ್ತದೆ...'' ಮತ್ತೆ ಮತ್ತೆ ಅವಳ ಕೆನ್ನೆಗಳನ್ನು ಮುತ್ತಿಕ್ಕಿದ.

''ಪ್ಲೀಸ್ ಬಿಡಿ ನನ್ನ....'' ಎನ್ನುತ್ತಾ ಅವನಿಂದ ತಪ್ಪಿಸಿಕೊಂಡು ರೂಮಿನಿಂದ

ಹೊರಬಂದು ಮಹಡಿ ಹತ್ತಿದಳು...''ಏ ಪೂರ್ಣಿಮಾ.... ''ಅವನು ಕರೆಯುತ್ತಲೇ ಇದ್ದ. ಅವಳು ತಿರುಗಿ ನೋಡದೇ ಹೊರಟು ಹೋಗಿದ್ದಳು. ತಥ್... ಎಂದು ತಲೆಯ ಮೇಲೆ ಕೈಹೊತ್ತ, ''ಛೇ... ಅವಳು ಏನಂದುಕೊಂಡಳೋ ಏನೋ..... ನಾನು ದುಡುಕಬಾರದಾಗಿತ್ತು. ... ರಾತ್ರಿಯ ವರೆಗೆ ಕಾಯಬೇಕಾಗಿತ್ತು ಎಂದು ಹತ್ತಾರು ಸಲ ತನಗೇ ಹೇಳಿಕೊಂಡ. ಮನೆಯಲ್ಲಿ ಬೇರೆ ಯಾರೂ ಇರದೇ ಹೋಗಿದ್ದರೆ... ಅವಳ ಹಿಂದೆಯೇ ಓಡಿ ಹೋಗಿ ಸಾರಿ ಕೇಳಬಹುದಾಗಿತ್ತು'' ಎಂದು ಚಡಪಡಿಸಿದ...

ಹತ್ತೇ ನಿಮಿಷಗಳಲ್ಲಿ ಪೂರ್ಣಿಮಾ ಮತ್ತೆ ಕೆಳಗಿಳಿದು ಬಂದಳು. ಅವಳು ರೇಶಿಮೆ ಸೀರೆಯನ್ನು ಬದಲಾಯಿಸಿ ಬೇರೆ ಸೀರೆಯನ್ನುಟ್ಟಿದ್ದಳು. ಅವಳನ್ನು ಕಂಡೊಡನೆ ಅವನು ಎದ್ದು ಹೊರಗೆ ಬಂದಿದ್ದ....ಅವನು ಸಾರಿ ಕೇಳುವ ಮೊದಲೇ ಅವಳು ಸಾರಿ ಕೇಳಿಕೊಂಡಿದ್ದಳು.

''ನಾನೂ ನಿನ್ನನ್ನು ಸಾರಿ ಕೇಳಬೇಕೂಂತ ಕಾಯ್ದಿದ್ದೆ. ನೀನೇ ಬಂದದ್ದು ಒಳ್ಳೇದಾಯ್ತು. ನೀನು ರೆಸ್ಟ್ ತಗೋ... ನನಗೇನೂ ಬೇಸರವಿಲ್ಲ'' ಎಂದಿದ್ದ.

''ನಿಮ್ಮ ಪ್ರೀತಿಗೆ ನಾನು ಅರ್ಹಳಲ್ಲ ಅಂತ ಏನೇನೋ ಅನ್ನಿಸ್ತು, ಅದಕ್ಕೆ ಹಾಗೆ ಕೊಸರಿಕೊಂಡು ಓಡಿಹೋದೆ....''

''ನಿನ್ನನ್ನು ನೀನು ಕಳಪೆ ಅಂತ ಅನ್ಕೋಬೇಡ ಪೂರ್ಣಿಮಾ... ಅದು ನನಗೆ ನೋವನ್ನುಂಟು ಮಾಡುತ್ತದೆ. ನೀನು ಹೇಗೆ ವರ್ತಿಸಿದರೂ, ನನ್ನ ಪ್ರೀತಿಯೆಲ್ಲಾ ನಿನಗೆ. ನಾನು ಕೊಟ್ಟ ಮಾತಿಗೆ ತಪ್ಪುವವನಲ್ಲ. ನೀನೇ ನಿನ್ನಲ್ಲಿ ಏನೇನೋ ಅದ್ಕೊಂಡು ಕೊರಗಬೇಡ .....'' ಅವನ ಸಮಾಧಾನದ ಮಾತುಗಳು ಅವಳನ್ನು ತಂಪುಗೊಳಿಸಿದವು.

''ನಮ್ಮ ರೂಮಿನಲ್ಲಿ ಎಲ್ಲಾ ಮಲಗಿಬಿಟ್ಟಿದಾರೆ. ಜಾಗವೇ ಇಲ್ಲ, ನಾನು ಇಲ್ಲಿ ನಿಮ್ಮ ಮಂಚದ ಮೇಲೆ ಮಲಗಿರ್ಲಾ...?''

''ಹೋ ಧಾರಾಳವಾಗಿ ಮಲ್ಕೋ.... ನಾನು ಹೊರಗಡೆ ಸೋಫಾದ ಮೇಲೆ ಮಲಗ್ತೀನಿ.''

''ಥ್ಯಾಂಕ್ಸ್... ಇನ್ನು ಈ ಮದುಮಗನ ವೇಷದಲ್ಲಿ ಎಷ್ಟು ಹೊತ್ತು ಇರಬೇಕೂಂತ ಆಸೆ... ಬಟ್ಟೆ ಬದಲಾಯಿಸುಲ್ವಾ ...?''

''ರಾತ್ರಿಗೂ ಇದೇ ಬಟ್ಟೆ ಆಗುತ್ತೆ. ಇದೇ ಸಾಕು ಅಲ್ವಾ ?''

''ಹೊಟೇಲಿಗೆ ಪಂಚೆ ಷರಟ್ನಲ್ಲಿ ಯಾರು ಹೋಗ್ತಾರೆ... ಷರ್ಟು ಪ್ಯಾಂಟು ಹಾಕ್ಕೊಳ್ಳಿ..'' ಈ ಡ್ರೆಸ್ಸು ಬೇಡ ಎನ್ನುವಂತೆ ತಲೆಯಾಡಿಸಿದಳು.

''ಒಂದು ವಾರ ಅಲ್ಲಿರಬೇಕಂತೆ. ಬಟ್ಟೆ ಪ್ಯಾಕ್ ಮಾಡ್ಕೋಬೇಕು. ನಿನ್ನ ಬಟ್ಟೆ ಪ್ಯಾಕ್ ಮಾಡ್ಕೊಂಡ್ಯಾ?''

''ನಾನು ಯಾರಿಗೂ ಈ ವಿಷಯ ತಿಳಿಸಿಲ್ಲ. ಗಾಯತ್ರಿ ಹೇಳ್ತಾಳೆ. ಆಮೇಲೆ ಅಮ್ಮಂಗೆ ಹೇಳಿದರೆ, ಅವಳೇ ಪ್ಯಾಕ್ ಮಾಡಿಕೊಡ್ತಾಳೆ.''

''ಅಂದ್ಹಾಗೆ ನಾನು ಈ ವಿಷಯವನ್ನು ಅಮ್ಮನಿಗೆ ಹೇಳಲೇ ಇಲ್ಲ. ಈಗಲೇ

ಹೇಳುವುದು ಒಳ್ಳೆಯದು. ನೀನು ಮಲಕ್ಕೋ. ನಾನು ಹೇಳಿಬಿಟ್ಟು ಬರ್ತೀನಿ'' ಎನ್ನುತ್ತಾ ಬರೀ ಬಾಗಿಲನ್ನು ಮುಂದಕ್ಕೆ ಎಳೆದುಕೊಂಡು ಹೋದ. ಕೆಲವೇ ನಿಮಿಷಗಳಲ್ಲಿ ಅವಳಿಗೆ ಗಾಢವಾದ ನಿದ್ದೆ ಬಂದಿತ್ತು. ಅವಳಿಗೆ ಎಚ್ಚರವಾದಾಗ, ಬಿಸಿಲು ಇಳಿಮುಖವಾಗಿತ್ತು. ಎದ್ದು ಮೈಮುರಿದು, ಬಾಗಿಲು ತೆಗೆದಳು. ಹೊರಗೆ ಸೋಫಾದ ಮೇಲೆ ಮಲಗಿದ್ದ ದಿವಾಕರನನ್ನು ಕಂಡಳು. ಅವನ ಬಗ್ಗೆ ಕನಿಕರವೂ ಮೂಡಿತು. ಹೆಮ್ಮೆಯೂ ಮೂಡಿತು. ಅವನನ್ನು ಎಬ್ಬಿಸುವ ಮನಸ್ಸಾಗದೇ ಮೇಲಿನ ಮನೆಗೆ ಬಂದಳು.... ಎಲ್ಲರೂ ಅವಳನ್ನೇ ನೋಡಿದರು. ಯಾಕೆ ಹೀಗೆ ಹೊಸಬಳಂತೆ ತನ್ನನ್ನು ನೋಡುತ್ತಿದ್ದಾರಲ್ಲ ಎಂದು ಸಂಕೋಚಗೊಂಡಳು.

''ಎಲ್ಲಿಗೆ ಹೋಗಿದ್ದೆ ಇಷ್ಟು ಹೊತ್ತು? ನಮಗೆಲ್ಲಾ ಆಯಾಸದಿಂದ ಚೆನ್ನಾಗಿ ನಿದ್ದೆ ಬಂದುಬಿಡ್ತು... ಕೆಳಗೆ ನೀನು ಕಾಣಲಿಲ್ಲ. ದಿವಾಕರ ಸೋಫಾದ ಮೇಲೆ ಮಲಗಿದ್ರು... '' ತಾಯಿ ಪ್ರಶ್ನಿಸಿದಾಗ, ಈ ಪ್ರಶ್ನೆ ಅನವಶ್ಯಕ ಅಂತೆನಿಸಿತ್ತು.

''ಇಲ್ಲಿ ಹಾಸಿಗೆ ಇರಲಿಲ್ಲ, ಹೊದಿಕೆ ಇರಲಿಲ್ಲ. ಕಡೆಗೆ ಒಂದು ಚಾಪೆ ದಿಂಬೂ ಸಹ ಇರಲಿಲ್ಲ. ಕೆಳಗಿನ ರೂಮಿನಲ್ಲಿ ಮಂಚದ ಮೇಲೆ ಹಾಸಿಗೇನೂ ಇತ್ತು ದಿಂಬೂ ಇತ್ತು. ಬಾಗಿಲನ್ನು ಹಾಕಿಕೊಂಡು ಮಲಗಿದ್ದೆ. ನಿದ್ದೆ ಬಂದಿದ್ದೇ ಗೊತ್ತಾಗಲಿಲ್ಲ.''

''ಪಾಪ, ದಿವಾಕರನ್ನ ಹೊರಗೆ ತಳ್ಳಿಬಿಟ್ಟು ಮಲಗಿದ್ಯಾ ? ''

''ನಾನು ಹೋಗಿ ಅಂತ ಏನೂ ತಳ್ಳಲಿಲ್ಲ. ಅವರೇ ಹೋಗಿ ಮಲಗಿದ್ರು'' ಎತ್ಲಾಗೋ ನೋಡುತ್ತಾ ನುಡಿದಳು. ಅತ್ತಿಗೆ ನಾದಿನಿಯರು ಮುಖ ಮುಖ ನೋಡಿಕೊಂಡು ನಕ್ಕರು.

''ಮಾವ ಎಲ್ಲಮ್ಮಾ... ಊರಿಗೆ ಹೊರಟು ಹೋದ್ರಾ ?''

''ಬಸ್ ಸ್ಟ್ಯಾಂಡಿಗೆ ಹೋಗಿದಾನೆ. ಸೀಟ್ ರಿಸರ್ವ್ ಮಾಡಿಸೋಕೆ. ನಾವುಗಳು ನಾಳೆಯ ಮಧ್ಯಾಹ್ನದ ಬಸ್ಸಿಗೆ ಹೊರಡ್ತಿದೀವಿ.''

''ನಾವೂ ಅಂದ್ರೆ... ನೀನು ಹೊರಟು ಬಿಡ್ತೀಯ.''

''ಹುಂ ಮತ್ತೆ, ಇಲ್ಲಿ ನನಗೆ ಇನ್ನೇನು ಕೆಲಸ ? ಬಂದಿದ್ದು ನಿನ್ನನ್ನು ನೋಡಿಕೊಂಡು ಹೋಗೋಕೆ ಅಂತ. ಮತ್ತೊಂದು ಕೆಲಸಕ್ಕೆ ಅಂತ ಉಳಿದುಕೊಂಡಿದ್ದಾಯಿತು.''

''ಇನ್ನೊಂದೆರಡು ದಿನ ಇದ್ದು ಹೋಗಮ್ಮ. ಅತ್ತೆ ನೀವೇ ಹೇಳಿ.''

''ನಿಮ್ಮಮ್ಮ ಹೇಳೋದು ನಿಜ ಪುಟ್ಟೀ.... ಇಲ್ಲಿ ನಿನಗೆ ಯಾರೂ ಹೊಸಬರಲ್ಲ. ಜಾಗ ಹೊಸದಲ್ಲ. ನಿಮ್ಮ ಅತ್ತೆ ಸ್ವಲ್ಪ ಮಾತು ಜಾಸ್ತಿ...ಆದರೆ ಒಳ್ಳೆಯವರೂಂತ ಅನ್ನಿಸುತ್ತೆ. ದಿವಾಕರ ನಿನ್ನನ್ನು ಚೆನ್ನಾಗಿ ನೋಡಿಕೊಳ್ತಾನೆ ಅನ್ನೋದಕ್ಕೆ ಯಾವ ಸಂಶಯವೂ ಇಲ್ಲ. ಇನ್ನೊಂದೆರಡು ದಿನ ಕಳೆದರೆ ನೀನೂ ಬ್ಯಾಂಕಿಗೆ ಕೆಲಸಕ್ಕೆ ಹೋಗಬೇಕೇನೋ. ಅಲ್ಲಿಯವರೆಗೆ ನೀವಿಬ್ಬರೂ ಹಾಯಾಗಿರಿ. ಮಧ್ಯೆ ನಾವುಗಳೇಕೇ?''

''ಅಮ್ಮ ಏನಮ್ಮ ಅತ್ತೆ ಹೀಗಂತಾರೆ ? ನನ್ನ ಮೇಲೆ ಕೋಪಾನಾ ?''

''ಕೋಪವೂ ಇಲ್ಲ ತಾಪವೂ ಇಲ್ಲ, ಸುಮ್ಮುನ್ನೆ ಮಗಳ ಮನೆಯಲ್ಲಿ ನಾವು ಇರುವುದರಲ್ಲಿ ಅರ್ಥವಿಲ್ಲ, ಮರ್ಯಾದೆಯಿಂದ ನಾವುಗಳು ವಾಪಸ್ಸು ಹೋಗುವುದೇ ಕ್ಷೇಮ.''

"ಯಾರಾದ್ರೂ ಏನಾದ್ರೂ ಅಂದ್ರಾ ? ಅತ್ತೆ ಏನಾದ್ರೂ ಅಂದ್ರಾ ?"

"ಯಾರಾದ್ರೂ ಏನಾದ್ರೂ ಅನ್ನುವಂಥಾದ್ದು ಏನೂ ನಡೆದಿಲ್ಲ ನಮ್ಮಿಂದ. ಗಾಯತ್ರಿ ಹೇಳಿದಳು ನೀವಿಬ್ಬರೂ ಒಂದು ವಾರ ಹೋಟೆಲ್ಲಿನಲ್ಲಿ ಇರ್ತೀರಂತೆ. ನೀನು ಮನೇಲಿಲ್ಲದೇ ಇದ್ರೆ ನಾನು ಒಬ್ಬಳೇ ಕೂತು ಏನ್ಮಾಡಲಿ ?"

"ಹೌದು ಪುಟ್ಟೀ.... ಶ್ರೀಮತಿ ಒಬ್ಬಳೇ ಏನು ಮಾಡಬೇಕು ನೀನೇ ಹೇಳು. ನಿಮ್ಮ ಅತ್ತೆ ಜೊತೆ ಎಷ್ಟು ಮಾತೂಂತ ಆಡೋದು....?"

"ಏನಾದ್ರೂ ಮಾಡ್ಕೊಳ್ಳಿ, "ಪೂರ್ಣಿಮಾ ಮುಖ ಊದಿಸಿಕೊಂಡಳು.

"ನಾನು ಬೇಕೇ ಬೇಕೂಂತ ಇದ್ರೆ ಇರ್ತೀನಿ. ಆದರೆ ಅಲ್ಲಿ ನಿಮ್ಮ ಅಪ್ಪನ್ನ ತಂಗೀನ ಬಿಟ್ಟು ಬಂದು ವಾರದ ಮೇಲಾಯ್ತು. ಕೇಳಿದರೆ ಅವರಿಗೆ ಏನು ಹೇಳಲಿ ? ನನಗಿಂತ ಹೆಚ್ಚಾಗಿ ನಿನಗೆ ಗಾಯತ್ರಿಯ ಸಹಕಾರವಿದೆ. ಇದುವರೆಗೆ ನಡೆದಿದ್ದೆಲ್ಲಾ ಅವಳಿಂದಲೇ ..... ಆದದ್ದೆಲ್ಲಾ ಒಳ್ಳೆಯದಕ್ಕೆ ಅಂತ ನನಗೆ ನಾನೇ ಸಮಾಧಾನ ಹೇಳಿಕೊಂಡಿದೀನಿ. ಗಾಯತ್ರಿ ನಿನಗೆ ಯಾವ ಸಲಹೆ ಬೇಕೋ ಅದನ್ನು ಕೊಡ್ತಾಳೆ. ನಿನ್ನನ್ನು ಕ್ಷೇಮವಾಗಿ ನೋಡಿಕೊಳ್ತಾಳೆ. ನಮಗೆ ಆತಂಕವೇ ಇಲ್ಲ."

"ಅಮ್ಮಾ... ಅಂತೂ ನನ್ನಕೈ ಬಿಟ್ಟು ಬಿಟ್ಟೆಯಾ ? .... ನನಗೆ ಆ ಚಂದ್ರನ್ನ ಮರೆಯೋಕೇ ಆಗ್ತಿಲ್ಲಮ್ಮಾ... ಮರೆಯೋಕ ಅವನು ಬಿಡ್ತಾ ಇಲ್ಲಮ್ಮ.... ನೆನ್ನೆ ದಿನ ಅಂಗಡೀಲಿ ಸಿಕ್ಕಿದ್ದ. ಏನೇನೋ ಮಾತಾ್ ರ.... ಈ ಊರ್‍ನಲ್ಲಿ ನನಗೆ ಇರೋಕೇ ಇಷ್ಟವಿಲ್ಲಮ್ಮಾ... ನಾನು ನಿನ್ನ ಜೊತೆಗೇ ಬಂದುಬಿಡ್ತೀನಿ " ಇದ್ದಕ್ಕಿದ್ದಂತೆ ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಾಗ, ಇಬ್ಬರೂ ಗಾಬರಿಗೊಂಡರು. ಏನು ಸಮಾಧಾನ ಹೇಳಬೇಕೆಂದು ತಿಳಿಯದಾಯಿತು. ರೋಧನದ ಧ್ವನಿ ಕೇಳಿ ಗಾಯತ್ರಿಯೂ ಹೊರಬಂದಿದ್ದಳು. ಏನಾಯ್ತು ? ಅಂತ ಸಂಜ್ಞೆಯಲ್ಲೇ ಕೇಳಿದಳು. ಕೆಳಗ್ನಿಂದ ಏನಾಯ್ತೋ ಎನ್ನುವಂತೆ ದಿವಾಕರನೂ ಧಾವಿಸಿ ಬಂದ.

ಪೂರ್ಣಿಮಾ ತಾಯಿಯನ್ನು ಗಟ್ಟಿಯಾಗಿ ತಬ್ಬಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ಯಾಕೆ ಏನು ಎಂದು ಉಳಿದವರಿಗೆ ತಿಳಿಯಲಿಲ್ಲ. ಸ್ವಲ್ಪ ಹೊತ್ತು ಅತ್ತು ತಾನೇ ಸಮಾಧಾನ ಮಾಡಿಕೊಂಡು ತಾಯಿಯಿಂದ ದೂರ ನಿಂತಳು. ತನ್ನನ್ನೇ ನೋಡುತ್ತಿದ್ದವರ ಕಡೆ ನೋಡಿದಳು. ದಿವಾಕರನನ್ನು ಕಂಡು ನಾಚಿಕೆಯಿಂದ ಮುಖ ಅರಕ್ತವಾಯಿತು. ಮೊದಲೇ ಕಣ್ಣೀರಿನಿಂದ ತೊಯ್ದು ಮುಖ, ಮೇಲೆ ತಾವರೆಯಂತೆ ಕೆಂಪಾದ ದುಂಡೆಯ ಕೆನ್ನೆಗಳು. ಅವನು ಅವಳ ಚೆಲುವನ್ನು ಆಸ್ವಾದಿಸುತ್ತಾ ನಿಂತ ಅವನ ಕಿರುನಗೆ ಅವಳನ್ನು ಕರೆಯಿತು. ಅಲ್ಲಿದ್ದವರನ್ನೆಲ್ಲಾ ಮರೆತು ಓಡಿ ಹೋಗಿ ಅವನನ್ನು ತಬ್ಬಿಕೊಳ್ಳುವ ಮನಸ್ಸಾಯಿತು.ಆದರೆ ಲಜ್ಜೆ ಅವಳನ್ನು ತಡೆಯಿತು. ಗಾಯತ್ರಿ ಅವರಿಬ್ಬರನ್ನು ಸಂಜ್ಞೆಯಿಂದಲೇ ಕೆಳಗೆ ಬರುವಂತೆ ಹೇಳಿ ತಾನು ಕೆಳಗಿಳಿದಳು. ಭಾಸ್ಕರ ಎದ್ದು ಬಂದಿರಲಿಲ್ಲ. ಅಲ್ಲಿ ಇವರಿಬ್ಬರೇ ಉಳಿದರು. ದಿವಾಕರ ಅವಳ ಸಮೀಪಕ್ಕೆ ಬಂದ. ಅವಳ ಗಲ್ಲವನ್ನು ಹಿಡಿದೆತ್ತಿ ಅವಳ ಕಣ್ಣುಗಳನ್ನೇ ನೋಡಿದ.

"ನಿನಗೆ ನಿನ್ನ ಅಮ್ಮನ್ನ ಬಿಟ್ಟಿರುಕ್ಕೆ ಕಷ್ಟವಾಗ್ತಿದೆಯಾ ?..."

ಇಲ್ಲ ಎನ್ನುವಂತೆ ತಲೆಯಾಡಿಸಿದಳು.

"ಮತ್ಯಾಕೆ ಅಳ್ತಿದ್ದೆ? ಯಾರು ಏನಂದ್ರು ನಿನ್ನನ್ನು....?"

"ಏನೋ ಹೀಗೆ ಅಳು ಬಂತು... ತಡಕೊಳ್ಳೋಕೆ ಆಗಲಿಲ್ಲ"

"ಅಳು ಬಂದಾಗ ಚೆನ್ನಾಗಿ ಅತ್ತು ಬಿಡು. ಆಗ ಮಳೆಯಲ್ಲಿ ತೊಯ್ದ ಕಮಲದಂತೆ ನಿನ್ನ ಮುಖ ಇನ್ನು ಸುಂದರವಾಗುತ್ತೆ. ಆಗ ನಾನು ಏನು ಮಾಡ್ತೀನಿ ಗೊತ್ತಾ?" ಮುದ್ದಿಸುತ್ತಾ ಕೇಳಿದ.

"ಗೊತ್ತಿಲ್ಲ. ...." ಮುಂಗೈನಿಂದ ಕೆನ್ನೆಗಳನ್ನು ಒರೆಸಿಕೊಂಡಳು.

"ಹೀಗೆ ಸಮಾಧಾನ ಮಾಡ್ತೀನಿ" ಎನ್ನುತ್ತಾ ಮತ್ತೆ ಮತ್ತೆ ಅವಳ ಮುಖವನ್ನು ಚುಂಬಿಸಿದ. ತುಟಿಗೆ ತುಟಿಗಳು ಸೇರಿದವು. ಉನ್ಮತ್ತಳಾದಂತೆ ಪೂರ್ಣಿಮಾ ಹಾಗೆ ನಿಂತಿದ್ದಳು. ಪಕ್ಕದ ರೂಮಿನಲ್ಲಿದ್ದ ಭಾಸ್ಕರ ಕೆಮ್ಮಿದ. ಇಬ್ಬರೂ ಎಚ್ಚೆತ್ತರು. "ನಡೀ ಕೆಳಗೆ ಹೋಗೋಣ...." ದಿವಾಕರ ಎಚ್ಚೆತ್ತು ನುಡಿದ.

"ಯಾಕೆ ?..... ಇನ್ನು ಸ್ವಲ್ಪ ಹೊತ್ತು ಇಲ್ಲೇ ಇರೋಣ"

"ಅಲ್ಲಿ ಎಲ್ಲಾ ಇದಾರೆ... ಎಲ್ಲರೆದುರಿಗೆ ನಾವು ಹೀಗೆ ಮೈ ಮರೆಯುವುದಿಲ್ಲ. ಇಲ್ಲದಿದ್ದರೆ ಸಿಕ್ಕಿ ಬೀಳ್ತೀವಿ. ಎಲ್ಲರೂ ಗೇಲಿ ಮಾಡ್ತಾರೆ ಅಷ್ಟೇ... ನಿಂಗೊತ್ತಾ ಗಾಯತ್ರಿ ಸಂಜ್ಞೆ ಮಾಡಿ, ನಿಮ್ಮ ತಾಯೀನ ಅತ್ತೇನ ಕೆಳಕ್ಕೆ ಕರೆದುಕೊಂಡು ಹೋದ್ರು ಏಕೆ ಗೊತ್ತಾ? ನಾವಿಬ್ಬರೇ ಏಕಾಂತದಲ್ಲಿರಲಿ ಅಂತ...."

"ಅದು ಗೊತ್ತಿದ್ದೂ ನೀವೇಕೆ ಹೀಗೆ ಮಾಡಿದ್ರಿ..?"

"ನೀನು ನನ್ನ ಹುಡುಗಿ..... ನನ್ನ ಹುಡುಗೀನ ನಾನು ಸಮಾಧಾನ ಮಾಡ್ತೀನಿ. ಅದರಲ್ಲೇನು ತಪ್ಪು?"

"ಮತ್ತೆ ಯಾಕೆ ಭಯ ? "

"ಮತ್ತೆಲ್ಲಿಅತ್ತು ಬಿಡ್ತೀಯೋ ಅಂತ ಭಯ... ನೀನು ಅಳೋದು, ನಾನು ಸಮಾಧಾನ ಮಾಡೋದು... " ಮತ್ತೆ ಮತ್ತೆ ಕೆನ್ನೆಗಳಿಗೆ ಮುತ್ತಿಟ್ಟ.

"ನಾನೂ ನೋಡ್ತಾ ಇದೀನಿ. ಎರಡು ಮೂರು ದಿನಗಳಿಂದ ನಿಮ್ಮ ಮೂಡ್ ರೋಮ್ಯಾಂಟಿಕ್ ಕಡೆ ತಿರುಗಿದೆ " ತಮಾಷೆ ಮಾಡಿದಳು.

"ಬಡಪಾಯಿ ಬ್ರಹ್ಮಚಾರಿ ತರಹ ನಾನು ನನ್ನ ಪಾಡಿಗೆ ಸುಮ್ಮನಿದ್ದೆ. ಗಾಯತ್ರೀದೇ ಕಿತಾಪತಿ... ಗೃಹಸ್ಥಾಶ್ರಮಕ್ಕೆ ಎಳೆದರು. ನಾನೂ ಉಪ್ಪು ಹುಳಿ ಖಾರ ತಿನ್ನೋ ಮನುಷ್ಯ. .... ಬಯಕೆಗಳು ಹುಟ್ಟಿಬಿಡುತ್ತವೆ ಏನು ಮಾಡಲಿ ? "

"ಗಾಯತ್ರಿ ಭಾಸ್ಕರ ಇಬ್ಬರು ಮದುವೆಯಾದ ಹೊಸದರಲ್ಲಿ ಹೀಗಾಡಲಿಲ್ಲ. ಬರೀ ಸ್ನೇಹಿತರಂತೆ ಇದ್ದರು."

"ಬರೀ ಸ್ನೇಹಿತರಂತೆ ಇದ್ದರೋ, ಸತಿ ಪತಿಗಳಂತೆ ಇದ್ದರೋ ನಮಗೇನು ಗೊತ್ತು? ಎಂಟು ವರ್ಷದಿಂದ ಬರೀ ಪ್ರೀತೀಲೇ ಇರ್ತಾರಾ ? ಅದೂ ಮನೆ ಬಿಟ್ಟು ಓಡಿ ಬಂದವರು.

ನಾನು ಇದನ್ನೆಲ್ಲಾ ನಂಬುಲ್ಲ.''

''ಷ್, ಮೆಲ್ಲಗೇ, ಭಾಸ್ಕರ್ ಇಲ್ಲೇ ಮಲಗಿದಾರೆ...''

''ಕೇಳಿಸಿದರೆ ಕೇಳಿಸಲಿ.. ನಾನು ಆಡಿದ್ದರಲ್ಲಿ ತಪ್ಪಿಲ್ಲ. ಅವರಿಬ್ಬರ ರೋಮಾನ್ಸ್‌ನ್ನು ನಾವ್ಯಾರೂ ನೋಡಲಿಲ್ಲ. ನಾನು ಮಹಡಿ ಹತ್ತಿ ಬರುತ್ತಿರಲಿಲ್ಲ. ನೀನು ರೂಮಿನಿಂದ ಆಚೆ ಬರುತ್ತಿರಲಿಲ್ಲ. ಹೊಸದಾಗಿ ಮದುವೆಯಾದವರಿಗೆ ಪ್ರೈವಸಿಯ ಅಗತ್ಯವಾಗಿರತ್ತದೆ ಅಂತ ನನಗೆ ತಿಳುವಳಿಕೆ ಹೇಳುವ ಮನುಷ್ಯ, ಸನ್ಯಾಸಿಯ ತರಹ ಇರ್ತಾರಾ ? ... ಇನ್ನು ಒಂದು ನ್ಯೂಸ್ ಗೊತ್ತಾ ನಿನಗೆ, ಅವರಿಬ್ಬರೂ ಸದ್ಯದಲ್ಲೇ ಅಪ್ಪ ಅಮ್ಮ ಆಗ್ತಾ ಇದಾರೆ....''

''ನಿಮಗೂ ಗೊತ್ತಾ? ನಿಮಗೆ ಯಾರು ಹೇಳಿದ್ರು ...?''

''ಹೇಗೋ ಗೊತ್ತಾಯ್ತು... ಅದಿರಲಿ ಬಿಡು. ಈಗ ನಾವು ದಂಪತಿಗಳು. ನಾವು ಏನೇ ಮಾತನ್ನಾಡಿದರೂ, ಉಳಿದವರು ಕೇಳಿಸಿಕೊಳ್ಳಬಾರದು. ನಮ್ಮ ರೋಮಾನ್ಸ್‌ನ್ನು ನೋಡಬಾರದು. ಹಾಗಂತ ಹೇಳಿಬಿಡ್ತೀನಿ. ..... '' ಅವಳು ತನ್ನ ದುಗುಡವನ್ನು ಮರೆತು ಬಾಯ್ತುಂಬಾ ನಕ್ಕಳು. ಅವನ ಹೃದಯ ಹಗುರವಾಯಿತು. ಈ ನಗುವಿಗಾಗಿ ತಾನು ಏನೇನೆಲ್ಲಾ ನಾಟಕವಾಡಬೇಕಾಯ್ತಲ್ಲ ಅಂತ ಅನ್ನಿಸಿದರೂ, ತಾನು ಅವಳನ್ನು ಗೆಲ್ಲಬಲ್ಲೆ ಎಂಬ ವಿಶ್ವಾಸ ಉದಯಿಸಿತ್ತು. ಮೆಲ್ಲಗೆ ಅವಳ ಮುಂದಲೆಯನ್ನು ಚುಂಬಿಸಿದ.

''ನಿನ್ನ ಬಟ್ಟೆಗಳನ್ನು ಪ್ಯಾಕ್ ಮಾಡಿಕೊಂಡಾಯ್ತಾ? ''

''ಇಲ್ಲ.... ನೀವು ಹೆಲ್ಪ್ ಮಾಡ್ತೀರಾ?''

''ಓ... ಮಾಡ್ತೀನಿ. ... ಸೂಟ್‌ಕೇಸ್ ಎಲ್ಲಿ ಎನ್ನುತ್ತಾ, ತಾನೇ ಒಂದೊಂದಾಗಿ ಹುಡುಕಿ, ಅವಳು ಕೊಟ್ಟ ಬಟ್ಟೆಗಳನ್ನು ತುಂಬಿದ. ಈಗ ನನ್ನ ಜೊತೆ ಬಾ. ಪ್ಯಾಕಿಂಗ್‌ಗೆ ಹೆಲ್ಪ್ ಮಾಡು'' ಎಂದು ಅವಳನ್ನು ಕೆಳಕ್ಕೆ ತನ್ನ ರೂಮಿಗೆ ಕರೆತಂದ.

ಧೂಳಿನಿಂದ ತುಂಬಿದ್ದ ಕಿಟ್‌ಬ್ಯಾಗನ್ನು ಕಂಡು ಮುಖ ಸಿಂಡರಿಸಿಕೊಂಡಳು. ''ಥೂ ಬರೀ ಧೂಳು, ಮೇಲೆ ನನ್ನ ರೂಮಿನಲ್ಲಿ ಇನ್ನೊಂದು ಕಿಟ್ ಬ್ಯಾಗ್ ಇದೆ. ತರ್ತೀನಿ. ''

''ನಾನೇ ತರ್ತೀನಿ... ಎಷ್ಟು ಸಾರಿ ಮಹಡಿ ಹತ್ತಿ ಇಳಿದು ಮಾಡ್ತೀಯ. ಸುಸ್ತಾಗುತ್ತೆ....''

''ಸರಿ ಹೋಗಿ ತಗೋಂಡ್ಬನ್ನಿ. ಅಲ್ಲೇ ಮೂಲೇಲಿ ಬಾಗಿಲ ಬಳಿ ಇದೆ.''

ಅವನು ಎರಡೆರಡು ಮೆಟ್ಟಿಲನ್ನು ಒಟ್ಟಿಗೆ ಹತ್ತಿದ. ಕಿಟ್ ಬ್ಯಾಗನ್ನು ಹುಡುಕುವುದು ಕಷ್ಟವೇನಾಗಲಿಲ್ಲ. ಅದರೊಳಗೆ ಕೈ ಹಾಕಿ, ಏನಾದರೂ ಇದೆಯಾ ಅಂತ ನೋಡಿದ. ಒಂದೆರಡು ಕವರುಗಳಿದ್ದವು. ಕೊಡವಿದ. ಒಂದು ಫೋಟೋ ಕೆಳಗೆ ಬಿತ್ತು. ಕುತೂಹಲದಿಂದ ನೋಡಿದ. ಅದೇ ಪೂರ್ಣಿಮಾ.... ಅವಳ ಕೈಯಲ್ಲಿ ಒಂದು ಸಣ್ಣ ಮಗು. ಪಕ್ಕದಲ್ಲಿ ಒಬ್ಬಳು ಹುಡುಗಿ... ಅವಳೇನೋ ತಂಗಿ ಇರಬಹುದು. ಆದರೆ ಈ ಮಗು... ಒಂದು ಗಳಿಗೆ ಮನಸ್ಸು ಎತ್ತೆತ್ತಲೋ ಹರಿಯಿತು. ಈ ಮಗು ಯಾರದು ? ಪೂರ್ಣಿಮಾಳದು ಇರಬಹುದೇ..... ಇರಲಾರದು. ಇದ್ದಿದ್ದರೆ ಹೇಳದೇ ಇರುತ್ತಿದ್ದಳೇ.... ಕೇಳಿದರೆ ನಿಜ ಏನೂಂತ ತಿಳಿಯಬಹುದು. ಆದರೆ ಇವತ್ತೇ ಬೇಡ...ಇನ್ನು ಕೇಲವೇ ಗಂಟೆಗಳಲ್ಲಿ ಹೊಸ

ಅನುಭವಗಳನ್ನು ಹಂಚಿಕೊಳ್ಳಲಿದ್ದೇವೆ. ಆ ಸವಿಯನ್ನು ಅನುಭವಿಸುವ ಮೊದಲೇ ಮನಸ್ಸನ್ನು ಕಹಿ ಮಾಡಿಕೊಳ್ಳುವುದು ಬೇಡ.... ಡೈವೋರ್ಸ್ ಅಂತ ಮೊದಲೇ ಗೊತ್ತಿದ್ದೂ ಇವಳನ್ನು ವರಿಸಿದೆ. ಒಂದು ವೇಳೆ ಒಂದು ಮಗೂವೂ ಇದ್ದರೆ... ಬೇಡ ಆಬಗ್ಗೆ ಈಗ ಯೋಚಿಸುವುದೇ ಬೇಡಾಂತ ಹೇಳಿಕೊಂಡು ಕೆಳಗಿಳಿದ.

''ಒಂದು ಖಾಲಿ ಕಿಟ್‌ಬ್ಯಾಗ್ ತರೋಕೆ ಇಷ್ಟು ಹೊತ್ತಾ?''

''ಖಾಲಿ ಇರಲಿಲ್ಲ. ಏನೋ ಕವರುಗಳು ಇದ್ದವು. ಅವಳನ್ನೇ ಓರೆ ಗಣ್ಣಿನಿಂದ ನೋಡಿದ. ... ಅದನ್ನೆಲ್ಲಾ ಅಲ್ಲೇ ಮೂಲೇಲಿ ಎಸೆದು ಬಂದಿದೀನಿ. ಬೇಕಾದವು ಆದ್ರೆ, ಗೂಡಿನಲ್ಲಿಟ್ಟು ಬರ್ತೀನಿ.''

''ಈಗೇನೂ ಬೇಡ. ನಿಧಾನವಾಗಿ ಮಾಡಿದ್ರಯ್ತು... ಈ ಮಡಿಸಿಟ್ಟಿರುವ ಬಟ್ಟೆಗಳನ್ನೆಲ್ಲಾ ನೀಟಾಗಿ ಕಿಟ್ ಬ್ಯಾಗ್‌ನೊಳಗೆ ಜೋಡಿಸಿಡಿ...''

''ನನಗೆ ಬರುಲ್ಲ, ನೀನೇ ಜೋಡಿಸು...''

''ಕುದುರೆ ಕಂಡರೆ ಕಾಲು ನಾವು ಅನ್ನೋ ಹಾಗೆ, ನನ್ನನ್ನು ಕಂಡ ಕೂಡಲೇ ಸೋಮಾರಿತನಾನ ...?''

''ಹೂಂ ಹಾಗೇ ಅನ್ಕೋ'' ಎನ್ನುತ್ತಾ ಅವಳ ಜಡೆಯ ತುದಿಯನ್ನು ಎಳೆದುಕೊಂಡು ತನ್ನ ಬೆರಳಿಗೆ ಸುತ್ತಿಕ್ಕೊಳ್ಳತೊಡಗಿದ. ...

''ಹ್ಹಾಂ ... ಕೂದಲು ಎಳೆದುಕೊಳ್ತಿದೆ. ಬಿಡಿ ಜಡೇನಾ ?''

''ನಿನ್ನ ಜಡೆ ಉದ್ದವಾಗಿ ಎಷ್ಟು ಚೆನ್ನಾಗಿದೆ'' ಜಡೆಯನ್ನು ಎಳೆದು ಅವಳನ್ನು ತನ್ನ ಹತ್ತಿರಕ್ಕೆಳೆದುಕೊಂಡ.

''ಬಿಡಿ, ಬಿಡಿ... ಮತ್ತೆ ಶುರುವಾಯ್ತಲ್ಲ ನಿಮ್ಮ ಚೇಷ್ಟೆ''

''ನಿನ್ನನ್ನು ಹತ್ತಿರದಲ್ಲಿ ಕಂಡ ಕೂಡಲೇ ಕೀಟಲೆ ಮಾಡಬೇಕೂಂತ ಅನ್ನಿಸುತ್ತೆ.''

''ಸರಿ ಹಾಗಾದ್ರೆ ನಿಮ್ಮ ಬಟ್ಟೇನ ನೀವೇ ಪ್ಯಾಕ್ ಮಾಡ್ಕೊಳ್ಳಿ... ನಾನು ಹೊರಟೆ ಎಂದು ಹೇಳಿ ಮಹಡಿ ಹತ್ತಿದವಳನ್ನು ಅವಳಿಗೆ ತಿಳಿಯದಂತೆ ಹಿಂಬಾಲಿಸಿದ. ಅವಳು ಆ ಫೋಟವನ್ನೇನಾದರೂ ಮುಚ್ಚಿಡುವಳೇ ಎಂದು ನೋಡುವ ಕುತೂಹಲದಿಂದ ಅವಳ ಚಲನವಲನವನ್ನೇ ಗಮನಿಸಿದ. ಆದರೆ ಅವಳು ಹಾಗೇನೂ ಮಾಡಲಿಲ್ಲ. ತನ್ನ ಹ್ಯಾಂಡ್ ಬ್ಯಾಗಿಗೆ ಅಗತ್ಯದ ಕೆಲವು ಪದಾರ್ಥಗಳನ್ನು, ಒಂದು ಪ್ಲಾಸ್ಟಿಕ್ ಚೀಲಕ್ಕೆ ಸೋಪು, ಟೂತ್‌ಪೇಸ್ಟ್ ಇತ್ಯಾದಿಗಳನ್ನ ತುಂಬಿಕೊಳ್ಳುತ್ತಿರುವಾಗ, ಸದ್ದಿಲ್ಲದೇ ಕೆಳಗಿಳಿದು ಬಂದ. ತಾನೂ ಸೋಪು, ಪೇಸ್ಟು, ಶೇವಿಂಗ್‌ಸೆಟ್, ಬಾಚಣಿಗೆ ಇತ್ಯಾದಿಗಳನ್ನು ತೆಗೆದುಕೊಂಡ. ಭಾಸ್ಕರ ಗಾಯತ್ರಿ ಹೊರಗೆ ತಿರುಗಾಡಿ ಬರಲು ಹೋಗಿದ್ದರು. ಉಳಿದವರು ಅಡಿಗೆ ಕೆಲಸದಲ್ಲಿ ನಿರತರಾಗಿದ್ದರು. ''

ಊಟದ ನಂತರ, ಗಾಯತ್ರಿ ಪೂರ್ಣಿಮಾಳಿಗೆ ಕೆಲವು ಪಿಸುಮಾತುಗಳನ್ನು ಹೇಳಿದಳು. ಅವಳ ಮುಖ ನಾಚಿಕೆಯಿಂದ ಕೆಂಪಾದುದನ್ನು ದಿವಾಕರ ಗಮನಿಸಿದ. ಗಾಯತ್ರಿ ಏನು ಹೇಳಿರಬಹುದೆಂದು ಊಹಿಸಿದ. ಈ ವಿಷಯವನ್ನು ಆಂಟಿಗೆ ಈ ಮೊದಲೇ ದಿವಾಕರ

ತಿಳಿಸಿದ್ದನಾದ್ದರಿಂದ ಆಕೆ ಯಾವ ಮಾತನ್ನು ಆಡಿರಲಿಲ್ಲ. ಕೇಶವನಿಗೆ ಮಾತ್ರ ಇದು ಅಚ್ಚರಿಯ ವಿಷಯ. ಹೋಟೆಲ್ಲಿಗೇಕೆ ಹೋಗಬೇಕು, ಸುಮ್ಮನೇ ಖರ್ಚು ಎಂದು ಅವನ ಮತ. ಆದರೆ ಅದನ್ನೇನೂ ಹೇಳಿಲಿಲ್ಲ.

''ನಾಳೆಯ ದಿನ ನಾವುಗಳು ಊರಿಗೆ ಹೊರಟಿದ್ದೇವೆ. ಮತ್ತೆ ಭೇಟಿ ಯಾಗುವುದು ಯಾವಾಗಲೋ ಈಗಲೇ ಹೇಳುತ್ತಿದ್ದೇವೆ.''ಅಂತಂದ.

''ಇನ್ನೊಂದೆರಡು ದಿನಗಳು ಇದ್ದು ಹೋಗಬಹುದಾಗಿತ್ತು'' ಎಂದು ಆಂಟಿ ಔಪಚಾರಿಕವಾಗಿ ಹೇಳಿದಾಗ, ದಿವಾಕರನೂ ಅದನ್ನೇ ಅನುಮೋದಿಸಿದ.

''ಆಗಲಿ, ಈಗ ಹೋಗಿ, ಹತ್ತು ಹದಿನೈದು ದಿನಗಳ ನಂತರ ಮತ್ತೆ ಬರುತ್ತೇವೆ. ಮಗಳನ್ನು ಕೊಟ್ಟಿದ್ದೇವೆ. ಆಗ ಈಗ ಬರಲೇ ಬೇಕಾಗುತ್ತದೆ. ''

''ಅದೂ ಸರಿ''ಆಂಟಿ ನುಡಿದಾಗ ಅಲ್ಲಿಗೆ ಮಾತು ಮುಗಿದಿತ್ತು. ಭಾಸ್ಕರ ತಾನೇ ಹೋಗಿ ರಿಕ್ಷಾ ತಂದು ನಿಲ್ಲಿಸಿದ. ನವದಂಪತಿಗಳು ಮತ್ತೊಮ್ಮೆ ಹಿರಿಯರಿಗೆ ನಮಸ್ಕರಿಸಿ, ಲಗೇಜಿನೊಂದಿಗೆ ರಿಕ್ಷಾ ಹತ್ತಿದರು. ಭಾಸ್ಕರ ದಿವಾಕರನ ಕೈ ಕುಲುಕಿದ.

ಹೋಟೆಲ್ಲು ಹನಿಮೂನ್ ತಲುಪಿ, ರಿಸೆಪ್ಶನ್‌ನಲ್ಲಿ ವಿಚಾರಿಸಿ, ತಮಗಾಗಿ ರಿಸರ್ವ್ ಆಗಿದ್ದ ರೂಮಿನ ಕಡೆಗೆ ತೆರಳಿದರು. ನವದಂಪತಿಗಳಿಗಾಗಿ ರೂಮನ್ನು ಅಲಂಕರಿಸಿದ್ದರು. ಮಂದವಾದ ಬೆಳಕನಲ್ಲಿ ಹೂವಿನ ಹಾರಗಳಿಂದ ಅಲಂಕೃತವಾದ ಪರಿಮಳ ರೂಮಿನಲ್ಲಿ ಹರಡಿತ್ತು. ಅವಳನ್ನು ಮಂಚದ ಮೇಲೆ ಕೂರಿಸಿದ. ಅವಳು ಕಂಪಿಸುತ್ತಿರುವಳೆಂಬ ಅನುಭವವಾಗಿತ್ತು.

''ಯಾಕೆ ಪೂರ್ಣಿಮಾ ಭಯಾನ ?'' ಆತ್ಮೀಯತೆ ತೋರಿ ಅವಳ ಭುಜಗಳ ಮೇಲೆ ಕೈ ಇಟ್ಟ. ಅವನ ಮೈಯ ಬಿಸಿ ಶಾಖ ತನ್ನನ್ನು ತಟ್ಟುತ್ತಿದೆಯೆಂದೆನಿಸಿ ಅವಳು ಕಣ್ಣುಗಳನ್ನು ಮುಚ್ಚಿಕೊಂಡಳು.

''ಏನಾದ್ರೂ ಮಾತ್ನಾಡು ಪೂರ್ಣಿಮಾ... ''ಅವಳನ್ನು ಉತ್ತೇಜನ ಗೊಳಿಸುವಂತೆ ನುಡಿದ.

''ಏನ್ಮಾಡ್ಲೀ... ಮಾತುಗಳೇ ನೆನಪಿಗೆ ಬರ್ತಿಲ್ಲ...''

''ನಿನ್ನ ವಿಷಯ ಹೇಳು...''

''ನನ್ನ ವಿಷಯ ಏನಿದೆ? ಎಲ್ಲಾ ನಿಮಗೆ ತಿಳಿದದ್ದೇ... ನಿಮ್ಮ ವಿಷಯ ಹೇಳಿ ಕೇಳ್ತೀನಿ.''

ನನ್ನ ವಿಷಯವೂ ಅಷ್ಟೇ. ನಿನಗೆ ಎಲ್ಲಾ ಗೊತ್ತೇ ಇದೆ.... ನಮ್ಮಿಬ್ಬರ ಮದುವೆ ನೆರವೇರಲಿದೆ ಎಂದು ತಿಳಿದಾಗಿನಿಂದ ಕಾತುರದಿಂದ ನಿರೀಕ್ಷಿಸುತ್ತಿದ್ದ ಸುಘಳಿಗೆ ಬಂದಿತ್ತು. ಆದರೆ ಏಕೋ ಏನೋ ತಬ್ಬಿಬ್ಬುಗೊಂಡಿದ್ದ. ಈಗ ಇಲ್ಲಿ ತಾವು ಇಬ್ಬರೇ. ತಮ್ಮಿಬ್ಬರನ್ನು ರಿಸ್ಟರ್ಬ್ ಮಾಡುವವರು ಯಾರಿಲ್ಲ.ಆದರೂ ಏಕೋ ಏನೋ ಅವನು ಹಿಂಜರಿಯುತ್ತಿದ್ದ. ಅದನ್ನು ಅವಳು ಅರ್ಥೈಸಿದ್ದೇ ಬೇರೆ.

''ನಾನು ಎಷ್ಟಾಗಲೀ ಹೆಣ್ಣು ಹುಡುಗಿ. ನಾನಾಗಿಯೇ ಏನು ಮಾತನಾಡುವುದು?

ಇವನಿಗೆ ಅಷ್ಟು ತಿಳಿಯಬೇಡವೇ ? ನಾನೋ ಡೈವೋರ್ಸಿ...."

"ಏನು ಯೋಚಿಸ್ತಿದೀಯಾ ಪೂರ್ಣಿಮಾ....?"

"ಏನೂ ಇಲ್ಲ..."

"ಏನೋ ಇದೆ... ಇಲ್ಲದಿದ್ದರೆ ಇಷ್ಟು ಮೌನ ಏಕೆ ?"

"ಹಿಂದೆ ಮುಂದೆ ಯೋಚಿಸದೇ ನನ್ನನ್ನು ಮುದವೆಯಾದಿರಲ್ಲ... ಯಾವುದಾದರೂ ಬಲವಂತಕ್ಕೆ ಕಟ್ಟುಬಿದ್ದು ಮದುವೆಯಾಗಿಲ್ಲ ತಾನೇ ...."

"ಈಗ ಈ ಸಮಯದಲ್ಲಿಯಾಕೆ ಅನುಮಾನ ? ಅಥವಾ ನನ್ನನ್ನು ಪರೀಕ್ಷಿಸುವ ವಿಧಾನವೋ... ?" ನಗೆ ಬೆರೆಸಿ ಕೇಳಿದ.

"ನಾನ್ಯಾಕೆ ನಿಮ್ಮನ್ನು ಪರೀಕ್ಷೆ ಮಾಡಲಿ ? ನನಗೆ ಆ ಅರ್ಹತೆ ಎಲ್ಲಿದೆ ?"

"ಹಾಗೆಲ್ಲಾ ಮಾತನಾಡಬೇಡ... ನೀನೆಲ್ಲಿ ನಾನೆಲ್ಲಿ ? ಹೆಂಡತಿಯನ್ನು ಸಾಕುವ ಯೋಗ್ಯತೆ ಇಲ್ಲದಿದ್ದರೂ, ಪ್ರೀತಿಗೆ ತಲೆಬಾಗಿ ಮದುವೆಗೆ ಒಪ್ಪಿಕೊಂಡೆ. ... ಈಗ ನಾನೊಂದು ಮಾತು ಹೇಳಿದ್ರೆ ನೀನು ಬೇಸರ ಮಾಡ್ಕೋ ಬಾರದು."

"ಏನು ಹೇಳಿ ದಿವಾಕರ್... ನಿಮ್ಮ ಮನಸ್ಸಿನಲ್ಲಿ ಏನೇ ಸಂಶಯವಿದ್ದರೂ ನಿಸ್ಸಂಕೋಚವಾಗಿ ಹೇಳಿ. ನನಗೆ ಬೇಜಾರೇನಿಲ್ಲ."

"ಅದೂ... ಅದೂ... ನಾನು ಬಹಳ ಯೋಚಿಸಿ ಒಂದು ತೀರ್ಮಾನಕ್ಕೆ ಬಂದಿದೀನಿ.. ಹೇಳಿದ್ರೆ ನೀನು ಏನಂದು ಕೊಳ್ತೀಯೋ ಅಂತ."

"ನಾನು ಏನೂ ತಿಳ್ಕೊಳುಲ್ಲ ಹೇಳೀಪ್ಪಾ..." ಒತ್ತಾಯಿಸಿದಳು.

"ನಿನಗೆ ಮಕ್ಕಳು ಅಂತಂದ್ರೆ ಇಷ್ಟಾನಾ ?"

"ಹುಂ... ಇಷ್ಟ.. ನಿಮಗೆ ಇಷ್ಟ ಇಲ್ಲವಾ ?"

"ನನಗೂ ತುಂಬಾ ಇಷ್ಟ.ಆದರೆ ನಾನು ಈಗಲೇ ಸದ್ಯಕ್ಕೆ ಮಗುವಿನ ಜವಾಬ್ದಾರಿ ಹೊರಲು ಸಿದ್ದನಾಗಿಲ್ಲ... ನನಗೆ ಕೆಲಸ ಸಿಗುವವರೆಗೆ ಮದುವೆ ಆಗುವುದೇ ಬೇಡಾಂತಿದ್ದೆ. ಆದರೆ ಈಗ ಕೆಲಸ ಸಿಕ್ಕಿ ನಾನು ಸಂಪಾದಿಸುವ ವರೆಗೆ ಮಕ್ಕಳಾಗದಿರುವಂತೆ ನಾವು ಪ್ಲಾನ್ ಮಾಡುವುದು ಒಳ್ಳೆಯದು ಅಂತ ನನ್ನ ಅನಿಸಿಕೆ..." ಉಗುಳು ನುಂಗಿದ.

"ಓ... ಇಷ್ಟೇ ತಾನೇ. ನಿಮ್ಮ ಅಭಿಪ್ರಾಯಕ್ಕೆ ನನ್ನದೇನೂ ಅಭ್ಯಂತರವಿಲ್ಲ. ಇದೇ ಸಲಹೆಯನ್ನೇ ಗಾಯತ್ರಿ ನನಗೆ ಕೊಟ್ಟಿದ್ದು..."

"ಓ... ನಮ್ಮ ಪರ್ಸನಲ್ ವಿಷಯಕ್ಕೆ ಅವರ ಸಲಹೆಯೋ...?"

"ಅವರು ಸಲಹೆ ಕೊಟ್ಟಿದ್ದು ನಮ್ಮ ಒಳ್ಳೇದಕ್ಕೆ. .. ಒಂದೆರಡು ವರ್ಷ ಹಾಯಾಗಿ ಎಂಜಾಯ್ ಮಾಡಿ... ಮಕ್ಕಳು ಹುಟ್ಟಿಬಿಟ್ಟರೆ ಜವಾಬ್ದಾರಿ ಹೆಚ್ಚುತ್ತೆ. ಗಂಡ ಹೆಂಡಿರಲ್ಲಿ ಅಂತರಬರುತ್ತೆ" ಅಂತ ಏನೇನೋ ಹೇಳಿದ್ರು.

"ಈಗ ಅವರೇ ಪ್ರೆಗ್ನೆಂಟ್... ಅವರಿಬ್ಬರಲ್ಲಿ ಏನೂ ಅಂತರವಿಲ್ಲವಲ್ಲ...."

"ಅವರು ಏಳೆಂಟು ವರ್ಷ ಒಬ್ಬರನ್ನೊಬ್ಬರು ಪ್ರೀತಿಸುತ್ತಾ ಕಾಲ ಕಳೆದಿದಾರೆ. ಅದೆಲ್ಲಾ ಅವರ ಪರ್ಸನಲ್ ವಿಷಯ."

''ಅದನ್ನೇ ನಾನು ಹೇಳಿದ್ದು. ಇದು ನಮ್ಮ ಪರ್ಸನಲ್ ವಿಷಯ. ಸದ್ಯಕ್ಕೆ ಮಕ್ಕಳಾಗದಿರುವಂತೆ ಎಚ್ಚರಿಕೆ ವಹಿಸಬೇಕಾದರೆ, ಈಗಲೂ ನಾವು ಮೊದಲಿನಂತೆ ದೂರ ದೂರವೇ ಇರಬೇಕು'' ಅವಳನ್ನು ಓರೆ ಗಣ್ಣಿನಿಂದ ನೋಡಿದ.

''ಸದ್ಯಕ್ಕೆ ನಾವು ದೂರ ದೂರ ಇರೋದೆ ಒಳ್ಳೇದು ದಿವಾಕರ್...ನಾನೂ ಸಹ ಇಷ್ಟು ಬೇಗ ಈ ಮದುವೆಗೆ ಪ್ರಿಪೇರ್ ಆಗಿರಲಿಲ್ಲ. ನನ್ನ ಮನಸ್ಸಿನಲ್ಲಿ ಇನ್ನೂ ತೊಳಲಾಟ ಇದ್ದೇ ಇದೇ.''

''ಎಂಥಾ ತೊಳಲಾಟ ?''

''ನಿಮಗೆ ಇದು ಮೊದಲನೇ ಮದುವೆ. ಪರಿಶುದ್ಧರಾಗಿರುವವರು, ನಾನು ಆ ಭಂಡನ ಅತ್ಯಾಚಾರಕ್ಕೆ ಒಳಗಾದವಳು. ನನ್ನ ಬಗ್ಗೆ ನನಗೇ ಅಸಹ್ಯವೆನಿಸುತ್ತೆ. ನಾನು ನಿಮಗೆ ಅನ್ಯಾಯ ಮಾಡಲಾರೆ.''

''ಛೇ... ಹಾಗೆಲ್ಲಾ ಮಾತಾಡಬೇಡ ನೀನು ನನ್ನ ಪತ್ನಿ. ನಿನ್ನನ್ನು ಗೌರವಿಸುವುದು, ಆದರಿಸುವುದು ನನ್ನ ಕರ್ತವ್ಯ.... ಈ ಪ್ರೀತಿಗೆ ನೀನು ಮಾನ್ಯತೆ ಕೊಡದಿದ್ದರೆ, ನಿನಗೆ ನೀನೇ ಮೋಸ ಮಾಡಿಕೊಂಡಂತಾಗುತ್ತದೆ.ಇದಕ್ಕೆ ನಾನು ಅವಕಾಶ ಕೊಡುವುದಿಲ್ಲ. ''

''ನನಗೂ ನಿಮ್ಮಿಂದ ದೂರ ದೂರವೇ ಇರಬೇಕೆಂಬ ಇರಾದೆ ಇಲ್ಲ. ಆದರೆ ನನಗೆ ಸ್ವಲ್ಪ ಸಮಯಬೇಕು...''

''ಎಷ್ಟು ಸಮಯ ಬೇಕು ? ಒಂದು ದಿನ, ಒಂದು ವಾರ... ಒಂದು ತಿಂಗಳು... ಅಥವಾ ಒಂದು ವರ್ಷ.. ಒಂದು ವರ್ಷದ ನಂತರ,ಒಂದು ನಿಮಿಷದ ಒಳಗೆ ಈ ಅವಧಿ ಮುಗಿಯುತ್ತದೆ...'' ತಮಾಷೆಯ ನಗು ನಕ್ಕ.

''ತಮಾಷೆ ಮಾಡಬೇಡಿ ದಿವಾಕರ್... ಪ್ಲೀಸ್...''

''ಈ ರಾತ್ರಿಯ ಬಗ್ಗೆ ನಾನು ಏನೇನೋ ಕನಸನ್ನು ಕಂಡಿದ್ದೆ. ಅದನ್ನೆಲ್ಲ ನೀನು ಕೆಲವೇ ನಿಮಿಷಗಳಲ್ಲಿ ಚೂರು ಮಾಡಿಬಿಟ್ಟೆ...'' ಎಂದು ಜೋರಾಗಿ ಹೇಳುವ ತವಕವಾದರೂ ತಡೆದುಕೊಂಡ.

''ನಿನಗೆ ನೀನು ಕೇಳಿದ ಸಮಯವನ್ನು ಕೊಟ್ಟಂತಾಯಿತು... ಈಗ ನಾವು ಇಲ್ಲಿ ಸಮಯವನ್ನು ಕಳೆಯುವುದ ಹೇಗೆ ? ತಮಾಷೆಯಾಗಿ, ಸರಸರವಾಗಿ ಮಾತನಾಡಿದರೆ ನಿನಗೆ ಇಷ್ಟವಾಗುಲ್ಲ, ನಾನೇನು ಮಾಡಲಿ ?....ತನ್ನಲ್ಲೇ ಗೊಣಗಿಕೊಂಡ. ಅವಳಿಗೆ ವಿರುದ್ಧ ದಿಕ್ಕಿಗೆ ತಿರುಗಿ ಮಲಗಿದ''

''ನನಗೆ ಏನಾದ್ರೂ ಹೇಳಿದ್ರಾ ದಿವಾಕರ್....?''

''ಇಲ್ಲವಲ್ಲ.. ರಾತ್ರಿ ಮಲಗುವಾಗ ನಾನು ದೇವರ ಸ್ತೋತ್ರವನ್ನು ಹೇಳಿಕೊಳ್ಳುವ ವಾಡಿಕೆ. ಅದನ್ನೇ ಹೇಳಿಕೊಳ್ಳುತ್ತಿದ್ದೆ... '' ತನ್ನಲ್ಲೇ ನಕ್ಕ. ಪೂರ್ಣಿಮಾಳ ಕಣ್ಣುಗಳು ತುಂಬಿಬಂದವು. ಅದು ಚಂದ್ರನನ್ನು ಮರೆಯಲಾಗದ, ಅಸಹಾಯಕತೆಗೋ, ದಿವಾಕರನ ನಿಷ್ಕಳಂಕ ಪ್ರೀತಿಗೋ, ಅವಳಿಗೆ ತಿಳಿಯದು.

ನನ್ನನ್ನು ಕ್ಷಮಿಸಿ ದಿವಾಕರ್..... ತನ್ನಲ್ಲೇ ಹೇಳಿಕೊಂಡಳು. ಆ ಮಧುರರಾತ್ರಿ

ನೀರವತೆಯಿಂದ ತುಂಬಿತ್ತು. ಸರಸ ಸಂಭಾಷಣೆಯ ಪಿಸುಮಾತುಗಳ ಶಬ್ದವಿಲ್ಲ, ಸಲ್ಲಾಪದ ಕಚುಗುಳಿಯಿಲ್ಲ ಮದುವೆ ಗೊತ್ತಾಗಿದ್ದ ಸಮಯದಿಂದ ನಡೆಸಿದ್ದ ಕೀಟಲೆ, ಕುಚೇಷ್ಟೆಯ ಮಾತುಗಳನ್ನೇ ಮೆಲುಕು ಹಾಕುತ್ತಾ ನಿದ್ರಿಸಲು ಪ್ರಯತ್ನಿಸಿದ ದಿವಾಕರ. ತನ್ನಿಂದ ತನ್ನ ಮಾತುಗಳಿಂದ ಅವನಿಗೆ ನಿರಾಸೆಯಾಗಿದೆ ಎಂದು ತಿಳಿದೂ, ತಾನಾಗಿಯೇ ಅವನಿಗೆ ತನ್ನನ್ನು ಒಪ್ಪಿಸಿಕೊಳ್ಳಲು ಸಿದ್ಧಳಾಗಿರದ ಪೂರ್ಣಿಮಾ ತೆರೆದ ಕಣ್ಣುಗಳಿಂದ ಪಕ್ಕದ ಗೋಡೆಯನ್ನೇ ವೀಕ್ಷಿಸುತ್ತಿದ್ದಳು.

ತನ್ನ ಪಕ್ಕದಲ್ಲಿ, ತನ್ನ ಕೈಗೆ ಎಟುಕುವಷ್ಟು ಅಂತರದಲ್ಲಿ ಮಲಗಿರುವವಳು ನನ್ನ ಧರ್ಮಪತ್ನಿ... ಅವಳ ಮೇಲೆ ನನಗೆ ಪೂರಾ ಅಧಿಕಾರವಿದೆ.ಆದರೆ ಆ ಹಕ್ಕನ್ನು ನಾನು ಚಲಾಯಿಸಲಾರೆ. ಯಾವುದೇ ಕಾರಣಕ್ಕೂ ನಾನು ಅವಳಿಗೆ ನೋವನ್ನುಂಟು ಮಾಡಲಾರೆ. ಹಳೆಯ ನೋವನ್ನು ಅವಳು ಪೂರಾ ಮರೆಯುವಂತೆ, ನಾನುಅವಳಿಗೆ ಸಹಕಾರಿಯಾಗಿರಬೇಕು. ಯಾವುದೇ ಕಾರಣದಿಂದ ದುಡುಕದೇ ಅವಳನ್ನು ಪ್ರೀತಿಯಿಂದ ತನ್ನವಳನ್ನಾಗಿ ಮಾಡಿಕೊಳ್ಳಬೇಕು.

ಮೆತ್ತನೆಯ ಹಾಸಿಗೆ ಒತ್ತುವಂತಾಗಿತ್ತು. ರೂಮಿನಲ್ಲಿ ಹರಡಿದ್ದ ಪರಿಮಳ ಉಸಿರು ಕಟ್ಟುವಂತಾಗಿತ್ತು. ಮಂಚದ ಮೇಲೆ ಇಳಿ ಬಿಟ್ಟಿದ್ದ ಹೂವಿನ ಮಾಲೆಗಳು ಅವನನ್ನು ಅಣಕಿಸುವಂತೆ, ಅತ್ತಿಂದಿತ್ತ ತುಯ್ದಾಡುತ್ತಿದ್ದವು. ಪೂರ್ಣಿಮಾಳ ಉಸಿರಾಟದ ಶಬ್ದ ಕೂಡಾ ಕೇಳುವಷ್ಟು ರೂಮು ನಿಶ್ಯಬ್ಧತೆಯಿಂದ ಕೂಡಿತ್ತು. ರೂಮಿನ ಮಂದ ಬೆಳಕು ಕಣ್ಣಿಗೆ ಚುಚ್ಚುತ್ತಿತ್ತು. ಕಣ್ಣುಗಳನ್ನು ಮುಚ್ಚಿಕೊಂಡ. ನಿದ್ರಾದೇವಿ ಸಹ ಅವನಿಂದ ದೂರ ಸರಿದಿದ್ದಳು. ಆದರೆ .... ತನ್ನಿಂದ ಯಾವ ಅಪಚಾರವೂ ಆಗಿಲ್ಲ, ನಮ್ಮಿಬ್ಬರ ಪ್ರೀತಿ ಅನುಪಮವಾದುದು... ಎಂದು ತನ್ನಲ್ಲೇ ಹೇಳಿಕೊಂಡು ಆಗಾಗ್ಗೆ ಕಣ್ಣುಬಿಟ್ಟು ಪೂರ್ಣಿಮಾಳ ಕಡೆ ತಿರುಗಿ ನೋಡುತ್ತಿದ್ದ. ಅವಳು ಒಮ್ಮೆಯಾದರೂ ತನ್ನ ಕಡೆ ತಿರುಗಿ ನೋಡಿದರೆ... ಎಂದು ಆಸೆಯ ಕಣ್ಣುಗಳಿಂದ ಅವಳ ಕಡೆಗೆ ತಿರುಗುತ್ತಿದ್ದ.

ಈ ರಾತ್ರಿ ಯಾಕೆ ಇಷ್ಟು ದೀರ್ಘವಾಗಿದೆ. ಬೇಗ ಬೆಳಗಾಗಬಾರದೆ... ಪೂರ್ಣಿಮಾ ಒಂದೊಂದು ಗಳಿಗೆಯನ್ನೂ ಒಂದೊಂದು ಯುಗದಂತೆ ಕಳೆದಳು. ಬೆಳಕು ಹರಿಯಿತು. ಎದ್ದು ಕುಳಿತಳು. ಗಾಢವಾಗಿ ನಿದ್ರಿಸುತ್ತಿದ್ದ ದಿವಾಕರನನ್ನೇ ಅವಲೋಕಿಸಿದಳು. ಮುಗ್ಧ ಮಗುವಿನಂತೆ ಸೌಮ್ಯವಾಗಿ ಮಲಗಿದ್ದವನನ್ನು ಕಂಡು ಮಂದಹಾಸ ಮೂಡಿತು. ರಾತ್ರಿಯ ನೆನಪಾಗಿತ್ತು. ಒಂದು ರಾತ್ರಿ ಕಳೆದೇ ಹೋಯ್ತು. ತನ್ನ ಭಾವನೆಗಳಿಗೆ ಮನ್ನಣೆ ಇತ್ತು. ಯಾವ ಆರೋಪವನ್ನು ಮಾಡದೇ ತನ್ನ ಪಾಡಿಗೆ ತಾನು ಮಲಗಿದ ಎಂದು ಅವಳಿಗೂ ಅವನ ಮೇಲೆ ಗೌರವ ಮೂಡಿತು. ಮೆಲ್ಲನೆ ಬಾಗಿ ಅವನ ಮುಖದ ಬಳಿ ತನ್ನ ಮುಖವನ್ನು ತಂದಳು. ಮೆಲ್ಲಗೆ ಅವನ ಹಣೆಯ ಮೇಲೆ ತುಟಿಗಳನ್ನು ಒತ್ತಿದಳು. ಅವನ ಕೈಗಳು ಸರ್ರನೆ ಅವಳ ಬೆನ್ನನ್ನು ಬಳಸಿದವು. ಹಾಯ್... ಅವಳು ಕಿರುಚಿದಳು.

''ಗುಡ್ ಮಾರ್ನಿಂಗ್ ಮೇಡಂ....''ಮುಗುಳ್ನಕ್ಕ.

''ಎಚ್ಚರವಾಗಿದೀರಾ...'' ಕೊಸರಿಕೊಳ್ಳಲು ಹೆಣಗಾಡಿದಳು.

''ನೀನು ನನ್ನ ಮುಖದ ಮೇಲೆ ಬಾಗಿದ ಕೂಡಲೇ ಎಚ್ಚರವಾಯ್ತು.... ಆದರೆ ಆ ಮಧುರ ಕ್ಷಣಗಳನ್ನು ಅನುಭವಿಸುವ ಆಸೆಯಿಂದ ಹಾಗೆ ಮಲಗಿದ್ದೆ'' ಅವಳು ನಾಚಿದಳು.

''ಥೂ... ನೀವು ತುಂಬಾ ಕೆಟ್ಟವರಪ್ಪಾ...''

''ನಾನು ಕೆಟ್ಟೋನಾ?.... ನನ್ನ ಪಾಡಿಗೆ ನಾನು ಮಲಗಿದ್ದೆ. ನೀನೇ ಅಲ್ವಾ ನನ್ನನ್ನು ಎಬ್ಬಿಸಿದ್ದು...''

''ಸರಿ.... ಇನ್ನೂ ಮಲಗಿರಬೇಕೂಂತ ಆಸೆ ಇದ್ರೆ ಮಲಿಗಿರಿ. ನಾನು ಎದ್ದೆ...'' ಏಳಲು ಹೊರಟವಳ ಸೊಂಟ ಹಿಡಿದ.

''ನಾನು ಹೀಗೆ ಮಲಗಿರ್ತೀನಿ. ನೀನು ಹೀಗೆ ನನ್ನ ಬಳಿಯೇ ಕೂತಿರು... ಸಮಯ ಸರಿದುದ್ದೇ ಗೊತ್ತಾಗುಲ್ಲ''ಅವಳು ಅವನಿಗೆ ಒರಗಿ ಕುಳಿತಳು. ಈ ಸಮಯ ಹೀಗೆ ನಿರಂತರವಾಗಿರಲಿ ಎಂದು ಆಸೆ ಪಟ್ಟರೂ, ಹಾಗೇ ಎಷ್ಟು ಹೊತ್ತು ಇರಲು ಸಾಧ್ಯ ? ಇಬ್ಬರೂ ಎಚ್ಚೆತ್ತು ಎದ್ದರು.

''ಇವತ್ತು ನಿಮ್ಮ ತಾಯಿ ಅವರೆಲ್ಲಾ ಊರಿಗೆ ಹೊರಡ್ತಿದಾರಲ್ಲ, ಮನೆಗೆ ಹೋಗಿ ಬರೋಣ್ವಾ ?''ಅವನು ಕೇಳಿದಾಗ ತಲೆಯಾಡಿಸಿದಳು.

''ಹಾಗಾದ್ರೆ ಬೇಗ ಸಿದ್ಧರಾಗೋಣ... ಕಾಫಿ ತರಿಸ್ಲಾ...''ಎನ್ನುತ್ತಾ ಬೆಲ್ ಮಾಡಿದ. ಬಂದ ಅಟೆಂಡರ್‌ಗೆ, ಕಾಫಿ ತಿಂಡಿಗೆ ಆರ್ಡರ್ ಕೊಟ್ಟು, ಬಾತ್‌ರೂಂ ಕಡೆ ನಡೆದ. ಪೂರ್ಣಿಮಾ ಕಿಟಕಿ ಪರದೆ ಸರಿಸಿ ಹೊರಗಿನ ಚಲನ ವಲನಗಳನ್ನು ಗಮನಿಸಿದಳು. ತಾನು ಮಾಡಿದ್ದುಸರಿಯೇ....? ಅದೇ ವಿಷಯ ಅವಳನ್ನು ಕೊರೆಯುತ್ತಿತ್ತು.

ಬ್ರೇಕ್‌ಫಾಸ್ಟ್ ಮುಗಿಸಿ, ಇಬ್ಬರೂ ಮನೆಗೆ ಬಂದರು. ಎಲ್ಲರೂ ಅವರಿಬ್ಬರನ್ನು ಆದರದಿಂದ ಸ್ವಾಗತಿಸಿದರು. ಗಾಯತ್ರಿ ಪೂರ್ಣಿಮಾಳನ್ನು ಮಹಡಿಯ ಮೇಲೆ ಕರೆದೊಯ್ದು ರಾತ್ರಿಯ ಅನುಭವಗಳ ಬಗ್ಗೆ ಕೇಳಿದಳು. ಪೂರ್ಣಿಮಾ ಉತ್ತರಿಸಲಿಲ್ಲ, ಅವಳ ಮುಖ ನಾಚಿಕೆಯಿಂದಕೆಂಪೂ ಆಗಿರಲಿಲ್ಲ.

''ನೀನು ದಿವಾಕರ್‌ನಿಗೆ ನಿರಾಸೆ ಮಾಡಲಿಲ್ಲ ತಾನೇ....?''

''ದಿವಾಕರ ನನ್ನ ಬಳಿಗೇ ಬರಲಿಲ್ಲ''

''ಅವನಾಗಿಯೇ ಬರಲಿಲ್ಲವೋ ... ನೀನು ಬಳಿಗೆ ಸೇರಿಸಲಿಲ್ಲವೋ...''

''ನಮಗೆ ಈಗಲೇ ಮಗುವಾಗುವುದು ಬೇಡ ಅಂತ ನಾವು ಇಬ್ಬರೂ ನಿರ್ಧರಿಸಿ, ದೂರ ದೂರವೇ ಮಲಗಿದೆವು...''

''ಪೆದ್ದಿ.... ಈಗಲೇ ಮಗುವಾಗುವುದು ಬೇಡವಾದರೆ, ಫ್ಯಾಮಿಲಿ ಪ್ಲಾನಿಂಗ್ ವಿಧಾನಗಳು ಬೇಕಾದಷ್ಟಿವೆ ಅಂತ ನಾನು ಮೊದಲೇ ಹೇಳಿರಲಿಲ್ವಾ ? ನಿಮಗಿಬ್ಬರಿಗೂ ಅದು ಅರ್ಥವಾಗಬೇಕಾಗಿತ್ತು...''

''ನಾನು ಅದನ್ನೆಲ್ಲಾ ಹೇಗೆ ಡಿಸ್ಕಸ್ ಮಾಡಲಿ ?''

''ನೀನು ಡಿಸ್ಕಸ್ ಮಾಡದೇ ಇನ್ನೇನು ನಾನು ಡಿಸ್ಕಸ್ ಮಾಡೋಕೆ ಆಗುತ್ತಾ ?

ಭಾಸ್ಕರನಿಗೆ ಹೇಳ್ತೀನಿ... ಅವನು ದಿವಾಕರನ ಹತ್ತಿರ ಮಾತಾಡ್ತಾರೆ... ಬೇಡ ಬಿಡು. ನಾನು ಈಗಲೇ , ನನ್ನ ಡಾಕ್ಟರ ಬಳಿಗೆ ನಿನ್ನನ್ನು ಕರೆದೊಯ್ತೀನಿ..ಅವರು ಸರಿಯಾದ ಸಲಹೆ ನೀಡ್ತಾರೆ...''

''ನನಗೆ ನಾಚಿಕೆಯಾಗುತ್ತೆ. ನಾನು ಬರುಲ್ಲ''

''ಸುಮ್ಮನೆ ಪೆದ್ದು ಪೆದ್ದಾಗಿ ಮಾತ್ನಾಡಿ, ಖುಷೀನ ಹಾಳು ಮಾಡ್ಕೋ ಬೇಡಿ. ಲೈಫ್ ಇರೋದೇ ಎಂಜಾಯ್ ಮಾಡೋಕೆ. ಸುಲಭ ಉಪಾಯಗಳು ಇರುವುದು ನಮ್ಮ ಅನುಕೂಲಕ್ಕಾಗಿ. ನಾಚಿಕೊಂಡರೆ ನಮಗೇ ಕಷ್ಟ. ಎಷ್ಟು ದಿನ ಹೀಗೆ ದೂರ ದೂರ ಇರೋಕೆ ಆಗುತ್ತೆ. ಒಂದು ದಿನ ಆಭಾಸ ಆಗುತ್ತೆ ಅಷ್ಟೆ'' ಪೂರ್ಣಿಮಾಳ ಬೆನ್ನ ಮೇಲೆ ಹಗುರವಾಗಿ ಗುದ್ದಿದಳು. ಬಲವಂತವಾಗಿ ಹೊರಡಿಸಿದಳು. ಭಾಸ್ಕರನಿಗೆ, ದಿವಾಕರನೊಡನೆ ಮಾತನಾಡುವಂತೆ ಹೇಳಿ. ''ಇಲ್ಲೇ ಹೋಗಿ ಬರ್ತೀವಿ'' ಎಂದು ಇತರರಿಗೆ ಹೇಳಿ ಹೊರಗೆ ಹೊರಟರು.

ಭಾಸ್ಕರನಿಗೂ ದಿವಾಕರನೊಡೆ ಮಾತನಾಡುವುದು ಸುಲಭವಾಗಿರಲಿಲ್ಲ. ಆದರೂ ಸ್ನೇಹದಿಂದ ''ಹೇಗಿತ್ತು ಫಸ್ಟ್ ನೈಟ್ ? ಹೊಸ ಅನುಭವ ಹೇಗನ್ನಿಸ್ತು...? '' ಕೇಳಿದ. ''ಸೊಳ್ಳೆಯ ಕಾಟವಿರಲಿಲ್ಲ, ಹಾಯಾಗಿ ಮಲಗಿ ನಿದ್ರಿಸಿದೆವು.''ಅವನೂ ತಮಾಷೆಯಾಗಿ ನುಡಿದ,

''ಸೊಳ್ಳೆಗಳು ನಿಮ್ಮಂತಹ ಪ್ರೇಮಿಗಳನ್ನು ಕಚ್ಚುಲ್ಲ ಬಿಡಿ'' ಅವನೂ ನಗುತ್ತಾ ನುಡಿದ.

''ಮೊದಲೇ ಸೊಳ್ಳೆಗಳ ಪಾಪ್ಯುಲೇಷನ್ ಜಾಸ್ತಿ. ಈ ಪ್ರೇಮಿಗಳ ರಕ್ತ ಕುಡಿದರೆ, ಅನಾಹುತವೇ ಆಗಿ ಹೋಗುತ್ತೆ ಅಷ್ಟೇ...''

''ಅದು ನಿಜ...ಅವುಗಳಿಗೂ ಮನುಷ್ಯರಂತೆ ಫ್ಯಾಮಿಲಿ ಪ್ಲಾನಿಂಗ್ ವಿಧಾನ ಅಳವಡಿಸಿದರೆ, ಪಾಪ್ಯುಲೇಷನ್ ತಾನೇ ತಾನಾಗಿ ಕಂಟ್ರೋಲ್‌ಗೆ ಬರುತ್ತೆ.''

''ಏನಂದ್ರೀ... ಫ್ಯಾಮಿಲಿ ಪ್ಲಾನಿಂಗ್... ಗೊತ್ತಾಯ್ತು ಬಿಡಿ...''

''ಹೂಂ.. ಈಗಲೇ ಮಕ್ಕಳಾಗುವುದು ಬೇಡ, ಹೆಚ್ಚು ಮಕ್ಕಳಾಗುವುದು ಬೇಡ, ಮಕ್ಕಳ ನಡುವೆ ಅಂತರವಿರಲಿ ಅಂತೆಲ್ಲಾ ಕುಟುಂಬ ಯೋಜನಾ ಸಲಹಾ ಕೇಂದ್ರದವರು ಸಲಹೆ ಕೊಡೋದು ಯಾರಿಗೆ, ನಿಮ್ಮಂಥೋರಿಗೆ, ನಮ್ಮಂಥೋರಿಗೆ... ಅದರ ಸದುಪಯೋಗವನ್ನು ಪಡೆಯುವುದು ನಮ್ಮಗಳ ಕರ್ತವ್ಯ'' ದಿವಾಕರ ಅರ್ಥವಾದವನಂತೆ ನಕ್ಕ.

ನಮ್ಮ ಗಾಯತ್ರಿ ತುಂಬಾ ಜಾಣೆ. ಮುಖ ನೋಡಿಯೇ ಎಲ್ಲಾ ಊಹಿಸಿಬಿಡ್ತಾಳೆ ಅದಕ್ಕೆ ನಿಮ್ಮಿಬ್ಬರಿಗೂ ಅನುಕೂಲವಾಗಲಿ ಅಂತ, ಪೂರ್ಣಿಮಾಳನ್ನು ಡಾಕ್ಟರರ ಬಳಿಗೆ ಕರೆದುಕೊಂಡು ಹೋಗಿದಾಳೆ. ದಿವಾಕರ ಸುಮ್ಮನೇ ತನ್ನ ಅಂಗೈ ಉಜ್ಜಿಕೊಂಡ. ಟಿ.ವಿ.ಯಲ್ಲಿ ಬರುವ ಅಡ್ವರ್ಟೈಸ್‌ಮೆಂಟ್‌ಗಳ್ನು ನೋಡಿದ್ದ. ಹೆಂಗಸರುಗಳಿಗಾಗಿ ಮಾತ್ರೆಗಳ ಸೇವನೆಯ ಸಲಹೆಗಳನ್ನು ಕೇಳಿಸಿಕೊಂಡಿದ್ದ. ಒಳ್ಳೆಯದೇ ಆಯ್ತು. ಪೂರ್ಣಿಮಾಳೇ ಈ ವಿಷಯವನ್ನು ನನಗೆ ಹೇಳಲಿ... ತಾನಂತೂ, ಅವಳಾಗಿಯೇ ಒಪ್ಪುವವರೆಗೆ, ಅವಳ ಸಂಗಸುಖವನ್ನು

ಬಯಸುವುದಿಲ್ಲ ಎಂದುಕೊಂಡ. ಆದರೆ ಹಿಂದಿನ ರಾತ್ರಿ ತಮ್ಮಿಬ್ಬರ ನಡುವೆ ನಡೆದ ಮಾತನ್ನು ಭಾಸ್ಕರನಿಗೆ ತಿಳಿಸಲಿಲ್ಲ.

ಅವರಿಬ್ಬರೂ ಹಿಂತಿರುಗಿದ ಮೇಲೆ ಎಲ್ಲರೂ ಒಟ್ಟಿಗೆ ಕುಳಿತು ಊಟ ಮಾಡಿದರು. ಕೇಶವ ತನ್ನ ಪತ್ನಿ ಹಾಗೂ ತಂಗಿಯೊಡನೆ ಊರಿಗೆ ಹೊರಟ. ದಿವಾಕರ ತನ್ನ ತಂದೆ ತಾಯಿಯರೊಡನೆ ಸ್ವಲ್ಪ ಹೊತ್ತು ಮಾತನಾಡುತ್ತಿದ್ದ. ಪೂರ್ಣಿಮಾ ಒಬ್ಬಳೇ ಕುಳಿತು ಆಕಳಿಸಿದಳು.

ಡಾಕ್ಟರ್ ಹೇಳಿದ ಮಾತುಗಳು ಅವಳ ಕಿವಿಯಲ್ಲಿ ಕುಂಯ್ ಗುಟ್ಟುತ್ತಿದ್ದವು. ಮದುವೆಯಾದ ನಂತರ, ಗಂಡಹೆಂಡರಲ್ಲಿ ನಿಕಟತೆ ಹೆಚ್ಚಾಗಬೇಕಾದರೆ ಈ ದಾಂಪತ್ಯ ಸುಖ ಅತ್ಯಂತ ಮುಖ್ಯವಾದ ಪಾತ್ರ ವಹಿಸುತ್ತದೆ. ನೀವು ಡೈವೋರ್ಸ್ ಆದ ಮಾತ್ರಕ್ಕೆ ಈ ಸುಖದಿಂದ ವಂಚಿತರಾಗಬೇಕು ಅನ್ನೋದರಲ್ಲಿ ಅರ್ಥವಿಲ್ಲ. ನಿಮ್ಮಿಂದ ಸಿಗುವ ಸುಖದಿಂದ ನಿಮ್ಮ ಪತಿ ನಿಮ್ಮನ್ನು ಇನ್ನೂ ಹೆಚ್ಚು ಪ್ರೀತಿಸುತ್ತಾರೆ. ಯಾವುದೇ ಕಾರಣದಿಂದ ನೀವು ನಿಮ್ಮಪತಿಯಿಂದ ದೂರವಾದರೆ, ಅವರು ನಿಮ್ಮನ್ನೇ ದೂರ ಮಾಡಿ, ಬೇರೆ ಕಡೆ ಈ ಸುಖವನ್ನು ಅರಸಿಕೊಂಡು ಹೋಗಬಹುದು. ಅದಕ್ಕೆ ಕಾರಣ ನೀವೇ ಆಗುತ್ತೀರಿ. ಇಂತಹ ಕಾರಣಗಳಿಂದ ಎಷ್ಟೋ ಸಂಬಂಧಗಳು ಒಡೆದು ಹೋಗಿರುವ ಉದಾಹರಣೆಗಳೂ ಇವೆ.

ಪೂರ್ಣಿಮಾ ಗಲಿಬಿಲಿಗೊಂಡಳು. ಚಂದ್ರನೋ ಬಲಾತ್ಕಾರದಿಂದ ತನ್ನಿಂದ ಸುಖವನ್ನು ಕಿತ್ತುಕೊಂಡು ಅನುಭವಿಸಿದ್ದ. ಆದರೆ ಅವನೂ ಅತೃಪ್ತನಾಗಿದ್ದ. ತನಗೆ ಅದು ಸುಖ ಎಂದು ಅನಿಸಿರಲೇ ಇಲ್ಲ. ಈಗ ನೋಡಿದರೆ ಈ ಡಾಕ್ಟರು ಹೆದರಿಸುತ್ತಿದ್ದಾಳೆ. ದಿವಾಕರ ಒಳ್ಳೆಯವನು. ಅವನು ತನಗೆ ಮೋಸ ಮಾಡಲಾರ. ಚಂದ್ರನಂತೆ ಮದುವೆಗೆ ಮೊದಲು ತನ್ನನ್ನು ವಶಪಡಿಸಿಕೊಳ್ಳಲಿಲ್ಲ. ಮದುವೆಯ ರಾತ್ರಿ ಅತ್ಯಾಚಾರ ಮಾಡಲಿಲ್ಲ. ತನ್ನ ಮಾತಿಗೆ ಒಪ್ಪಿ ತನ್ನಿಂದ ದೂರವೇ ಮಲಗಿದ. ಗಂಡಸು, ಅಷ್ಟು ಸುಲಭವಾಗಿ ತನಗೆ ಸಿಗುವ ಸುಖವನ್ನು ಬಿಡುವುದಿಲ್ಲ ಎಂದು ಡಾಕ್ಟರು ಹೇಳಿದರಲ್ಲ. ಹಾಗಾದರೆ ದಿವಾಕರನಲ್ಲಿ ಏನಾದರೂ ಕೊರತೆ ಇರಬಹುದೇ... ಆ ಅನಿಸಿಕೆಯೇ ಅವಳನ್ನು ಪಾತಾಳಕ್ಕೆ ಎಸೆಯಿತು.

ಹೆಂಗಸು ನಾಚಿಕೆಯಿಂದ ತಾನಾಗಿಯೇ ಮುಂದುವರೆಯುವುದಿಲ್ಲ. ಆದರೆ ಗಂಡಸು ಹಾಗಲ್ಲ. ಆ ನಾಚಿಕೆಯ ಪರದೆಯನ್ನು ಕಿತ್ತೆಸೆಯುತ್ತಾನೆ. ದಿವಾಕರ ಒಳ್ಳೆಯವನೇ ಆದರೂ, ಎಷ್ಟು ದಿನ ಒಳ್ಳೆಯವನಾಗಿರಲು ಸಾಧ್ಯ ? ಈ ಕಾರಣದಿಂದಾಗಿ ನಿಮ್ಮಿಬ್ಬರಲ್ಲೂ ಹೊಸತರಲ್ಲೇ ಮನಸ್ತಾಪ ಹುಟ್ಟುತ್ತೆ. ಈಗಾಗಲೇ ನಿನಗೆ ಕಹಿ ಅನುಭವವಾಗಿದೆ, ನಿನ್ನ ಅವಿವೇಕದಿಂದ ದಿವಾಕರನನ್ನುಕಳೆದುಕೊಳ್ಳಬೇಡ, ಅವನನ್ನು ನೀನು ಒಪ್ಪಿಕೋ. ನಿನ್ನನ್ನು ಅವನಿಗೆ ಒಪ್ಪಿಸು.... ಇದು ನಾನು ಗೆಳತಿಯಂತೆ, ಹಿರಿಯ ಅಕ್ಕನಂತೆ ನಿನಗೆ ಕೊಡುತ್ತಿರುವ ಸಲಹೆ... ಗಾಯತ್ರಿ ಹಿಂದಿನ ರಾತ್ರಿಯೇ ಸಲಹೆ ನೀಡಿದ್ದಳು. ಪೂರ್ಣಿಮಾಳ ತಲೆ ಸಿಡಿಯತೊಡಗಿತ್ತು. ತಣ್ಣೀರಿನಲ್ಲಿ ಮುಖ ತೊಳೆದಳು. ತನ್ನ ರೂಮಿಗೆ ಬಂದು ಮಲಗಿದಳು.

ದಿವಾಕರ ಎಚ್ಚರಿಸಿದಾಗಲೇ ಅವಳಿಗೆ ಎಚ್ಚರ. ಕಾಫಿಯ ಘಂ ಎನ್ನುವ ವಾಸನೆ ಮೂಗಿಗೆ ಬಡಿಯಿತು. ಕಣ್ಣುಜ್ಜುತ್ತಾ ಎದ್ದಳು. ಟೈಂ ಎಷ್ಟು?

''ಏಳು ಗಂಟೆಯಾಗ್ತಾ ಬಂದಿದೆ. ಅದ್ಯಾಕೆ ಇಷ್ಟು ಹೊತ್ತು ಮಲಗಿದೆ. ಹುಶಾರಾಗೀದಿಯಾ ತಾನೇ... ಕಾಫಿ ತಗೋ ಕುಡಿ. ಮಂಪರು ಹೋಗುತ್ತೆ.'' ದಿವಾಕರನ ವಿಶ್ವಾಸ ಅವಳ ಬಾಯನ್ನು ಕಟ್ಟಿತು. ಬಿಸಿ ಬಿಸಿ ಕಾಫಿಯನ್ನು ನಿಧಾನವಾಗಿ ಹೀರಿದಳು. ನಿಮಗೆ? ನಿಮ್ಮ ಕಾಫಿ ಆಯ್ತಾ?

''ಈಗ ನನ್ನ ನೆನಪಾಯ್ತಾ ಮೇಡಂಗೆ?....'' ರೇಗಿಸಿದ.

''ನಿದ್ದೆ ಮಂಪರ್ರಿನಲ್ಲಿ ಏನೋ ಗೊತ್ತಾಗ್ಲಿಲ್ಲ... ಸಾರಿ... ನೀವು ಕುಡಿದಾಯ್ತಾ?''

''ಅದಕ್ಕೆಲ್ಲ ಸಾರಿ ಯಾಕೆ ? ನಾನು ಅಮ್ಮ ಅಪ್ಪನ ಜೊತೆಯಲ್ಲಿ ಕುಳಿತು ಕುಡಿದೆ. ನೀನು ಮಲಗಿದ್ಯಲ್ಲಾ ಎಬ್ಬಿಸುವುದು ಬೇಡ ಅಂತ ಅಮ್ಮನೇ ಹೇಳಿದಳು. ಎಷ್ಟು ಹೊತ್ತಾಯ್ತಲ್ಲ ಅಂತ ನಾನೇ ಎಬ್ಬಿಸಿದೆ.''

''ಥ್ಯಾಂಕ್ಯೂ ದಿವಾಕರ್ ಕಾಫಿ ತುಂಬಾ ಚೆನ್ನಾಗಿತ್ತು. ತಲೆ ನರಗಳೆಲ್ಲಾ ಸಡಿಲವಾಯಿತು.''

''ಎಲ್ಲಾದ್ರೂ ಹೊರಗೆ ತಿರುಗಾಡಿಕೊಂಡುಬರೋಣ್ವಾ ?'' ದಿವಾಕರ ಕೇಳಿದಾಗ ಅವಳು ಬೇಸರಿಸಿದಳು.

''ಬೇಡ.... ಹೀಗೆ ಮಲಗಿರೋಣ ಅಂತ ಅನ್ನಿಸ್ತಿದೆ. ನೀವೂ ಇಲ್ಲೇ ಹೀಗೇ ನನ್ನ ಬಳೀನೇ ಕೂತಿರಿ....''

''ಅದೇನು ಇಂಥಾ ಆಸೆ? ಯಾಕಿಷ್ಟು ಈ ಬಡವನ ಮೇಲೆ ಕರುಣೆ ?''

''ಆಸೆ, ಕರುಣೆ ಯಾವುದೂ ಅಲ್ಲ. ನಾನೊಂದು ತೀರ್ಮಾನಕ್ಕೆ ಬಂದಿದೀನಿ. ಬೇಗ ಊಟ ಮಾಡಿ ಬೇಗ ಹೋಟೆಲ್ಲಿಗೆ ವಾಪಸ್ಸುಹೋಗೋಣ. ಅಲ್ಲಿ ಹೇಳ್ತೀನಿ.''

''ಹೋಟೆಲ್ಲಿಗೆ ಹೋಗೋದು ಬೇಡ ಅಂತ ನಾನು ತೀರ್ಮಾನಿಸಿದ್ದೀನಿ. ಹನಿ ಮೂನ್ ಇಲ್ಲದಿದ್ದ ಮೇಲೆ, ಹೋಟೆಲ್ಲು ಹನಿಮೂನ್‌ನಲ್ಲಿ ನಮಗೇನು ಕೆಲಸ ? ಅದೇನು ಹೇಳಬೇಕೋ ಅದನ್ನು ಇಲ್ಲೇ ಹೇಳು. ಈ ಬಡವ ರಾತ್ರಿಯೆಲ್ಲಾ ನಿನ್ನ ಬಳಿ ಹೀಗೆ ಬೇಕಾದರೆ ಕೂತಿರುತ್ತಾನೆ. '' ಮತ್ತಷ್ಟು ಒತ್ತಿ ಕುಳಿತ.

''ಇಲ್ಲ ಅದನ್ನು ಅಲ್ಲೇ ನಾನು ಹೇಳೋದು.''

''ಇವತ್ತೊಂದು ರಾತ್ರಿ ಅಷ್ಟೇ. ನಾಳೆ ಬೆಳಿಗ್ಗೆ ಅಲ್ಲಿಂದ ಲಗೇಜ್ ಸಮೇತ ವಾಪಸ್....''

''ಹುಂ... ನೋಡೋಣ...''ಅವಳು ಅವನಿಗೆ ಆತುಕೊಂಡು ಕುಳಿತಳು. ಕೆಳಗಿನಿಂದ ದಿವೂ... ದಿವೂ ಎಂದು ತಾಯಿ ಕರೆದಾಗ ಇಬ್ಬರೂ ಕೆಳಗಿಳಿದು ಬಂದರು.

''ತುಂಬಾ ಹೊತ್ತಾಗಿ ಹೋದರೆ ಆಟೋ ಸಿಗುಲ್ಲ, ಆಟೋದಲ್ಲಿ ತಿರುಗಾಡುವಾಗ ಹುಶಾರಾಗಿರಬೇಕು. ಬೇಗ ಊಟ ಮಾಡಿ, ಬೇಗ ಹೊರಡಿ. ತಾಯಿ ಅವಸರಿಸಿದಾಗ, ಏನೋಹೇಳ ಹೊರಟವನನ್ನು ಪೂರ್ಣಿಮಾ ತಡೆದಳು. ಈಗಲೇ ಏನೂ ಹೇಳುವುದು ಬೇಡ ಎನ್ನುವಂತೆ ಸಂಜ್ಞೆ ಮಾಡಿದಳು. ಅವನು ಸುಮ್ಮನಾದ. ಗಾಯತ್ರಿ ಭಾಸ್ಕರರೂ ಬಂದು ಸೇರಿಕೊಂಡರು. ಊಟಕ್ಕೆ ಮಧ್ಯೆ ಗಾಯತ್ರಿ ಆಗಾಗ್ಗೆ ಪೂರ್ಣಿಮಾಳನ್ನೇ ಗಮನಿಸುತ್ತಿದ್ದಳು.

ಅವಳಲ್ಲಿ ಏನೋ ಹೊಸತನವಿದೆ ಎನ್ನುವುದನ್ನು ಗಮನಿಸಿದಳು. ಅವಳ ಕಡೆ ನೋಡಿ ಕಣ್ಣು ಹೊಡೆದು ನಕ್ಕಳು.''

ಹೋಟೆಲಿನ ರೂಮು ತಲುಪಿದ್ದಂತಯೇ ದಿವಾಕರ ಮಂಚದ ಮೇಲೆ ಹಾಸಿಗೆಯ ಮೇಲೆ ಉರುಳಿದ. ''ಮಧ್ಯಾಹ್ನವೆಲ್ಲಾ ಅಮ್ಮನ ಹತ್ತಿರ ಮಾತನಾಡಿ ಆಡಿ ಸುಸ್ತಾಗಿ ಹೋಗಿದೆ. ತುಂಬಾ ನಿದ್ದೆ ಬರ್ತಿದೆ. ಬಳಿಗ್ಗೆ ಬೇಗ ಎದ್ದು ರೂಮು ಖಾಲಿ ಮಾಡಿ ಮನೆಗೆ ಹೊರಟು ಹೋಗೋಣ'' ಪೂರ್ಣಿಮಾಳನ್ನೇ ಪರೀಕ್ಷಿಸುವವನಂತೆ ನೋಡಿದ. ಮಂದಹಾಸ ಬೀರುತ್ತಾ ಅವಳು ಬಂದು ಅವನ ಮಗ್ಗುಲಲ್ಲಿ ಕುಳಿತಳು. ಅವನು ಕಣ್ಣು ಮುಚ್ಚಿ ನಿದ್ದೆ ಬಂದವನಂತೆ ನಟಿಸಿದ.

''ನಿದ್ದೆ ಬಂದು ಬಿಡ್ತಾ ದಿವಾಕರ್.... '' ತಿವಿದಳು.

''ಹೂಂ ಬರ್ತಾ ಇದೆ....'' ಪಿಸು ದನಿಯಲ್ಲಿ ನುಡಿದ.

''ನಾನು ಏನೋ ಹೇಳಬೇಕೂಂತ ಇದ್ದೆ.''

''ಬೆಳಿಗ್ಗೆ ಹೇಳಿದ್ರೆ ಆಗುಲ್ವಾ ಚಿನ್ನಾ?''

''ಚಿನ್ನಾ? ಈ ಚಿನ್ನಾ ಯಾರು ?''

''ನೀನೇ.... ಇನ್ಯಾರು ? ನೀನೇ ನನ್ನ ಚಿನ್ನ ರನ್ನ....''ಕಣ್ಣು ಬಿಟ್ಟು ಅವಳ ಗಲ್ಲವನ್ನು ಹಿಡಿದೆತ್ತಿದ. ಅವಳು ನಿಧಾನವಾಗಿ ಕಣ್ಣು ಮುಚ್ಚಿದಳು.

''ಅದೇನೋ ಹೇಳಬೇಕೂಂತಂದೆ. ಕಣ್ಣು ಮುಚ್ಕೊಂಡು ಹೇಳ್ತೀಯಾ ? ''

''ದಿವಾಕರ್ ಐ ಲವ್ ಯೂ..''

''ಅದನ್ನು ಅಲ್ಲೇ ಹೇಳಬಹುದಿತ್ತಲ್ಲ. ಐಲವ್ ಯೂ ಟೂ... ನಾನು ಇನ್ನು ನಿದ್ದೆ ಮಾಡ್ಲಾ... ? '' ಮತ್ತೆ ಕಣ್ಣು ರೆಪ್ಪೆಗಳನ್ನು ಜೋಡಿಸಿದ.

''ಥೂ ನೀವು ತುಂಬಾ ಕೆಟ್ಟವರಪ್ಪಾ... ನನ್ನ ಮನಸ್ಸಿನಲ್ಲಿ ಏನಿದೆ ಅಂತ ಅರ್ಥಮಾಡ್ಕೋ ಬಾರದಾ ''

''ನನಗೆ ಹಾಗೆಲ್ಲಾ ಸುಲಭವಾಗಿ ಅರ್ಥವಾಗುಲ್ಲ. ನಾನು ಜಾಣನಲ್ಲ. ನೀನೇ ಹೇಳಿಬಿಡು.''

''ನನಗೆ ನಾಚಿಕೆಯಾಗುತ್ತೆ'' ಅವಳು ಕೈಗಳಿಂದ ಮುಖ ಮುಚ್ಚಿಕೊಂಡಳು. ಅವನು ಅವಳ ಕೈಗಳನ್ನು ಸರಿಸಿದ.

''ಅಂಥಾ ವಿಷಯ ಯಾವುದಪ್ಪಾ ...? ಕಿವೀಲಿ ಹೇಳ್ತೀಯಾ?... ಅವಳ ತುಟಿಯ ಬಳಿಗೆ ತನ್ನ ಕಿವಿಯನ್ನು ತಂದ... ಅವಳು ಅವನ ಕೆನ್ನೆಗೆ ಮುತ್ತಿಟ್ಟಳು''

''ಆಹಾಹಾ.... ತುಂಬಾ ಸಿಹಿಯಾಗಿತ್ತು. ಇನ್ನೊಂದು.... ಅವನ ಮುಖವನ್ನು ತಿರುಗಿಸಿ ಇನ್ನೊಂದು ಕೆನ್ನೆಗೂ ಮುತ್ತಿಟ್ಟಳು. ಅವನು ತುಟಿಗಳನ್ನು ಮುಂದಕ್ಕೆ ಒಡ್ಡಿದ. ಅವಳು ತನ್ನ ತುಟಿಗಳನ್ನು ಅವನ ತುಟಿಗಳಿಗೆ ತಗುಲಿಸಿದಳು. ಅಷ್ಟೇ ಅವನ ಬಾಹುಗಳು ಅವಳನ್ನು ಬಳಸಿದವು. ಬಿಸಿಬಿಸಿ ಚುಂಬನ, ಬೆಚ್ಚನೆಯ ಆಲಿಂಗನ ಅವರಿಬ್ಬರನ್ನು ಮೈ ಮರೆಯುವಂತೆ ಮಾಡಿತು. ಕೆಲವೇ ಕ್ಷಣಗಳಲ್ಲಿ ಅವರಿಬ್ಬರೂ ಈ ಲೋಕವನ್ನೇ ಮರೆತರು.

ಮಧುಮಧುರವಾದ, ಸುಂದರವಾದ ಅನುಭವದಲ್ಲಿ ಮುಳುಗಿ ಹೋದರು. ಮಂದವಾದ ಬೆಳಕು ಉಯ್ಯಾಲೆ ತೂಗಿತು. ಸುಮಧುರ ಪರಿಮಳ ಜೋಗುಳ ಹಾಡಿತು. ಬಾಡಿದ್ದರೂ, ಹಿತವಾದ ಸುವಾಸನೆಯನ್ನು ಬೀರುತ್ತಿದ್ದ ಹೂಗಳು ಹೂಮಳೆ ಸುರಿಸಿದವು.''

  

ತಿಂಗಳುಗಳು ಉರುಳಿದವು. ಗಾಯತ್ರಿಯ ಹೆರಿಗೆ ದಿನಗಳು ಹತ್ತಿರವಾಗಿತ್ತು. ಏಳನೇ ತಿಂಗಳಲ್ಲಿ ಗಾಯತ್ರಿಗೆ ಬೇಸರವಾಗಬಾರದೆಂದು ಆಂಟಿ ಬಳೆ ತೊಡಿಸುವ ಶಾಸ್ತ್ರವನ್ನು ನೆರವೇರಿಸಿದ್ದಳು. ಹಣ್ಣು ಹಂಪಲುಗಳನ್ನು ಮಡಿಲಿಗೆ ತುಂಬಿಸಿ ಆರತಿಯನ್ನು ಎತ್ತಿ ದೃಷ್ಟಿಯನ್ನು ನಿವಾಳಿಸಿದಳು. ಕ್ರಮತಪ್ಪದಂತೆ ಡಾಕ್ಟರ ಬಳಿಗೆ ಚೆಕಪ್‌ಗೆ ಹೋಗುತ್ತಿದ್ದುದರಿಂದ ಅವಳಆರೋಗ್ಯ ಚೆನ್ನಾಗಿತ್ತು. ಗಾಯತ್ರಿಯನ್ನು ಕಂಡಾಗೆಲ್ಲಾ ಪೂರ್ಣಿಮಾಳ ತಾಯಿಯಾಗುವ ಹಂಬಲ ಹೆಚ್ಚುತ್ತಿತ್ತು. ದಿವಾಕರನ ಕಂಪ್ಯೂಟರ್ ಕೋರ್ಸ್ ಮುಗಿಯುವುದಕ್ಕೆ ಇನ್ನು ಸಮಯವಿತ್ತು. ನಂತರವೇ ಕೆಲಸಕ್ಕೆ ಅಪ್ಲೈ ಮಾಡಬೇಕಾಗಿತ್ತು. ದಿವಾಕರನಿಗೆ ಅದೊಂದೇ ಆತಂಕವಿದ್ದುದು. ಬೇಗ ಕೆಲಸ ಸಿಗದೇ ಇದ್ದರೆ ತಾನು ತಂದೆಯಾಗುವ ದಿನಗಳನ್ನು ಮುಂದೂಡುತ್ತಲೇ ಇರಬೇಕು. ನಾನು ಪೂರ್ಣಿಮಾ, ಈಗ ಇಬ್ಬರೂ ಆನಂದದಿಂದ ದಿನಗಳನ್ನು ಕಳೆಯುತ್ತಿದ್ದೇವೆ. ಈ ಪ್ರೀತಿಯ ಫಲದ ಹಂಬಲವೂ ಇಬ್ಬರಲ್ಲಿ ಇದೆ. ಆದರೆ ನಾವುಗಳೇ ಹಾಕಿಕೊಂಡಿರುವ ಕಟ್ಟುಪಾಡು, ನಮ್ಮನ್ನು ಬಂಧಿಸಿಟ್ಟಿದೆ. ಆದರೆ ಈ ವಿಷಯವಾಗಿ ಪೂರ್ಣಿಮಾ ಎಂದೂ ತನ್ನೊಡನೆ ಚರ್ಚಿಸಿಲ್ಲ, ಯಾಕೆ?

''ದಾಂಪತ್ಯ ಜೀವನ ನಡೆಸುಕ್ಕೆ ನಾನು ಪ್ರಿಪೇರ್ ಆಗಿರಲಿಲ್ಲ, ನನಗೆ ಸಮಯಬೇಕು ಅಂತಕೇಳಿ ನನ್ನನ್ನು ನಿರಾಸೆ ಕೂಪಕ್ಕೆ ತಳ್ಳಿದ್ದಳಲ್ಲ. ಆದರೆ ಆ ಸಮಯ ಕೇವಲ ಒಂದೇ ದಿನ ಮಾತ್ರ . ತಾನೇಕೆ ಅರ್ಥ ಮಾಡಿಕೊಳ್ಳಲಿಲ್ಲ, ಅಥವಾ ಒಂದೇ ದಿನಕ್ಕೆ ಆ ದೂರ ಅವಳಿಗೂ ಬೇಡವಾಯಿತೋ ? ಮಾರನೇ ದಿನ ಅಬ್ಬಾ ಅದೆಷ್ಟು ಸತಾಯಿಸಿಬಿಟ್ಟಳು... ಆದಷ್ಟು ಬೇಗ ಒಳ್ಳೆಯ ಕೆಲಸವನ್ನು ಹುಡುಕಿ, ನಮ್ಮ ಈ ನಿಯಮ ಮುರಿಯಬೇಕು. ಮುದ್ದಾದ ಪೂರ್ಣಿಮಾಳಂತಹ ಒಂದು ಹೆಣ್ಣು ಮಗುವಾಗ ಬೇಕು. ಮೊದ್ದಾದ ನನ್ನಂತಹ ಒಂದು ಗಂಡು ಮಗುವನ್ನು ನಾನು ಅವಳಿಗೆ ಉಡುಗೊರೆಯನ್ನಾಗಿ ಕೊಡಬೇಕು. ಎರಡು ಮಕ್ಕಳು ಸಾಕು. ನಾವಿಬ್ಬರು , ನಮಗಿಬ್ಬರು ಮಕ್ಕಳು... ''

''ದಿವೂ ದಿವೂ ಬೇಗ ಬಾರೋ... ''ತಾಯಿ ಕರೆದಾಗ, ಬಾಲ್ಕನಿಯಲ್ಲಿದ್ದ ದಿವಾಕರ ದಡದಡನೆ ಕೆಳಗಿಳಿದು ಬಂದ.

''ಏನಮ್ಮಾ... ಏನಾಯ್ತಮ್ಮ, ಅಪ್ಪ ಹುಶಾರಾಗಿದಾರೆ ತಾನೇ ..''

''ಅವರು ಹುಷಾರಾಗಿದಾರೆ. ಅವರಿಗೆ ಏನೂ ಆಗಿಲ್ಲ.ಭಾಸ್ಕರ ಫೋನು ಮಾಡಿದಾರೆ. ಗಾಯತ್ರಿನ ನರ್ಸಿಂಗ್ ಹೋಂಗೆ ಅಡ್ಮಿಟ್ ಮಾಡಿದಾರಂತೆ. ನನ್ನನ್ನು ಈಗಲೇ ನರ್ಸಿಂಗ್ ಹೋಂಗೆ ಕರೆದುಕೊಂಡು ಹೋಗು. ತವರಿನ ಬೆಂಬಲವಿಲ್ಲದ ಹುಡುಗಿ. ನನ್ನನ್ನೇ ತಾಯಿ ಅಂತ ತಿಳಿದುಕೊಂಡಿದಾಳೆ...'' ದಿವಾಕರ ಸರಸರನೆ ಬಟ್ಟೆ ಬದಲಾಯಿಸಿದ.

ಪೂರ್ಣಿಮಾಳಿಗೆ ಫೋನು ಮಾಡಿದ ಮನೆಗೆ ಈಗಲೇ ಬಾ. ಅಪ್ಪ ಒಬ್ಬರೇ ಇದಾರೆ... ನಾನು ಅಮ್ಮನ್ನ ನರ್ಸಿಂಗ್ ಹೋಂಗೆ ಬಿಟ್ಟು ಬರ್ತೀನಿ'' ಎಂದು ವಿಷಯ ತಿಳಿಸಿದ.

ಗಾಯತ್ರಿಗೆ ಮದುವೆಯಾಗಿ ಹತ್ತು ತಿಂಗಳಾಗಿವೆ ಅಷ್ಟೇ. ಅವಳಿಗೆ ಸ್ವಲ್ಪ ವಯಸ್ಸಾಗಿದೆ. ಚಿಕ್ಕವಯಸ್ಸಿನಲ್ಲಿ ಮಗು ಹಡೆಯುವುದು ಕಷ್ಟವಾಗುಲ್ಲ. ವಯಸ್ಸಾದಂತೆ, ಅಷ್ಟು ಸುಲಭವಲ್ಲ... ಪಾಪ ಗಾಯತ್ರಿಗೆ ತಾಯಿಯ ಆರೈಕೆ ಶುಶ್ರೂಷೆಗಳೂ ಇಲ್ಲ. ಎಷ್ಟು ನೋವನ್ನು ಅನುಭವಿಸುತ್ತಾ ಇದಾಳೋ ನಾನು ಅವತ್ತೇ ಹೇಳಿದ್ದೆ, ಹೆರಿಗೆಗೆ ಒಂದು ತಿಂಗಳಿರುವಾಗಲೇ ರಜ ಹಾಕಮ್ಮ. ಮನೇಲಿ ವಿಶ್ರಾಂತಿ ತಗೋ ಅಂತ... ನನ್ನಂಥೋಳ ಮಾತನ್ನು ಯಾಕೆ ಕೇಳ್ತಾಳೆ ? ಕಡೇ ದಿನದವರೆಗೂ ಕೆಲಸಕ್ಕೆ ಹೋಗೋದೂ ಅಂತಂದ್ರೆ ಏನರ್ಥ ? ಆಟೋದಲ್ಲಿ ಕುಳಿತು ತಾಯಿ, ತನಗೇ ಎಂಬಂತೆ ತನ್ನಲ್ಲೇ ಹೇಳಿಕೊಳ್ಳುತ್ತಿದ್ದಳು. ದಿವಾಕರ ಪೆಚ್ಚಾಗಿದ್ದ. ಏನು ಹೇಳಬೇಕೆಂದು ಗೊತ್ತಾಗಲಿಲ್ಲ.

ನರ್ಸಿಂಗ್ ಹೋಂನಲ್ಲಿ, ಗಾಯತ್ರಿಯ ಬಳಿಗೆ ತಾಯಿ ಆತುರ ಕಾತುರಗಳಿಂದ ಹೋಗಿ ಅವಳಿಗೆ ಸಮಾಧಾನದ ಮಾತುಗಳನ್ನು ಹೇಳಿ ಧೈರ್ಯವನ್ನು ತುಂಬಿದಳು. ಭಾಸ್ಕರ ದಿವಾಕರನ ಕೈಗಳನ್ನು ಹಿಡಿದ.

''ಸ್ತ್ರೀಯರಿಗೆ ಇದು ಒಂದು ಪರೀಕ್ಷೆಯ ಕಾಲ. ಇದರಲ್ಲಿ ಗೆದ್ದು ಬಂದರೆ ಪುನರ್ಜನ್ಮ ಪಡೆದಂತೆ. ಮಡಿಲನ್ನು ತುಂಬುವ ಮಗುವಿಗಾಗಿ, ಎಷ್ಟೆಲ್ಲಾ ನೋವುಗಳನ್ನು ಅನುಭವಿಸುತ್ತಾಳೆ. ಈ ನೋವನ್ನು ತಾಯಿ ಮಾತ್ರ ಅನುಭವಿಸುತ್ತಾಳೆ. ಇದರಲ್ಲಿ ತಂದೆಗೆ ಪಾಲು ಇಲ್ಲವೇ ಇಲ್ಲ. ಗಾಯತ್ರಿ ಅನುಭವಿಸುವ ನೋವಿನಲ್ಲಿ ಅರ್ಧದಷ್ಟನ್ನಾದರೂ ನಾನು ತೆಗೆದುಕೊಳ್ಳುವಂತಿದ್ದರೆ... ಗಾಯತ್ರಿಯ ವೇದನೆಯನ್ನು ನನ್ನಿಂದ ನೋಡಲಾಗುತ್ತಿಲ್ಲ...'' ಭಾಸ್ಕರನ ಆತಂಕದಿಂದ ತುಂಬಿದ ಮುಖವನ್ನು ನೋಡಿದ.

''ನೀವು ಮನೆಗೆ ಹೋಗಿ ದಿವಾಕರ್. ಇಲ್ಲಿ ಹೇಗೂ ಗಂಡಸರನ್ನು ಒಳಗೆ ಬಿಡುವುದಿಲ್ಲ. ನಿಮ್ಮ ತಾಯಿ ಬಂದರಲ್ಲ, ನನಗೂ ಧೈರ್ಯ ಬಂತು. ಗಾಯತ್ರಿಗೂ ಬಲ ಬಂತು.''

''ಮನೆಯಿಂದ ಏನಾದ್ರೂ ಬೇಕಾಗಿದ್ರೆ ತಕ್ಷಣ ಫೋನ್ ಮಾಡಿ. ನಾನು ತಂದುಕೊಡ್ತೀನಿ. ಅಪ್ಪ ಒಬ್ರೇ ಇದಾರೆ ಮನೇಲಿ. ಪೂರ್ಣಿಮಾಗೂ ಬೇಗ ಬರೋಕೆ ಹೇಳಿದೀನಿ.''

''ನೀವುಗಳೆಲ್ಲಾ ಇಲ್ಲದೇ ಇದ್ದಿದ್ರೆ ಗಾಯತ್ರಿತುಂಬಾ ಒಂಟಿಯಾಗಿ ಬಿಡುತ್ತಿದ್ದಳು. ನಾನು ಎಷ್ಟು ಕೃತಜ್ಞನಾಗಿದ್ದರೂ, ಸಾಲದು.''

''ತುಂಬಾ ದೊಡ್ಡ ಮಾತಾಯಿತು. ಒಬ್ಬರಿಗೊಬ್ಬರು ಅಗತ್ಯವಿದ್ದಾಗ ಸಹಾಯ ಮಾಡುವುದು ಎಲ್ಲರ ಕರ್ತವ್ಯ.''

''ಈ ಕಾಲದಲ್ಲಿ ಯಾರಿಗೂ ಇನ್ನೊಬ್ಬರ ಬಗ್ಗೆ ಯೋಚಿಸಲು ಸಮಯವೇ ಇರುವುದಿಲ್ಲ, ದಿವಾಕರ್ ಜೀವನ ಅಷ್ಟು ಯಾಂತ್ರಿಕವಾಗಿ ಹೋಗಿದೆ. ಅವರವರ ತಾಪತ್ರಯ ಅವರವರಿಗೆ. ನಾವಿಬ್ಬರೂ ನಮ್ಮವರನ್ನೆಲ್ಲಾ ಬಿಟ್ಟು ಬಂದು ಅಪರಿಚಿತ ಸ್ಥಳದಲ್ಲಿ ನಿಮ್ಮಗಳ

ನೆರವಿನಿಂದ ಇಷ್ಟರ ಮಟ್ಟಿಗೆ ಇದೀವಿ. ಗಾಯತ್ರಿ ಈ ಕಷ್ಟದಿಂದ ಪಾರಾಗಿಬಿಡಲಿ.... ನನಗೆ ಅಷ್ಟುಸಾಕು. ''

''ಎಲ್ಲಾ ಒಳ್ಳೆಯದೇ ಆಗುತ್ತೆ ಭಾಸ್ಕರ್. ಡಾಕ್ಟರ್ಸ್‌ಗಳು ಇದಾರೆ. ನಿಮಗೇಕೆ ಆತಂಕ? ಅಮ್ಮ ಅವರ ಜೊತೇಲಿದಾರಲ್ಲ.''

''ಅದೊಂದೇ ಧೈರ್ಯ...''ದಿವಾಕರ ಅವನ ಕೈ ತಟ್ಟಿಅಲ್ಲಿಂದ ತೆರಳಿದ. ಗಾಯತ್ರಿಯನ್ನೊಮ್ಮೆ ನೋಡಬೇಕು, ಅವಳೊಡನೆ ಮಾತನಾಡಬೇಕು ಎನ್ನುವುದಕ್ಕೆ ಅವಕಾಶವಾಗಿರಲಿಲ್ಲ. ಸ್ವಲ್ಪ ಖಿನ್ನನಾಗಿದ್ದ.

ರಾತ್ರಿ ಹನ್ನೊಂದು ಗಂಟೆಯ ಹೊತ್ತಿಗೆ ನರ್ಸಿಂಗ್ ಹೋಂನಿಂದ ಭಾಸ್ಕರ ಫೋನು ಮಾಡಿದ್ದ. ಗಾಯತ್ರಿ ಗಂಡು ಮಗುವಿಗೆ ಜನ್ಮ ನೀಡಿದ್ದಳು. ಪೂರ್ಣಿಮಾ ದಿವಾಕರನನ್ನು ತಬ್ಬಿಕೊಂಡು ಸಂತೋಷವನ್ನು ಪ್ರಕಟಿಸಿದಳು. ದಿವಾಕರ ವಿಚಲಿತಗೊಂಡ. ಗಾಯತ್ರಿ ತಾಯಿಯಾದುದಕ್ಕೆ ಇವಳು ಇಷ್ಟು ಖುಷಿ ಪಡುತ್ತಿದಾಳಲ್ಲ. ತಾನೇ ತಾಯಿಯಾಗುವ ಸಂದರ್ಭ ಬರುವಾಗ,ಇವಳ ಕಾಲುಗಳು ನೆಲದ ಮೇಲೆ ನಿಲ್ಲುವುದಿಲ್ಲವೇನೋ, ಆಕಾಶದಲ್ಲಿಯೇ ತೇಲಾಡುವಳೇನೋ.. ಆ ದಿನವನ್ನು ಕಾಣಲು ನಾನು ಇನ್ನು ಕೆಲವು ತಿಂಗಳುಗಳವರೆಗೆ ಕಾಯಲೇಬೇಕು.

''ಬೆಳಗಾಗುವವರೆಗೆ ನಾನು ಕಾಯಬೇಕು. ಈಗಲೇ ಹೋಗಿ ಮಗುವಿನ ಮುದ್ದು ಮುಖವನ್ನು ನೋಡುವಂತಿದ್ದರೆ.....'' ಪೂರ್ಣಿಮಾ ಮತ್ತೆ ಮತ್ತೆ ಹೇಳಿದಾಗ ದಿವಾಕರ ನಕ್ಕ.

''ಅಮ್ಮ ಮನೇಲಿದ್ದಿದ್ರೆ ನಾನು ಈಗಲೇ ನರ್ಸಿಂಗ್ ಹೋಂಗೆ ಕರೆದುಕೊಂಡು ಹೋಗಿರುತ್ತಿದ್ದೆ. ಅಪ್ಪನ್ನ ಒಬ್ಬರನ್ನೇ ಬಿಟ್ಟು ಹೇಗೆ ಹೋಗೋದು ?''

''ಬೆಳಿಗ್ಗೆ ನನ್ನನ್ನು ಬೇಗ ಎಬ್ಬಿಸಿ ಬಿಡಿ ದಿವಾಕರ್. ಒಂದು ಫ್ಲಾಸ್ಕ್ ತುಂಬಾ ಬಿಸಿ ಕಾಫಿಯನ್ನು ತುಂಬಿಸಿಕೊಡಿ. ನಾನು ಹೋಗಿ, ಅಮ್ಮನ್ನ ಮನೆಗೆ ಕಳಿಸ್ತೀನಿ. ಆಮೇಲೆ ಅಲ್ಲಿಂದಲೇ ಬ್ಯಾಂಕಿಗೆ ಹೋಗ್ತೀನಿ...''

''ನಿನಗೆ ಈ ರಾತ್ರಿ ನಿದ್ದೆ ಬರುಲ್ಲ. ಬೆಳಿಗ್ಗೆ ಹೇಗೆ ಬೇಗ ಏಳ್ತೀಯಾ ?''

''ಹೇಗಾದ್ರೂ ಏಳಲೇಬೇಕು. ನೀವು ಎಬ್ಬಿಸಲೇ ಬೇಕು.''

''ಆಯ್ತು ಮಹಾರಾಣಿಯವರೇ ಅಪ್ಪಣೆ....''

''ದಿವಾಕರ್...ಈಚೀಚೆಗೆ ಹೀಗೆ ನಾಟಕೀಯವಾಗಿ ಮಾತನಾಡೋದನ್ನ ಅಭ್ಯಾಸ ಮಾಡಿಕೊಂಡಿದೀರಿ. ಯಾವುದಾದರೂ ನಾಟಕದ ಕಂಪನಿಗೆ ಸೇರಿದೀರಾ ?''

''ಹೌದು, ಸಂಸಾರ ನೌಕೆ ಎಂಬ ನಾಟಕದ ಮುಖ್ಯಪಾತ್ರಧಾರಿ ನಾನೇ. ಅಂತಃಪುರಕ್ಕೆ ತೆರಳೋಣ್ವೇ.... ''ಆಕ್ಷನ್ ಮಾಡುತ್ತಾ ಕೇಳಿದ.

''ಸುಮ್ನೆ ಬನ್ನೀಪ್ಪಾ... ಹನ್ನೆರಡು ಗಂಟೆಯಾಗಿದೆ ಎನ್ನುತ್ತಾ ಅವಲು ಮಲಗುವ ಕೋಣೆಗೆ ಬಂದಳು. ಅವನು ಅವಳನ್ನು ಹಿಂಬಾಲಿಸಿದ. ಗಾಯತ್ರಿಯ ಮಗು ಹೇಗಿರಬಹುದು . ಅಮ್ಮನ ಹಾಗೇ ? ಅಪ್ಪನ ಹಾಗೆ... ಅವಳ ಸಂಭ್ರಮ ಅವನಲ್ಲೂ ಸಂಭ್ರಮವನ್ನುಂಟು ಮಾಡಿತ್ತು. ಹೊಸದಾಗಿ ಜನ್ಮ ತಾಳಿರುವ ಮಗುವಿನ ರೂಪು ರೇಷೆಯನ್ನೇ

ಚರ್ಚಿಸುತ್ತಾ ಮಲಗಿದರು. ಮರೆಯದೇ ಅಲಾರಾಂ ಗಡಿಯಾರವನ್ನು ತಲೆಯ ಬಳಿ ಇಟ್ಟುಕೊಂಡಿದ್ದರು.''

ಅಲಾರಾಂ ಹೊಡೆದಾಗ ನಿದ್ದೆ ಕೆಟ್ಟಿತೆಂದು ಬೇಸರವಾದರೂ, ದಿವಾಕರ ಎದ್ದ. ಪೂರ್ಣಿಮಾಳ್ನು ಎಬ್ಬಿಸಿದ. ಆದಷ್ಟು ಬೇಗ ಇಬ್ಬರೂ ಸಿದ್ಧರಾದರು. ದೊಡ್ಡ ಫ್ಲಾಸ್ಕಿಗೆ ಬಿಸಿ ಬಿಸಿ ಕಾಫಿಯನ್ನು ತುಂಬಿಸಿಟ್ಟುಕೊಂಡ.

''ನಿನ್ನನ್ನು ಅಲ್ಲಿ ಬಿಟ್ಟು ಹಾಗೆ ಅಮ್ಮನನ್ನು ಕರೆದುಕೊಂಡು ಬಂದು ಬಿಡ್ತೀನಿ.'' ಅವಳು ಕೇಳದಿದ್ದರೂ ಹೇಳಿದ.

ಗಾಯತ್ರಿ ಮಲಗಿ ನಿದ್ರಿಸುತ್ತಿದ್ದಳು. ತಾಯಿಯೇ ಪಕ್ಕದ ತೊಟ್ಟಿಲಲ್ಲಿ ಮಲಗಿದ್ದ ಮಗುವನ್ನು ಎತ್ತಿಕೊಂಡು ಇವರಿಬ್ಬರಿಗೆ ತೋರಿಸಿದಳು. ಕಣ್ಣು ಮುಚ್ಚಿ ಮಲಗಿ ನಿದ್ರಿಸುತ್ತಿದ್ದ ಮಗುವನ್ನು ಕಂಡು ಇಬ್ಬರಲ್ಲೂ ಏನೋ ಒಂದು ತರಹದ ಮೈಯೆಲ್ಲಾ ಜುಂ ಎನ್ನುವ ಅನುಭವವಾಯಿತು.

''ಎಷ್ಟು ಪುಟ್ಟ ಮಗು ಅಲ್ವಾ ? ಕೆನ್ನೆ ನೋಡು ಹೇಗೆ ಮೆತ್ತಗಿದೆ. ತುಟಿ ನೋಡು ಎಷ್ಟು ಕೆಂಪಾಗಿದೆ. ಮೂಗಂತೂ ಇಲ್ವೇ ಇಲ್ಲ. ಅಬ್ಬಾ ತಲೇಲಿ ಎಷ್ಟು ಕೂದಲಿದೆ. ...'' ದಿವಾಕರ ವರ್ಣಿಸುತ್ತಾ ಹೋದಂತೆ ತಾಯಿ ಮೆಲ್ಲಗೆ ಗದರಿದಳು.

''ಚಿಕ್ಕ ಮಗುವನ್ನು ತುಂಬಾ ನೋಡಬಾರದು. ದೃಷ್ಟಿಯಾಗುತ್ತೆ'' ಎನ್ನುತ್ತಾ ಮತ್ತೆ ಮಗುವನ್ನು ತೊಟ್ಟಿಲಿನಲ್ಲಿ ಮಲಗಿಸಿದಳು.

''ಅಮ್ಮಾ ನಡಿಯಮ್ಮಾ... ಪೂರ್ಣಿಮಾ ಇಲ್ಲಿಂದಲೇ ಬ್ಯಾಂಕಿಗೆ ಹೋಗ್ತಾಳಂತೆ. ನಾನು ನಿನ್ನನ್ನು ಮನೆಗೆ ಕರೆದುಕೊಂಡು ಹೋಗ್ತೀನಿ.''

''ತಡೀ ಭಾಸ್ಕರ ಬರಲಿ. ರಾತ್ರಿಯೆಲ್ಲಾ ಎಲ್ಲಿ ತೂಕಡಿಸ್ತಾ ಕೂತಿದ್ನೋ ಈಗ ತಾನೇ ಹತ್ತಿರದಲ್ಲೇ ಒಬ್ಬ ಸ್ನೇಹಿತ ಇದಾನೆ ಹೋಗಿ ಬಂದು ಬಿಡ್ತೀನಿ ಅಂತ ಹೇಳಿ ಹೋಗಿದಾನೆ. ''

''ಅಬ್ಬಾ ಮಗುವಿಗಾಗಿ ತಂದೆ ತಾಯಿ ಎಷ್ಟು ಕಷ್ಟ ಪಡಬೇಕಲ್ವಾ ? ಗಾಯತ್ರಿ ನೋವನ್ನನುಭವಿಸಿ ಮಗುವನ್ನು ಹೆತ್ತಿದ್ದಾರೆ, ಭಾಸ್ಕರ ರಾತ್ರಿಯೆಲ್ಲಾ ನಿದ್ದೆ ಗೆಟ್ಟು ತವಕದಿಂದಕಾಲ ಕಳೆದಿದ್ದಾರೆ... ನಮಗೂ ಒಂದು ಮಗು ಹುಟ್ಟಿದರೆ ಆಗ ನೀನೂ ಹೀಗೆ ಕಷ್ಟ ಪಡಬೇಕಾಗುತ್ತದೆ. ನಾನೂ ಹೀಗೆ ಆತಂಕದಿಂದ ಕಾಲವನ್ನು ಕಳೆಯಬೇಕಾಗುತ್ತದೆ ಅಲ್ವಾ ? ''ಹೆಂಡತಿಯನ್ನು ಕೇಳಿದ.

''ಆ ಕಾಲ ಬರುಕ್ಕೆ ಇನ್ನು ಸಮಯ ಬೇಕಾದಷ್ಟಿದೆ'' ಪೂರ್ಣಿಮಾ ನಿರಾಸೆಯಿಂದ ನುಡಿದಿರಬಹುದೇ ಎಂದು ಅವಳನ್ನೇ ಪರೀಕ್ಷಿಸುವಂತೆ ನೋಡಿದ. ಹಾಗೇನೂ ಅನ್ನಿಸಲಿಲ್ಲ.

''ನಿಂಗೇನೂ ಅನ್ನಿಸ್ತಿಲ್ವಾ ಪೂರ್ಣಿಮಾ''

''ನಂಗೇನು ಅನ್ನಿಸಬೇಕು ? ಆ ಸಮಯ ಬಂದಾಗ ನಾನು ನಿಮಗೆ ನನ್ನ ಅನುಭವಗಳನ್ನೆಲ್ಲಾ ಹೇಳೇ ಹೇಳ್ತೀನಿ.'' ಗಾಯತ್ರಿ ಉಬ್ಬಿದ ಹೊಟ್ಟೆಯನ್ನಿಟ್ಟುಕೊಂಡು ಆಫೀಸಿಗೆ ಹೋಗಿ ಬರುತ್ತಿದ್ದಳು. ಮುಜಗರವೆನ್ನಿಸುತ್ತಿರಲಿಲ್ಲೇ ? ತಾನಂತೂ ಆ ಸಮಯದಲ್ಲಿ ಬ್ಯಾಂಕಿಗೆ ಹೋಗುವುದಿಲ್ಲ. ರಜೆ ಹಾಕಿ ಮನೆಯಲ್ಲಿಯೇ ಇದ್ದು ಬಿಡ್ತೀನಿ. ಪ್ರೆಗ್ನೆಂಟ್

ಹೆಂಗಸರನ್ನು ಒಬ್ಬೊಬ್ಬರು ಒಂದೊಂದು ತರಹ ನೋಡ್ತಾರೆ. ... ನಾನೋ ಸ್ವಲ್ಪ ಕುಳ್ಳಿ... ನನ್ನ ಹೊಟ್ಟೆ ಎಷ್ಟು ಉಬ್ಬಬಹುದು ? ನಾನು ಹೇಗೆ ಕಾಣಬಹುದು ? ಧಡೂತಿ ಹೆಂಗಸಿನಂತೆ....

''ಏನು ಯೋಚಿಸ್ತಿದ್ದೀಯಾ ನೀನು ?'' ಯೋಚನೆಗೆ ಭಂಗ ತಂದ.

''ಈ ಮುಜುಗುರ, ಈ ಕಷ್ಟವನ್ನೆಲ್ಲಾ ಹೆಂಗಸರೇ ಯಾಕೆ ಅನುಭವಿಸ ಬೇಕೂಂತ ? ಗಂಡಸರು ಸುಖವಾಗಿ ತಂದೆ ಅಂತ ಅನ್ನಿಸಿಕೊಂಡು ಬಿಡ್ತಾನೆ... ತಾಯಿಯಾದರೋ ಒಂಬತ್ತು ತಿಂಗಳು ತನ್ನ ಹೊಟ್ಟೆಯಲ್ಲಿಟ್ಟುಕೊಂಡು ಪೋಷಿಸಿ, ಹೆರಿಗೆ ನೋವನ್ನನುಭವಿಸಿ ಮಗುವನ್ನು ಹೆತ್ತು, ಹಾಲೂಡಿಸಿ, ಬೆಳೆಸಿ. ಅಬ್ಬಬ್ಬಾ ಎಷ್ಟುಕಷ್ಟ ?''

''ಗಾಯತ್ರಿನ ಕೇಳು, ಕಷ್ಟವೋ ಸುಖವೋ ಅಂತ ...''

''ಯಾರನ್ನೇಕೆ ಕೇಳಬೇಕು. ಕಷ್ಟ ಅಂತ ಗೊತ್ತಿದ್ದರೂ, ದಿನಕ್ಕೆ ಲಕ್ಷ ಗಟ್ಟಳೇ ಮಕ್ಕಳು ಹುಟ್ಟುತ್ತವೆ. ಈ ಪ್ರಪಂಚದಲ್ಲಿ.. ಮಗುವಿನ ಮುದ್ದು ಮುಖವನ್ನು ನೋಡಿದ ಕೂಡಲೇ ಆ ತಾಯಿಗೆ ತನ್ನ ಕಷ್ಟವೆಲ್ಲಾ ಮರೆತು ಹೋಗುತ್ತದಂತೆ. ಆನಂದಿಂದ ಎದೆ ಉಕ್ಕಿ ಬರುತ್ತದಂತೆ. ಎಲ್ಲೋ ಓದಿದ ನೆನಪು.''

ಅಷ್ಟರಲ್ಲಿ ಭಾಸ್ಕರನನ್ನು ಕಂಡರು. ಇಬ್ಬರೂ ಮಾತು ನಿಲ್ಲಿಸಿದರು. ಇಬ್ಬರೂ ಅವನಿಗ 'ಕಂಗ್ರ್ಯಾಚುಲೇಷನ್ಸ್' ಹೇಳಿದರು. ''ಗಾಯತ್ರೀನ ಮಾತನಾಡಿಸಿದ್ರಾ ? ಮಗು ಹೇಗಿದೆ ? ನನ್ನ ಹಾಗಿದೆಯೋ ಅವಳ ಹಾಗಿದೆಯೋ ? '' ಒಂದೇ ಉಸಿರಿನಲ್ಲಿ ಅವನು ಕೇಳಿದ.

''ಮಗು ಬೆಣ್ಣೆ ಮುದ್ದೆ ಇದ್ದ ಹಾಗಿದೆ. ಯಾರ ಹಾಗಿದೆ ಅಂತ ತಿಳಿಯಲಿಲ್ಲ. ನಿಧಾನವಾಗಿ ಗೊತ್ತಾಗಬಹುದು.''

''ನಿಮ್ಮಗಳಿಂದ ತುಂಬಾ ಉಪಕಾರವಾಯ್ತು ದಿವಾಕರ್. ಈ ಉಪಕಾರಗಳನ್ನು ನಾನು ಈ ಜನ್ಮದಲ್ಲಿ ಮರೆಯುವುದಿಲ್ಲ.''

''ತುಂಬಾ ದೊಡ್ಡ ಮಾತುಗಳನ್ನಾಡ್ತಿದ್ದೀರಿ. ಸಮಯದಲ್ಲಿ ಒಬ್ಬರಿಗೊಬ್ಬರು ನೆರವಾಗುವುದು ಮನುಷ್ಯನ ಕರ್ತವ್ಯ.''

''ಇದು ಎಲ್ಲರಿಗೂ ಎಲ್ಲಿ ಅರ್ಥವಾಗುತ್ತೆ, ಸಮಯದಲ್ಲಿ ಮನೆ ಮನೆಯವರೇ ಕೈಕೊಟ್ಟು ಬಿಡ್ತಾರೆ. ''

''ನಿಮ್ಮ ಪೇರೆಂಟ್ಸ್‌ಗೆ ಸುದ್ದಿ ತಿಳಿಸಾಯ್ತಾ ಸಾರ್?''

''ಅವರುಗಳು ನಮ್ಮನ್ನು ತಮ್ಮ ಸಂಬಂಧದಿಂದಲೇ ಕಿತ್ತು ಹಾಕಿ ಬಿಟ್ಟಿದಾರೆ. ಮದುವೆಗೇ ಒಪ್ಪಲಿಲ್ಲ. ಅವರುಗಳಿಗೆ ನಾವು ಬೇಕಿಲ್ಲ. ''

''ತಂದೆ ತಾಯಿಯರಿಗೆ ಅವರವರ ಮಕ್ಕಳನ್ನು ಮರೆಯುವುದು ಅಷ್ಟು ಸುಲಭವಲ್ಲ. ಮೊಮ್ಮಗ ಹುಟ್ಟಿದಾನೆ ಅಂತ ತಿಳಿದರೆ ಎಲ್ಲವನ್ನು ಮರೆತು ಖಂಡಿತಾ ಬರುತ್ತಾರೆ ನೋಡಿ.''

''ಇಲ್ಲ ಖಂಡಿತಾ ಬರುಲ್ಲ. ಅವರುಗಳಿಗೆ ನಾನೊಬ್ಬನೇ ಮಗನಲ್ಲ. ಇವನೊಬ್ಬನೇ ಮೊಮ್ಮಗನಲ್ಲ. ಬಿಡಿ ಯಾಕೀಗ ಆ ಮಾತುಗಳು !''

''ಒಳಗೆ ಫ್ಲಾಸ್ಕಿನಲ್ಲಿ ಕಾಫಿ ಇದೆ ಕುಡೀರಿ'' ಪೂರ್ಣಿಮಾ ಮಾತುಗಳ ಧಾಟಿಯನ್ನು ಬದಲಾಯಿಸಿದಳು. ದಿವಾಕರ ತಾಯಿಯನ್ನು ಮನೆಗೆ ಕರೆದುಕೊಂಡು ಹೊರಟ. ಪೂರ್ಣಿಮಾ ಅಲ್ಲೇ ಉಳಿದಳು.

ಮಗುವಿಗೆ ಸ್ಕಂದ ಎಂದು ನಾಮಕರಣ ಮಾಡಿದರು. ಮೂರು ತಿಂಗಳ ರಜ ಮುಗಿಯುತ್ತಿದ್ದಂತೆಯೇ ಗಾಯತ್ರಿ ಕೆಲಸಕ್ಕೆ ಹೋಗಿ ಬರಲಾರಂಭಿಸಿದಳು. ಈಗ ಸ್ಕಂದನ ಜವಾಬ್ದಾರಿ ಆಂಟಿಗೆ. ಅವರಿಗೆ ಸಹಾಯಕನಾಗಿ ದಿವಾಕರ.ಒಮ್ಮೊಮ್ಮೆ ಪೂರ್ಣಿಮಾಳಿಗೆ ವಿಚಿತ್ರ ಎನ್ನಿಸುತ್ತಿತ್ತು. ದಿವಾಕರ ಬೇಸರವಿಲ್ಲದೇ ಮನೆಯಲ್ಲೇ ಕಾಲ ಕಳೆಯುತ್ತಾನಲ್ಲ, ತಾಯಿಗೆ ಸಹಾಯಕನಾಗಿ, ಪೇಯಿಂಗ್ ಗೆಸ್ಟ್‌ಗಳಿಗೆ ಉಪಚಾರ ಮಾಡಿದ್ದಾಯಿತು. ಈಗ ಈ ಬೇಬಿಸಿಟ್ಟಿಂಗ್... ಅಡಿಗೆ ಭಟ್ಟನೇ ಸರಿ. ಆದಷ್ಟು ಬೇಗ ಇವನಿಗೊಂದು ಒಳ್ಳೆಯ ಕೆಲಸ ಸಿಗದಿದ್ದರೆ ಮನೆಮೂಳನಾಗಿ ಬಿಡುತ್ತಾನೆ. ಏನಾದರೂ ಒಂದು ದಾರಿಯನ್ನು ಹುಡುಕಲೇ ಬೇಕು. -

ತಮ್ಮ ಬಳಿ ಹಣವಿಲ್ಲ. ಲಕ್ಷಗಟ್ಟಲೆ ಸಾಲ ಮಾಡಿದರೆ ತಮಗೇ ನಷ್ಟ. ಇಲ್ಲದಿದ್ದರೆ ಬಂಡವಾಳ ಹಾಕಿ, ಯಾವುದಾದರೂ ಬಿಸನೆಸ್‌ನಾದರೂ ಪ್ರಾರಂಭಿಸ ಬಹುದಾಗಿತ್ತು. ಬರೀ ಡಿಗ್ರಿಗೆ ಯಾವ ಒಳ್ಳೆ ಕೆಲಸವೂ ಸಿಗುವುದಿಲ್ಲ. ಕಂಪ್ಯೂಟರ್ ಕೋರ್ಸ್ ಮುಗಿದ ನಂತರ, ಯಾವುದಾದರೂ ಸ್ಕೂಲಿನಲ್ಲಿ ಪಾರ್ಟ್ ಟೈಂ ಕೆಲಸ ಸಿಗಬಹುದು. ಅದರಿಂದ ಏನಾಗಬಹುದು , ಯಾವುದಾದರೂ ಬ್ಯಾಂಕಿಗೆ ಕೆಲಸಕ್ಕೆ ಅರ್ಜಿ ಹಾಕುವಂತೆ ಹೇಳಬೇಕು.

ಅವಳನ್ನು ಕಂಡೊಡನೆ ಮಗುವಿನ ಆದಿನದ ಆಟ ಪಾಠಗಳ ಬಗ್ಗೆ ವಿವರಣೆ ನೀಡತೊಡಗಿದ. ಅವಳಿಗೆ ಮುಜುಗುರವಾಗುತ್ತಿತ್ತು.

''ಸದಾ ಮನೇಲೇ ಇರ್ತೀರಲ್ಲ ದಿವಾಕರ್ ಬೇಸರವಾಗುಲ್ವಾ ?''

''ಮುಂಚೆ ತುಂಬಾ ಬೇಸವಾಗುತ್ತಿತ್ತು. ನೀನೂ ಕೆಲಸಕ್ಕೆ ಹೊರಟು ಹೋಗುತ್ತಿದ್ದೆ. ಈಗ ಈ ಸ್ಕಂದ ಇರುವುದರಿಂದ ಸಮಯ ಹೋದದ್ದೇ ಗೊತ್ತಾಗುಲ್ಲ.''

''ಬೇಬಿ ಸಿಟ್ಟಿಂಗ್ ಕೆಲಸ ಬಹಳ ಇಷ್ಟವಾಗಿದೆ ಅಲ್ವಾ ?''

''ಏನು ಮಾಡೋದು ? ಕೆಲಸವಿಲ್ಲದ ಬಡಗಿ ನಾನು... ಗಾದೆ ಮಾತು ನಿನಗೂ ಗೊತ್ತಲ್ವಾ ''

''ಹೀಗೆ ಕಾಲ ಕಳೆಯಬೇಡಿ ದಿವಾಕರ್... ವಯಸ್ಸಾದ ರಿಟೈರ್ ಆದ ಮುದುಕರಂತೆ ಸದಾ ಮನೇಲ್ಲೇ ಇದ್ದುಕೊಂಡು ಮೊಮ್ಮಕ್ಕಳನ್ನು ಆಡಿಸಿಕೊಂಡು'' ಎಂದು ಹೇಳುವ ಮನಸ್ಸಾದರೂ ತಡೆದುಕೊಂಡಳು. ಹೀಗೆಲ್ಲಾ ಮಾತುಗಳು ಬಂದರೆ, ತಮ್ಮಿಬ್ಬರಲ್ಲಿ ಅಂತರ ಬರುವುದು ಖಂಡಿತಾ ಎಂದುಕೊಂಡು ರುಮ್ಮನಾದಳು.''

''ನೋಡು ಆಂಟೀನ... ಅಲೆಲೆ...ಎಂದು ಮುದ್ದಾಗಿ ಮಾತನಾಡುತ್ತಾ ಮಗುವಿನ ಪುಟ್ಟ ಕೈಗಳನ್ನು ಹಿಡಿದು ಆಡಿಸತೊಡಗಿದ. ಅವಳಿಗೆ ರೇಗಿತ್ತು.ಆದರೆ, ಈ ಮಗುವಿನದೇನು ತಪ್ಪು? ಅದರ ಮೇಲೇಕೆ ತನಗೆ ಕೋಪ ಎಂದುಕೊಂಡು ತಾನೂ ಮಗುವನ್ನು ಮುದ್ದಿಸಿದಳು. ಆದಷ್ಟು ಬೇಗ ಈ ವಾತಾವರಣವನ್ನು ಬದಲಾಯಿಸಬೇಕು. ಇಲ್ಲದಿದ್ದರೆ ಇವನಿಗೆ ತುಕ್ಕು

ಹಿಡಿದು ಬಿಡುತ್ತದೆ ಎಂದುಕೊಂಡು ಅವನಿಗಾಗಿ ಕೆಲಸವನ್ನು ಹುಡುಕಲು ಪ್ರಾರಂಭಿಸಿದಳು.''

ತಂದೆತಾಯಿಯರನ್ನು ಬಿಟ್ಟು ಬೇರೆ ಊರಿಗೆ ಹೋಗಲು ಅವನು ಸಿದ್ಧನಿರಲಿಲ್ಲ. ಇದೇ ಊರಿನಲ್ಲಿ ಸುಲಭವಾಗಿ ಕೆಲಸ ಸಿಗುವಂತಿರಲಿಲ್ಲ. ಅಲ್ಲದೇ ಅವನು ಮಾಡುತ್ತಿದ್ದ ಕಂಪ್ಯೂಟರ್ ಕೋರ್ಸ್ ಮುಗಿಯಲು ಇನ್ನೂ ಎರಡು ಮೂರು ತಿಂಗಳು ಬಾಕಿ ಇತ್ತು.

ಈ ನಡುವೆ, ಅಜ್ಜಿಗೆ ತುಂಬಾ ಹುಶಾರಿಲ್ಲ ಮಲಗಿ ಬಿಟ್ಟಿದ್ದಾರೆ ಎಂದು ತಿಳಿದಾಗಿನಿಂದ ಒಮ್ಮೆ ಅಜ್ಜಿಯನ್ನು ನೋಡಿ ಬರಬೇಕೆಂದು ಮನಸ್ಸು ಚಡಪಡಿಸುತ್ತಿತ್ತು. ಆದರೆ, ಹಳೆಯ ನೆನಪುಗಳನ್ನು ಮರುಕಳಿಸುವ ಆ ಊರಿಗೆ ಹೋಗಲು ಹಿಂಜರಿಯುತ್ತಿದ್ದಳು. ಚಂದ್ರನನ್ನು ಮರೆತಿದ್ದೇನೆಂದು ತನಗೆ ತಾನೇ ಹೇಳಿಕೊಂಡರೂ, ಯಾವುದಾದರೂ ಕಾರಣದಿಂದ ಆಗ ಈಗ ನೆನಪಿಗೆ ಬರುತ್ತಿದ್ದ. ಅವನಿಗೂ ಸಹ ಮದುವೆಯಾಗಿದೆ. ಗಂಡ ಹೆಂಡತಿ ಹೇಗಿರಬಹುದು ? ಅವಳೊಡನೆಯೂ ಕ್ರೂರವಾಗಿ ವರ್ತಿಸುತ್ತಿರುವನೇ .... ಒಮ್ಮೊಮ್ಮೆ ಈ ಸಂದೇಹಗಳು ಬಂದರೂ, ಈಗ ಅವನ ಗೊಡವೆ ನನಗೇಕೆ ಎಂದು ತಲೆಯನ್ನು ಕೊಡವುತ್ತಿದ್ದಳು.

ಅಜ್ಜಿಯನ್ನು ನೋಡಿ ಬರಲೆಂದು ಇಬ್ಬರೂ ಹೊರಟರು. ಅತ್ತೆ ಆಕ್ಷೇಪಣೆ ಮಾಡದೆ ಬಿಡಲಿಲ್ಲ. ''ಎಂಥಾ ಜನರೋ ? ಮಗಳ ಮದುವೆ ಮಾಡಿ ಮುಗಿಸಿಕೊಂಡು ಹೋದವರು ಇತ್ತ ಸುಳಿದಿಲ್ಲ. ಮಗಳು ಹೇಗಿದಾಳೋ ಅಂತ ನೋಡುವ ಆಸೆಯಾದರೂ ಬೇಡವೇ ?''

''ಬಿಡಮ್ಮ, ನೀನೇನು ನಿನ್ನ ಮಗಳ ಮನೆಗೆ ಎಷ್ಟು ಸಾರಿ ಹೋಗಿ ಬಂದಿದೀಯ?'' ದಿವಾಕರ ಅವರುಗಳ ಪರ ವಹಿಸಿ ಮಾತನಾಡಿದ.

''ನಮ್ಮ ವಿಷಯ ಬೇರೆ ನಮಗೆ ಆಸ್ತಿ ಇರಲಿಲ್ಲ, ಅಂತಸ್ತು ಇರಲಿಲ್ಲ. ಕೈತುಂಬಾ ಮನೆ ಕೆಲಸ ಮಾಡುವ ಸೊಸೆ ಬೇಕಾಗಿತ್ತು ಅವರಿಗೆ. ನನ್ನ ಮಗಳನ್ನು ಗುತ್ತಿಗೆ ತೆಗೆದುಕೊಂಡರು. ಅಂಥೋರ ಮನೆಗೆ ನಾನು ಹೇಗೋ ಹೋಗಲಿ..?''

''ಅದಕ್ಕೇ ಹೇಳಿದ, ಅವಳಿಗೆ ಈಗಲೇ ಮದುವೆ ಬೇಡಾಂತ. ನೀನೆಲ್ಲಿ ಕೇಳದೆ... ಅವರೇ ಖರ್ಚು ಹಾಕಿಕೊಂಡು ಮದುವೆ ಮಾಡಿಕೊಳ್ತಾರೆ ಅಂತ ಹಿಗ್ಗಿದೆ.''

''ಹಂಗಿಸಪ್ಪಾ ಹಂಗಿಸು. ಈಗ ನೀನೂ ದೊಡ್ಡ ಮನುಷ್ಯ. ನಿನ್ನ ಹೆಂಡತಿ ತಿಂಗಳಿಗೆ ಸಾವಿರಾರು ರುಪಾಯಿ ಸಂಪಾದಿಸುತ್ತಾಳೆ. ಈಗ ನಿನಗೆ ದೊಡ್ಡಸ್ತಿಕೆಬಂದು ಬಿಟ್ಟಿದೆ. ''ವ್ಯಂಗ್ಯವಾಗಿ ಅಂದಳು.

''ಈಗ ಹಂಗಿಸುತ್ತಿರುವವಳು ನೀನು ಕೆಲಸ ಸಿಕ್ಕಿದ ಮೇಲೆ ಮದುವೆ ಆಗೋಣ ಅಂತ ನಾನು ಹೇಳ್ದೆ. ಆದರೆ ಏನೇನೋ ಆಗಿ ಹೋಯ್ತು.''

''ಈಗ ಪಶ್ಚಾತ್ತಾಪ ಪಟ್ಟರೆ ಏನುಪಯೋಗ ? ಪೇಯಿಂಗ್ ಗೆಸ್ಟ್ ಅಂತ ಇದ್ದ ಹುಡುಗೀನ ನೀನೇಕೆ ಇಷ್ಟಪಟ್ಟೆ? ''

''ಮನೇಲಿ ಬೆಳೆದ ಮಗ ಇರುವಾಗ ಹುಡುಗೀರನ್ನು ಪೇಯಿಂಗ್ ಗೆಸ್ಟ್ ಅಂತ ಇಟ್ಟುಕೊಂಡಿದ್ದು ನಿನ್ನ ತಪ್ಪು...'' ಎದುರುತ್ತರ ಕೊಟ್ಟದ್ದ.

''ಅಂತೂ ನನ್ನ ಮೂಲಕ್ಕೇ ಬಂದೆಯಲ್ಲಾ... ನಮಗೆ ಈ ಸಂಪಾದನೆಯೂ ಇಲ್ಲದಿದ್ದರೆ ಎರಡು ಹೊತ್ತಿನ ಕೂಳಿಗೆ ಏನು ಮಾಡಬೇಕಾಗಿತ್ತು. ಈಗ ನಿನಗೆ ಗೊತ್ತಾಗ್ತಿಲ್ಲ. ಮನೆ ಬಾಡಿಗೆ ಬರುತ್ತೆ. ನಿನ್ನ ಹೆಂಡತಿಯೂ ಸಂಪಾದಿಸುತ್ತಾಳೆ. ನಿಮ್ಮಪ್ಪನ'' ಸ್ಥಿತಿ ಯಾರಿಗೂ ಬರುವುದು ಬೇಡ. ನಿಮಗೋಸ್ಕರ ಎಷ್ಟು ಒದ್ದಾಡಿದೀವಿ ಅಂತ ನಿನಗೇನು ಗೊತ್ತು! ಎಷ್ಟುಸುಲಭವಾಗಿ ಮಾತನಾಡ್ತೀಯ ?

''ಈಗ ನನ್ನನ್ನೇನು ಮಾಡು ಅಂತ ಅಂತೀಯ ?''

''ಈಗ ಬಿಸಿನೆಸ್ ಮಾಡೋರಿಗೆಲ್ಲಾ ಬ್ಯಾಂಕಿನವರು ಸಾಲ ಕೊಡ್ತಾರಂತೆ. ನಿನ್ನ ಹೆಂಡತೀನ ಕೇಳಿನೋಡು. ಯಾವುದಾದರೂ ಬಿಸಿನೆಸ್ ಮಾಡು.''

''ಯಾವ ಬಿಸಿನೆಸ್ ಮಾಡಲಮ್ಮಾ... ನನಗೆ ಯಾವ ಅನುಭವವಿದೆ ? ಬರೀ ಡಿಗ್ರಿಗೆ ಯಾವ ಕೆಲಸ ಸಿಗುತ್ತೆ! ಈ ಕಂಪ್ಯೂಟರ್ ಕೋರ್ಸ್ ಮುಗಿಯಲಿ. ಕೆಲಸ ಸಿಕ್ಕೇ ಸಿಗುತ್ತದೆ. ಅಲ್ಲಿಯವರೆಗೆ ಸಹನೆಯಿಂದಿರು. ಹಂಗಿಸಿ ಹಂಗಿಸಿ ಅನ್ನಬೇಡ.''

''ನಾನು ನಿನ್ನ ತಾಯಿ ಕಣೋ... ನಾನು ಆಡೋದೆಲ್ಲಾ ನಿನ್ನ ಒಳ್ಳೇದಕ್ಕೆ. ಬೇರೆ ಯಾರಾದ್ರೂ ಅಂದರೆ ನನ್ನ ಕರುಳು ಚುರಕ್ ಅನ್ನುತ್ತೆ...''

''ಈಗ ಯಾರು ಏನಂದ್ರು ? ನಮ್ಮ ಮನೆ ವಿಷಯ ಅವರಿಗೇಕಂತೆ ?''

''ಆಡಿ ಕೊಳ್ಳೋರಿಗೆ ಸಿಗೋದು ಅವರಿವರ ಮನೆಯ ವಿಷಯ. ಈಗ ಇಷ್ಟು ದಿನಗಳ ಮೇಲೆ ನಿನ್ನ ಅತ್ತೆಯ ಮನೆಗೆ ಹೋಗ್ತಾ ಇದೀಯ. ಅಲ್ಲಿ ಯಾರಾದರೂ ಏನು ಕೆಲಸ , ಎಷ್ಟು ಸಂಬಳ ಅಂತ ಕೇಳಿದ್ರೆ ಏನು ಹೇಳ್ತೀಯ ? ಹೆಂಡತಿ ಸಂಪಾದಿಸಿ ತಂದು ಹಾಕ್ತಾಳೆ, ಗಂಡ ಮನೇಲೇ ಕೂತು ಕವಳ ಕತ್ತರಿಸುತ್ತಾನೆ ಅಂತ ಗೇಲಿ ಮಾಡುಲ್ವಾ ?''

''ಅವರ್‍ಯಾರೂ ಅಂಥೋರಲ್ಲ. ಒಳ್ಳೆಯವರು.''

''ಎಲ್ಲರೂ ಒಳ್ಳೆಯವರೇ. ನಾನೇ ಕೆಟ್ಟವಳು. ಏನಾದ್ರೂ ಮಾಡ್ಕೋ... ಹೆಂಡತಿ ಗುಲಾಮ, ಹೆಂಡತಿ ದಾಸ ಅಂತ ಅಂದ್ರೆ ಅನ್ನಿಸ್ಕೋ.''

ತಾಯಿಯ ಈ ನುಡಿಗಳು ಅವನಿಗೆ ಬೇಸರವನುಂಟು ಮಾಡಿದವು. ಸೀದಾ ಪೂರ್ಣಿಮಾಳ ಬಳಿಗೆ ಬಂದ.

''ಕೇಳಿಸ್ಕೊಂಡ್ಯಾ ಅಮ್ಮ ಏನಂದ್ಲು ಅಂತ.. ನನಗೀಗಲೇ ಮದುವೆ ಬೇಡಾಂತ ಆಗಲೇ ಹೇಳಿದೆ. ನಿನ್ನ ಮನಸ್ಸಿನಲ್ಲೂ ನಾನು ದಂಡಪಿಂಡ ಅಂತ ಇದ್ರೆ ಈಗಲೇ ಹೇಳಿಬಿಡು. ನಾನು ನಿಮ್ಮಿಬ್ಬರಿಗೂ ತೊಂದರೆ ಕೊಡುಲ್ಲ. ಈಗಲೇ ಎಲ್ಲಾದ್ರೂ ಹೊರಟು ಹೋಗ್ತೀನಿ.''

''ಷ್, ಯಾಕೆ ಹೀಗೆಲ್ಲಾ ಮಾತನಾಡ್ತೀರಿ. ಅವರು ಎಷ್ಟಾಗಲೀ ನಿಮ್ಮ ತಾಯಿ. ಏನೋ ಒಂದು ಮಾತು ಆಡ್ತಾರೆ. ಅದೆಲ್ಲಾ ಏನು ಮಹಾ?... ನನ್ನ ಮನಸ್ಸಲ್ಲೂ ಅಂತ ಭಾವನೆಗಳಿಲ್ಲ. ಇದ್ದಿದ್ರೆ, ನಿಮಗೆ ಕೆಲಸವಿಲ್ಲ, ಸಂಪಾದನೆ ಇಲ್ಲ ಅಂತ ತಿಳಿದೂ ನಿಮ್ಮನ್ನು ಮದುವೆಯಾಗುತ್ತಿದ್ನಾ... ನನಗೂ ಹೊರಗೆ ಹೋಗಿ ದುಡಿಯಬೇಕು ಅನ್ನೋ ಆಸೆ ಏನೂ ಇಲ್ಲ. ಏನೋ ಪರಿಸ್ಥಿತಿ ಹಾಗೆ ಒದಗಿತು. ಇದೂ ಇಲ್ಲದಿದ್ದರೆ ನಾನು ಹೇಗೆ ಜೀವಿಸಬೇಕಾಗಿತ್ತು ನೀವೇ ಹೇಳಿ.''

''ನನಗೆ ಕೆಲಸ ಸಿಕ್ಕಿ ನಾನು ಸಂಪಾದಿಸುವವರೆಗೂ ನಾನು ನಿಮ್ಮ ಊರಿಗೆ ಬರುವುದಿಲ್ಲ.... ನೀನು ಒಬ್ಬಳೇ ಹೋಗಿ ಬಾ...''

''ನಾನೂ ಹೋಗುಲ್ಲ ದಿವಾಕರ್... ಹಳೆಯ ನೆನಪುಗಳನ್ನು ಉಕ್ಕಿಸುವ ಜಾಗಕ್ಕೆ ಹೋಗಲು ನನಗೂ ಇಷ್ಟವಿಲ್ಲ...''

''ಹಾಗೆ ಮಾಡಬೇಡ ಪೂರ್ಣಿಮಾ. ಅಜ್ಜಿ ಎನ್ನುವುದು ಅಪರೂಪವಾದ ವಸ್ತು. ಮತ್ತೆ ಮತ್ತೆ ಸಿಗುವುದಿಲ್ಲ. ನನಗೂ ಅವರನ್ನು ನೋಡಬೇಕು, ಅವರ ಆಶೀರ್ವಾದ ಪಡೆಯಬೇಕು ಎಂಬ ಆಸೆ. ನಿನಗೋಸ್ಕರ ನಾನು ಯಾವ ಅವಮಾನ ವನ್ನಾದರೂ ಸಹಿಸಿಕೊಳ್ಳೋಕೆ ಸಿದ್ಧನಾಗಿದೀನಿ... '' ಅವನು ಭಾವುಕನಾಗಿದ್ದ. ಪೂರ್ಣಿಮಾ ಅವನ ಬೆನ್ನು ತಡವಿ ಅವನನ್ನು ಸಮಾಧಾನಗೊಳಿಸಿದಳು.

''ಅಜ್ಜಿ ಹೇಗಿದೀರಿ ?'' ಪೂರ್ಣಿಮಾ ಬಳಿ ನಿಂತು ಕೇಳಿದಾಗ ಅಜ್ಜಿ ಕಣ್ಣುಗಳನ್ನು ಕಿರಿದು ಮಾಡಿ ನೋಡಿತು.

''ಯಾರು ? ಪೂರ್ಣಿಮಾನೇ... ಯಾವಾಗ್ಬಂದ್ಯೆ ? ಈಗ ಬಂತಾ. ಈ ಅಜ್ಜಿ ನೆನಪು ನಿನಗೆ.'' ಆಕ್ಷೇಪಣೆ ಮಾಡಿದಳು ಅಜ್ಜಿ

''ಹಾಗೆನ್ನಬೇಡಿ ಅಜ್ಜಿ.... ನನಗೆ ರಜವೇ ಸಿಕ್ಕಲಿಲ್ಲ.''

''ಅದೆಲ್ಲಾ ಸಬೂಬು... ಮದುವೆ ಮಾಡಿಕೊಂಡಿದೀಯಂತೆ. ನಿನ್ನ ಗಂಡನೂ ನಿನ್ನ ಜೊತೆ ಬಂದಿದಾನಾ ?''

''ಹುಂ ಅಜ್ಜಿ ಬಂದಿದಾರೆ... ದಿವಾಕರ್ ಇಲ್ಲಿ ಬನ್ನಿ....'' ದಿವಾಕರ ಬಂದು ಅವಳ ಪಕ್ಕದಲ್ಲಿ ನಿಂತ. ''ಇವರು ದಿವಾಕರ್.... ನನ್ನ ಪತಿ....''

''ಗಂಡನ ಹೆಸರನ್ನುಹೇಳೋಕೆ ನಾಚಿಕೇನೇ ಇಲ್ಲವಲ್ಲೇ....''

''ಹೋಗಜ್ಜೀ.... ನಾಚಿಕೆಯಾಕೆ ?.... ಹೆಸರು ಹೇಳಿದ್ರೇನೀಗ ?''

''ಹೆಸರು ಹೇಳಿದ್ರೆ ಗಂಡ ಹೆಂಡಿರಲ್ಲಿ ಪ್ರೀತಿ ಕಡಿಮೆಯಾಗುತ್ತೆ ಅಂತ ಅಂತಾರೆ. ಈ ಕಾಲದೋರು ನೀವು, ಪ್ರೀತಿ ಪ್ರೇಮ ಬರೀ ಪ್ರಾರಂಭದಲ್ಲಿ ಮಾತ್ರ.''

''ಹಾಗೇನಿಲ್ಲ ಅಜ್ಜಿ.... ಮದುವೆಯಾಗಿ ಎರಡುವರ್ಷಗಳಾದವು. ನಾವುಗಳು ಒಂದು ದಿನವೂ ಜಗಳವಾಡಿಲ್ಲ ಅಲ್ವಾ ದಿವಾಕರ್ '' ಅವನು ಮುಗುಳ್ನಕ್ಕ.

''ಪ್ರೀತಿ ಇದ್ದಲ್ಲಿ ಜಗಳವೂ ಇರುತ್ತೆ. ಜಗಳ ಕದನ ಇಲ್ಲದಿದ್ದರೆ ಅದೆಂತಹ ಸಂಸಾರ....? ನೀರಸ ಸಂಸಾರ....''

''ನಮ್ಮಿಬ್ಬರಿಗೂ ಜಗಳ ಆಡೋಕೆ ಸಮಯಾನೇ ಇಲ್ಲ ಅಜ್ಜಿ.... ನಾನು ಇಡೀ ದಿನವೆಲ್ಲಾ ಹೊರಗೇ ಇರ್ತೀನಿ. ರಾತ್ರಿ ಹೊತ್ತು ಏನು ಜಗಳ ಆಡೋದು ?''

''ಅಜ್ಜಿ ಕಿಸಕಿಸನೆ ನಕ್ಕಾಗ ಪೂರ್ಣಿಮಾ ಕೆಂಪಾದಳು. ದಿವಾಕರ ತಲೆ ತಗ್ಗಿಸಿದ.''

''ಅದ್ಸರಿ ಮದುವೆಯಾಗಿ ಎರಡು ವರ್ಷ ಆಯ್ತು ಅಂತ ಅಂತೀಯ... ನೀವಿಬ್ಬರೂ ಬಹಳ ಪ್ರೀತಿಯಾಗಿ ಇದೀರಿ ಅಂತ ಹೇಳ್ತೀಯ... ಆದರೆ ಫಲ ನಿಡೋದು ಯಾಕೆ ನಿಧಾನವಾಗಿದೆ? ''ಒಗಟಿನ ರೂಪದಲ್ಲಿ ಕೇಳಿದಳು.

''ಏನಜ್ಜಿ ಫಲ ಅಂತಂದ್ರೆ.... ವ್ರತಾನ ?''

''ಫಲ ಅಂತಂದ್ರೆ ಮಗು... ನಿನ್ನ ವಯಸ್ಸಿನಲ್ಲಿ ನಾನು ನಾಲ್ಕು ಮಕ್ಕಳ ತಾಯಿಯಾಗಿದ್ದೆ... '' ದಿವಾಕರನ ಕಡೆ ನೋಡಿದಳು ಅಜ್ಜಿ.

''ಅಜ್ಜೀ..... ನಾಲ್ಕು ಮಕ್ಕಳು?.... ನಾನ್ಸೆನ್ಸ್''

''ನಂಗೊತ್ತು ಕಣಮ್ಮಾ... ಈಗಿನ ಕಾಲದೋರು, ನೀವುಗಳು ತುಂಬಾ ಸೂಕ್ಷ್ಮ. ಒಂದು ಮಗುಗೇ ಸುಸ್ತಾಗಿ ಬಿಡ್ತೀರಿ.... ನೀನೂ ಚಿಕ್ಕೋಳಲ್ಲ. ಚಿಕ್ಕ ವಯಸ್ಸಿನಲ್ಲಿ ಬೇಗ ಬೇಗ ಮಕ್ಕಳಾಗಿ ಬಿಡಬೇಕು. ಆಗ ಸಾಕಿ ಬೆಳೆಸುವುದೂ ಸುಲಭವಾಗುತ್ತೆ. ವೃದ್ಧಾಪ್ಯದಲ್ಲಿ ನಮಗೆ ಭುಜಬಲವಾಗ್ತಾರೆ. ಮೊದಲು ಲೇಡಿ ಡಾಕ್ಟರರ ಬಳಿಗೆ ಹೋಗಿ ಸರಿಯಾಗಿ ಟೆಸ್ಟ್ ಮಾಡಿಸ್ಕೋ... ಮೊದಲೇ ಆ ಭಂಢ ಏನೇನೋ ಆಡಿದಾನೆ. ಅದು ನಿಜವಾದೀತು'' ಹೆದರಿಸಿತು ಅಜ್ಜಿ. ಪೂರ್ಣಿಮಾ ಕಂಪಿಸಿದಳು. ದಿವಾಕರ ಅವಳ ಭುಜವನ್ನು ಒತ್ತಿದ. ಅಜ್ಜಿ ಯಾಕೆ ಇಷ್ಟು ಮಾತನಾಡಬೇಕು. ವಯಸ್ಸಾದವರಿಗೆ ತಿಳುವಳಿಕೆ ಕಡಿಮೆಯಾಗಿ ಬಿಡುತ್ತದೆ. ಅಜ್ಜಿಯನ್ನು ಮನದಲ್ಲೇ ಬೈದುಕೊಂಡಳು.

''ಏನೇ ಪುಟ್ಟೀ ಸುಮ್ಮನೇ ನಿಂತುಬಿಟ್ಟೆ. ನಾನು ಹೇಳಿದ್ದು ಅರ್ಥವಾಯಿತು ತಾನೇ ...?''ಮತ್ತೆ ಒತ್ತಿ ಕೇಳಿದಳು ಅಜ್ಜಿ.

''ಹೂಂನಜ್ಜಿ.... '' ಬಾಯಿ ನುಡಿದರೂ ಅವಳ ಮೂಡ್ ಕೆಟ್ಟು ಹೋಗಿತ್ತು. ಅಜ್ಜಿ ಹೀಗೆ ಮೂಡ್ ಕೆಡಿಸ್ತಾರೆ ಅಂತ ತಿಳಿದಿದ್ರೆ ನಾನೂ ನೋಡುಕ್ಕೆ ಬರುತ್ತಲೇ ಇರಲಿಲ್ಲ ಅಂತಂದುಕೊಂಡಳು.

ನಂತರ ಕೇಶವನ ಹೆಂಡತಿ ಪಂಕಜ ಸಮಾಧಾನ ಹೇಳಿದಳು.

''ವಯಸ್ಸಾದೋರು. ಏನೇನೋ ಮಾತನಾಡಿ ಬಿಡ್ತಾರೆ. ಅದ್ನೆಲ್ಲಾ ಮನಸ್ನಲ್ಲಿಟ್ಟುಕೊಳ್ಳಬೇಡ. ನೀನು ಬಂದದ್ದು ಅವರಿಗೆಷ್ಟು ಖುಷಿಯಾಗಿದೆ ಗೊತ್ತಾ?''

''ಗೊತ್ತು ಅತ್ತೆ ಆದರೂ ಯಾಕೋ ಮೂಡ್ ಕೆಟ್ಟು ಹೋಯಿತು... ಅವನನ್ನೇಕೆ ನೆನಪಿಸಬೇಕಿತ್ತು...ಈ ಅಜ್ಜಿ? ''

ಅವನನ್ನು ನೀನು ನೆನಪಿಸಿಕೊಳ್ಳಲು ಇಷ್ಟಪಡದಿರಬಹುದು. ಆದರೆ ಅವನ ತಾಯಿ ನಿನ್ನನ್ನು ಆಗಾಗ್ಗೆ ನೆನಪಿಸಿಕೊಂಡು, ನಿನಗೆ ಅನ್ಯಾಯ ಮಾಡಿಬಿಟ್ಟ ಅಂತ ಅವನನ್ನು ಬೈತಾನೇ ಇರ್ತಾರೆ... ನೀನು ಬಂದಿರೋದು ಗೊತ್ತಾಗಿದ್ರೆ, ನಿನ್ನನ್ನು ನೋಡಿ ಮಾತನಾಡಿಸಲು ಅವರೇ ಬರ್ತಾರೆ ನೋಡ್ತಿರು...

''ನನಗೆ ಯಾರ ಜೊತೆಯೂ ಮಾತು ಬೇಕಿಲ್ಲ ಅತ್ತೆ... ಅಜ್ಜಿನ ನೋಡಿದ್ದಾಯ್ತಲ್ಲ. ನಾವು ನಾಳೇನೇ ಊರಿಗೆ ವಾಪಸ್ಸು ಹೊರಡ್ತೀವಿ. ''

''ಇದೇನು ಹೀಗೆ ಬಂದು ಹೀಗೆ ಹೋಗೋದು ಅಂತಾದ್ರೆ. ಮದುವೆಯಾದ ಮೇಲೆ ಮೊದಲ ಬಾರಿಗೆ ಬಂದಿದೀರಿ. ಒಂದೆರಡು ದಿನಗಳಾದ್ರೂ ಇದ್ದು ಹೋಗಬೇಕು.''

''ರಜಾನೇ ಇಲ್ಲ ಅತ್ತೆ.. ಎರಡೇ ದಿನ ರಜೆ ಸಿಕ್ಕಿದ್ದು ... ಮತ್ತೆ ಮುಂದಿನ ಸಲ ಬಂದಾಗ ಒಂದು ವಾರ ಇದ್ದು ಹೋಗ್ತೀನಿ.''

ಪೂರ್ಣಿಮಾ ಬಂದ ವಿಷಯ ತಿಳಿದೊಡನೆ ಗೌರಮ್ಮ ಅವಳನ್ನು ನೋಡಲೆಂದು ಬಂದೇ ಬಿಟ್ಟಳು. ಪೂರ್ಣಿಮಾ ಮುಜುಗರಗೊಂಡರೂ, ಆದರದಿಂದ ಮಾತನಾಡಿಸಿದಳು. ದಿವಾಕರನನ್ನು ಪರಿಚಯ ಮಾಡಿಕೊಟ್ಟಳು.

''ನಿನ್ನ ಮುಖ ನೋಡಿದ್ರೇ ಗೊತ್ತಾಗುತ್ತೆ ಪೂರ್ಣಿಮಾ. ನೀನು ಖುಷಿಯಾಗಿದೀಯಂತ... ದೇವರು ನಿಮ್ಮಿಬ್ಬರನ್ನು ಚೆನ್ನಾಗಿಟ್ಟಿರಲಿ.... ನಾನು ಒಂದ್ಮಾತು ಕೇಳಿದರೆ ಬೇಜಾರು ಮಾಡ್ಕೊಳ್ಳಲ್ಲ ತಾನೇ ...?''

''ಹುಂ ಕೇಳಿ ಅತ್ತೆ ಪರವಾಗಿಲ್ಲ''

''ಅತ್ತೆ ಅನ್ನೋ ಮರ್ಯಾದೆ ಕೊಡ್ತೀಯಲ್ಲ, ನನಗೆ ಅಷ್ಟೇ ಸಾಕು. ಆದರೆ ಇನ್ನೊಂದು ಮಾತು... ಮದುವೆಯಾಗಿ ಎರಡು ವರ್ಷಗಳಾದ್ರೂ...''

''ನಾವು ಪ್ಲಾನಿಂಗ್ ಮಾಡ್ತಿದೀವಿ ಅತ್ತೆ. ಒಂದರೆಡು ವರ್ಷ ಮಕ್ಕಳಾಗದಿರುವಂತೆ, ನಾವು ತೀರ್ಮಾನ ಮಾಡಿಕೊಂಡಿದೀವಿ..''

''ಹೌದಾ ? ಅದು ನಿಮ್ಮ ಸ್ವಂತ ವಿಷಯ. ನನಗೂ ಒಂದು ಗಳಿಗೆ ಆತಂಕವಾಗಿತ್ತು... ಚಂದ್ರ ಆಡಿದ್ದು ನಿಜವಾಗಬಾರದು. ಆದಷ್ಟು ಬೇಗ ನಿಮ್ಮಿಬ್ಬರಿಗೂ ಒಂದು ಮಗುವಾಗಬೇಕು.''

ಅವಳ ತಲೆ ಗಿರ್ರನೆ ತಿರುಗಿದಂತಾಯ್ತು... ಮತ್ತೆ ಅದೇ ಮಾತು !

''ಚಂದ್ರ ತನ್ನ ಹೆಂಡತಿಯನ್ನು ಮಗುವನ್ನು ಕರೆದುಕೊಂಡು ಬಂದಿದ್ದ. ಅವನ ಮದುವೆಗೆ ನಾವುಗಳು ಹೋಗಿರಲಿಲ್ಲ. ಕನಕ ಅಂತ ಅವಳ ಹೆಸರು ನೋಡೋಕೆ ನಿನ್ನಷ್ಟು ಚೆನ್ನಾಗಿಲ್ಲ. ಮಗು ಮಾತ್ರ ತುಂಬಾ ಮುದ್ದಾಗಿದೆ. ಅತ್ತೆ ಆಡುತ್ತಲೇ ಇದ್ದಳು. ಇವಳ ಜ್ಞಾನ ಎಲ್ಲಿಯೋ ಇತ್ತು. ಹೊರಗೆ ಕುಳಿತು ಮ್ಯಾಗ್ಜೈನ್ ಓದುತ್ತಿದ್ದ ದಿವಾಕರನ ಕಿವಿಗೂ ಈ ಮಾತುಗಳು ಬಿದ್ದಿರಬಹುದು. ಅವನೇನೆಂದುಕೊಳ್ಳಬಹುದು ? ಅತ್ತೆ ಹೊರಟು ಹೋಗಿದ್ದಳು. ಇವಳ ತಲೆ ಕೆಟ್ಟು ಹೋದಂತಾಗಿತ್ತು.

ಆ ರಾತ್ರಿ ದಿವಾಕರ ತನಗೆ ತಿಳಿದ ರೀತಿಯಲ್ಲಿ ಅವಳನ್ನು ಸಂತೈಸಿದ. ಅಜ್ಜಿಯ ಮಾತಿಗಾಗಲೀ, ಆಕೆಯ ಮಾತಿಗಾಗಲೀ ನೀನು ನೊಂದ್ಕೋಬೇಡ. ನಾವು ತೆಗೆದುಕೊಂಡ ತೀರ್ಮಾನದಲ್ಲಿ ಏನೂ ತಪ್ಪಿಲ್ಲ. ಯಾರೋ ಏನೋ ಅಂದ ಮಾತಿಗೆ ನಾವು ಬೆಲೆ ಕೊಡಬೇಕಾಗಿಲ್ಲ. ಈ ಪ್ಲಾನಿಂಗ್ ಕಾರಣದಿಂದ ನಮ್ಮಿಬ್ಬರ ಪ್ರೀತಿ ಇನ್ನೂ ಅಧಿಕವಾಗಿದೆ. ಈಗಾಗಲೇ ಒಂದು ಮಗುವಾಗಿದ್ದರೆ, ಬಹುಶಃ ನಾವು ಇಷ್ಟು ಫ್ರೀಯಾಗಿರಲು ಸಾಧ್ಯವಾಗುತ್ತಿರಲಿಲ್ಲ. ನಮ್ಮಿಬ್ಬರ ಧ್ಯಾನ, ನಮ್ಮಬ್ಬರಲ್ಲೇ ಈಗಿನಂತೆ ಇರುತ್ತಿರಲಿಲ್ಲ. ಮಗುವನು ಪೋಷಿಸುವುದರಲ್ಲಿ ಹಂಚಿಹೋಗುತ್ತಿತ್ತು... ಅಲ್ಲದೇ ನಿನಗೇ ಗೊತ್ತು... ನಾನು ಎ[illegible] ಅಸಹಾಯಕ ಅಂತ. ನನಗೀಗ ತುಂಬಾ ಪಶ್ಚಾತ್ತಾಪವಾಗುತ್ತಿದೆ. ನಾನು ಮದು[illegible] ಒಪ್ಪಬಾರದಾಗಿತ್ತು.

''ನೀವೇಕೆ ನೊಂದು ಕೊಳ್ತೀರಿ ದಿವಾಕರ್ ! ನನ್ನ ಹಣೆ ಬರಹ... ಆದರೆ ಇವರ್ಯಾರಿಗೂ ನನ್ನ ನೋವು ಅರ್ಥವಾಗುವುದೇ ಇಲ್ಲವಲ್ಲ. ಯಾವುದನ್ನು ಮರೆತಿದೀನೋ

ಅದರ ಬಗ್ಗೇನೇ ಮಾತಾಡ್ತಾರೆ. ಯಾಕೇಂತ... ಅವಳು ಮುಖ ಮುಚ್ಚಿ ಅಳತೊಡಗಿದಳು. ಅವನು ಅವಳನ್ನು ತಬ್ಬಿಕೊಂಡು ನಾನಾ ರೀತಿಯಲ್ಲಿ ಸಮಾಧಾನ ಮಾಡಿದ. ಅವನನ್ನು ಏನೋ ಅಳುಕು ಕಾಡುತ್ತಿತ್ತು. ತನಗೆ ಒಂದು ಒಳ್ಳೆಯ ಕೆಲಸ, ಒಳ್ಳೆಯ ಸಂಪಾದನೆ ಇದ್ದಿದ್ದರೆ, ಈ ದಿನ ಪೂರ್ಣಿಮಾಳಿಗೆ ಇಷ್ಟೆಲ್ಲಾ ಬೇಸರವಾಗುತ್ತಿರಲಿಲ್ಲ. ಬಹುಶಃ ತಪ್ಪೆಲ್ಲಾ ನನ್ನದೇ... ನಾನು ಮದುವೆಯಾಗದೇ ಇದ್ದಿದ್ದರೆ, ಪೂರ್ಣಿಮಾ ತನಗೆ ಸರಿಹೊಂದುವ ಯಾರನ್ನಾದರೂ ಮದುವೆಯಾಗಿ ಸುಖವಾಗಿರುತ್ತಿದ್ದಳೋ ಏನೋ...."

"ನಾವು ನಾಳೇನೇ ವಾಪಸ್ಸು ಹೊರಟು ಬಿಡೋಣ... ಹೆಚ್ಚು ದಿನ ಇಲ್ಲಿರಲು ನನಗಿಷ್ಟವಿಲ್ಲ."

"ಹಾಗೇ ಮಾಡೋಣ. ಈಗ ಮಲಕ್ಕೋ...." ಮಗುವನ್ನು ತಟ್ಟುವಂತೆ ಅವಳನ್ನು ತಟ್ಟಿ ಮಲಗಿಸಿದ. ದಿವಾಕರನ ಎದೆಯಲ್ಲಿ ಮುಖವನ್ನು ಹುದುಗಿಸಿ ಮಲಗಿದವಳಿಗೆ ನಿಧಾವಾಗಿ ನಿದ್ದೆ ಆವರಿಸಿತು.

ಊರಿಗೆ ಹೊರಟು ನಿಂತವರನ್ನುಅಜ್ಜಿ ತಡೆಯಲು ನೋಡಿತು."ಇದೇನ್ರೇ, ನೆನ್ನೆ ಬಂದ್ರಿ ಇವತ್ತಾಗ್ಲೇ ಹೊರಟಿದೀರಿ... ನಿನ್ನಗಂಡನಿಗೆ ನಮ್ಮ ಊರು ಕೇರಿ ತೋರಿಸೋದಿಲ್ವೇನೇ ? "

"ಏನಿದೆ ಇಲ್ಲಿ ನೋಡೋಕೆ ?" ಅಲ್ಲೇ ಕೂತು ಓದಿಕೊಳ್ಳುತ್ತಿದ್ದ ಕೇಶವನ ಮಗಳು ನುಡಿದಳು.

"ನಿಮಗೆಲ್ಲಾ ನಮ್ಮ ಊರು ನಮ್ಮ ದೇಶ ಅನ್ನೋ ಅಭಿಮಾನಾನೇ ಇಲ್ಲ. ಕಣ್ಣು ಬಿಟ್ಟು ನೋಡಿದರೆ, ಏನಿದೆ ಏನಿಲ್ಲಅಂತ ತಿಳಿಯುತ್ತೆ."

"ಬಿಡಿ ಅಜ್ಜಿ ಯಾರಿಗೆ ಪುರುಸೊತ್ತಿದೆ. ಅದರ ಬದಲು ಯಾವುದಾದರೂ ಒಂದು ಒಳ್ಳೆಯ ಪಿಕ್ಚರ್‌ಗೆ ಹೋಗಿಬರಬಹುದು. ಚಂದ್ರಾ ಟಾಕೀಸಿನಲ್ಲಿ ದಿಲ್ ಚಾಹತಾ ಹೈ ನಡೀತಾ ಇದೆ. ಭಾವನನ್ನು ಕರೆದುಕೊಂಡು ಹೋಗಿ ಬಾ. "

"ಯಾವುದೇ ಅದು.. ಹೊಸಾ ಟಾಕೀಸು ? ಈಗೆಲ್ಲಾ ಥಿಯೇಟರ್‌ಗೆ ಹೋಗಿ ಸಿನಿಮಾ ನೋಡೋದೇ ಕಡಿಮೆಯಾಗಿದೆ. ಅವನ್ಯಾರದು ಹೊಸ ಥಿಯೇಟರ್ ಕಟ್ಟಿದವನು?"

"ಹೊಸದಲ್ಲ, ಅದೇ 'ಪರ್ಲ್' ಅಂತ ಥಿಯೇಟರ್ ಇತ್ತಲ್ಲಾ ಅದೇ. ಅದನ್ನೇ ಡಿಮಾಲಿಷ್ ಮಾಡಿ ಹೊಸದಾಗಿ ಬಿಲ್ಡಿಂಗ್ ಕಟ್ಟಿ 'ಚಂದ್ರಾ' ಅಂತ ಹೆಸರನ್ನು ಇಟ್ಟಿದಾನೆ. ಥಿಯೇಟರ್ ಸೂಪರ್ ಆಗಿದೆ." ದಿವಾಕರ ಪೂರ್ಣಿಮಾಳನ್ನೇ ಗಮನಿಸುತ್ತಿದ್ದ. 'ಚಂದ್ರ' ಎನ್ನೋ ಹೆಸರು ಕೇಳಿದೊಡನೆ ಅವಳ ಮುಖ ವಿವರ್ಣವಾಗಿತ್ತು.

"ಇಲ್ಲ ಮಾಧುರಿ, ನಾವು ಇವತ್ತೇ ವಾಪಸ್ಸುಹೋಗಬೇಕು. ರಜ ಇಲ್ಲ."

"ಮುಂದಿನ ಸಾರಿ ಬರುವಾಗ ಕಂಕುಳಲ್ಲಿ ಕೂಸನ್ನು ಎತ್ತಿಕೊಂಡು ಬರಬೇಕು" ನಮಸ್ಕರಿಸಿದವಳಿಗೆ ಅಜ್ಜಿ ಆಶೀರ್ವಾದ ಮಾಡಿತು. ಮನೆ ಮುಂದೆಯೇ ಆಟೋರಿಕ್ಷಾ ತಂದು ನಿಲ್ಲಿಸಿದ್ದರಿಂದ, ಪೂರ್ಣಿಮಾ ಪಕ್ಕದ ಮನೆಯ ಕಡೆ ಒಮ್ಮೆಯೂ ನೋಡದೆ ಆಟೋ ಹತ್ತಿದಳು. ರಿಕ್ಷಾ ಚಲಿಸಿತು.

ದಿವಾಕರನಿಗೆ ಒಂದು ಪ್ರೈಮರಿ ಸ್ಕೂಲಿನಲ್ಲಿ ಪಾರ್ಟ್‌ಟೈಂ ಟ್ಯುಟರ್‌ನ ಕೆಲಸ ಸಿಕ್ಕಿತ್ತು.ಅವನಿಗೆ ಸಮಾಧಾನವೇನೂ ಆಗಿರಲಿಲ್ಲ. ಆದರೆ ಇಡೀ ದಿನ ಮನೆಯಲ್ಲೇ ಕುಳಿತಿರುವ ಬದಲು, ಅರ್ಧದಿನ ಮನೆಯಿಂದ ಹೊರಗೆ ಇರುತ್ತಿದ್ದ. ತನಗೆ ಬರುವ ಸಂಬಳ ಯಾತಕ್ಕೂ ಸಾಲದು ಎಂದು ತಿಳಿದಿತ್ತು

''ಕಡೆಗೂ ಒಂದು ಕೆಲಸ ಸಿಕ್ಕಿತು ಅಂತ ಯಾರಿಗಾದರೂ ಹೇಳಿಕೊಳ್ಳೋಕೆ ನಾಚಿಕೆಯಾಗುತ್ತೆ.... '' ಸಂಕೋಚದಿಂದ ಹೇಳಿಕೊಂಡಿದ್ದ.

''ಹೀನಾಯ ಪಡುವಂಥದ್ದೇನೂ ಇಲ್ಲ ದಿವಾಕರ್. ಎಷ್ಟೋ ಜನರಿಗೆ ಈ ಪಾರ್ಟ್‌ಟೈಂ ಜಾಬ್ ಕೂಡಾ ಇರುಲ್ಲ. ಬೇಸರ ಏಕೆ ?'' ಹಿತೈಷಿಣಿಯಂತೆ ನುಡಿದಳು.

''ಅದೇನೋ ಹೇಳ್ತಾರಲ್ಲ. ಗಾದೆ ಹಾಗೆ.... ಬರೀ ಕೈಗಿಂತ ಹಿತ್ತಾಳೆ ಕಡಗ ವಾಸಿ ಅಂತ... ನನಗೂ ಕೆಲಸ ಇದೆ. ನಾನೂ ದುಡಿತೀದೀನಿ... ಅಂತ ನನಗೆ ನಾನೇ ಸಮಾಧಾನ ಹೇಳಿಕೊಳ್ಳಬೇಕು ಅಷ್ಟೇ'' ಪೆಚ್ಚಗೆ ನಕ್ಕ.

''ನಿಮಗೆ ಸಾಧ್ಯವಾಗುವುದಾದರೆ , ಇನ್ನೂ ಒಂದು ಕಡೆ ಪಾರ್ಟ್ ಟೈ ಕೆಲಸ ನೋಡಬಹುದು ... ಅಲ್ವಾ ?''

''ನಾನೂ ಅದನ್ನೇ ಯೋಚಿಸುತ್ತಿದ್ದೆ .. ಹಾಗೇ ಇನ್ನು ಒಂದ್ಮಾತು... ಮುಂದಿನ ವಾರಕ್ಕೆ ನಮಗೆ ಮದುವೆಯಾಗಿ ಮೂರು ವರ್ಷ ತುಂಬುತ್ತೆ... ಈಗಲಾದ್ರೂ ಒಂದು ಪಾರ್ಟಿ ಇಟ್ಟುಕೊಂಡು ನಮಗೆ ಬೇಕಾದವರನ್ನು ಕರೆಯಬಹುದು ಅಲ್ವಾ ? ''

''ನಿಮಗೆ ಆಸೆ ಇದ್ದರೆ ಹಾಗೆ ಮಾಡೋಣ. ನಿಮ್ಮ ತಾಯೀನೂ ಒಂದು ಮಾತು ಕೇಳಿ. ಅವರು ಹುಂ ಎಂದರೆ ಮಾಡಿದರಾಯ್ತು'' ತಾಯಿಯನ್ನು ಕೇಳಿದಾಗ ಆಕೆ, ಅಡ್ಡ ಗೋಡೆಯ ಮೇಲೆ ದೀಪವನ್ನು ಇಟ್ಟಂತೆ ಮಾತನಾಡಿದಳು.

''ನಿಮ್ಮಗಳ ಇಷ್ಟ. ಮಾಡುವಾಗ ಮಾಡಿದ್ದರೆ ಚೆನ್ನಾಗಿತ್ತು. ಈಗ ಕೇಳಿದವರಿಗೆ ಏನು ಹೇಳೋಣ. ಹೋಗಲಿ ಒಂದು ಮಗುವಿನ ನಾಮಕರಣವೋ, ಹುಟ್ಟುಹಬ್ಬವೋ ಆಗಿದಿದ್ದರೆ ಸಮಂಜಸವಾಗಿರುತ್ತಿತ್ತು... ಮೂರು ವರ್ಷದ ಕೆಳಗೇ ಮದುವೆಯಾಗಿ ಈಗ ಪಾರ್ಟಿ ಕೊಡ್ತಿದ್ದಾರೆ ಅಂತ ಜನ ನಗುಲ್ವೆ ?''

''ಹಾಗಂತೀಯಾ ?..... ಬಿಡು... ನಮಗೇ ದುಡ್ಡು ಉಳಿಯಿತು.''

''ಮಹಾ ದುಡ್ಡು ಉಳಿಸಿ ಗಂಟು ಹಾಕಿರೋನ ತರಹ ಆಡಬೇಡ. ಆಗ ಸ್ವಲ್ಪ ನಿಧಾನಿಸಿದ್ದರೆ ಚೆನ್ನಾಗಿತ್ತು. ಗಾಯತ್ರಿ ಅದೇನು ಮೋಡಿ ಮಾಡಿದಾಳೋ ಅವಳ ಮಾತಿಗೆ ನಾವೆಲ್ಲರೂ ತಲೆ ತೂಗಿದೆವು. ''ಅಡ್ಡಡ್ಡ ತಲೆಯಾಡಿಸಿದಳು.

''ಇದರಿಂದ ನಮಗೇನೂ ನಷ್ಟವಾಗಲಿಲ್ಲವಲ್ಲ''

''ನಷ್ಟವೋ ಲಾಭವೋ, ನನಗೇನು ತಿಳಿಯುತ್ತೆ ? ನಿನ್ನ ತಂಗಿ, ಅವಳ ಅತ್ತೆ ಮನೆಯವರು ಕೇಳಿದರೆ ಏನು ಹೇಳೋದು ? ಉಡುಗೊರೆ ಅದೂ ಇದು ಅಂತ ಖರ್ಚು ಬೀಳುತ್ತೆ. ನಿನ್ನ ಹತ್ತಿರ ದುಡ್ಡಿದ್ದರೆ ಮಾಡಪ್ಪಾ . ಆಗಲೇ ಮಾಡಿದ್ದರೆ,ನಿನ್ನ ಮಾವನ ಮನೆಯವರನ್ನು ಕೇಳಬಹುದಾಗಿತ್ತು. ಈಗ ಮೂರು ವರ್ಷದ ಮೇಲೆ ನಮಗೆ ಆ ಖರ್ಚಿನ

ಬಾಬ್ತು ಕೊಡಿ ಅಂತ ಕೇಳೋಕ್ಕೋ ಆಗುತ್ಯೆ ? ''

''ಹಾಗಾದರೆ ಏನೂ ಬೇಡ ಬಿಡು.''

''ಅದಲ್ಲೋ, ನೀನೇ ನೋಡು, ನಾನೇನಾದ್ರೂ ಆಡಿದರೆ ಕೆಟ್ಟೋಳೇ ಆಗೋದು... ನಿನ್ನ ಮಾವ, ಅವರ ಮುಖ ಹೇಗಿದೆ ಅಂತ ನಾವುಗಳ್ಯಾರೂ ನೋಡಿಲ್ಲ. ಇದುವರೆಗೂ ಒಂದು ದಿನ ಇತ್ತ ಸುಳಿದಿಲ್ಲ ಹೇಗೋ ಒಂದು ಮಗಳ ಮದುವೆ ಕತೆ ಮುಗಿದ್ರೆ ಸಾಕು ಅಂತ ಕಾಯ್ತಾ ಇದ್ರೋ ಏನೋ... ಆತಾಯಿ, ಮಗಳು ಹೇಗಿದಾಳೆ ಅಂತ ಮತ್ತೆ ಬಂದು ವಿಚಾರಿಸಿಕೊಂಡು ಹೋಗಿಲ್ಲವಲ್ಲ....''

''ಬಿಡಮ್ಮ ಅವರವರ ಮನೆ ತಾಪತ್ರಯ ಅವರಿಗೆ. ನೀನೇನು ಪದೇ ಪದೇ ನಿನ್ನ ಮಗಳ ಹೇಗಿದಾಳೆ ಅಂತ ನೋಡೋಕೆ ಹೋಗ್ತಿದ್ಯಾ ?''

''ನಮ್ಮ ಮನೆ ವಿಷಯ ಬೇರೆ... ನಾವು ಶ್ರೀಮಂತರಲ್ಲ, ವರದಕ್ಷಿಣೆ ಕೊಡಲಿಲ್ಲ, ನಮಗೇನೂ ಗತಿ ಇರಲಿಲ್ಲ, ನಮಗೆ ಹೋಗೋಕೆ ಮುಖವಿರಲಿಲ್ಲ, ಅವಳಿಗೆ ಕರೆಯೋಕೆ ಧೈರ್ಯವಿರಲಿಲ್ಲ. ನಿನ್ನ ಮಾವನ ಮನೆಯವರು ಅನುಕೂಲರಸ್ಥರಂತೆ ಕಾಣ್ತಾರೆ... ತಿಂಗಳೂ ತಿಂಗಲೂ ಸಂಬಳಾನ ನಿನ್ನ ಹೆಂಡತೀನೇ ತರ್ತಾಳೆ. ಅವರಿಗೇನು ಕಡಿಮೆ. ಬೇಕೂಂತ ಕಡೆಗಣಿಸ್ತಾ ಇದಾರೆ... ನನಗೆ ಎಲ್ಲಾ ಗೊತ್ತು. ನೀನೊಬ್ಬ ಮೊದ್ದ. ನಿನ್ನಂತಹ ಹೇಳಿದಂತೆ ಕೇಳುವ ಗಂಡ ಇವಳಿಗೆ ಬೇಕಾಗಿತ್ತು. ಇದಕ್ಕೆ ಈ ಗಾಯತ್ರೀನೂ ಶಾಮೀಲು.''

''ಗಾಯತ್ರಿದೇನು ತಪ್ಪಿತ್ತು ? ನೀನು ಬೇಡವೇ ಬೇಡ ಅಂತ ಖಡಾ ಖಂಡಿತವಾಗಿ ಹೇಳಬೇಕಾಗಿತ್ತು''

''ಅವರಿಬ್ಬರ ಹಾಗೆ, ನೀವಿಬ್ಬರೂ ಓಡಿ ಹೋಗಿ ಮದುವೆಯಾಗಿದ್ರೆ ನಾನೇನು ಮಾಡಬೇಕಾಗಿತ್ತು ನೀನೇ ಹೇಳು...''

''ನಿನಗೆ ನನ್ನ ಮೇಲೆ ನಂಬಿಕೆ ಇರಲಿಲ್ವಾ ? ''

''ನಂಬಿಕೆ ನೆಗೆದುಬೀಳೋಕೆ ಎಷ್ಟು ಹೊತ್ತು ! ಮದುವೆ ವಯಸ್ಸಾಗ್ತಾ ಬಂದಿತ್ತು. ಕಣ್ಣು ಮುಂದೆ ಈ ಹುಡುಗಿ ಓಡಾಡ್ತಾ ಇದ್ಲು. ಪ್ರೀತಿ ಅಂತ ಏನೇನೋ ಎಡವಟ್ಟು ಮಾಡಿಕೊಂಡಿದೀರೋ ಅಂತ ಭಯಾವಾಯ್ತು... ನನಗೆ. ''

''ಎಡವಟ್ಟು ? ಏನು ಎಡವಟ್ಟು ? ಏನೇನೋ ಮಾತ್ನಾಡಿ ರೇಗಿಸಬೇಡ. ನಿನ್ನ ಮಗನ್ನ ಅಷ್ಟು ಕೀಳು ಮಟ್ಟಕ್ಕೆ ಇಳಿಸಬೇಡ.''

''ಗಾಯತ್ರಿ, ಭಾಸ್ಕರ ಹೀಗೆ ತಾನೇ ಮನೆ ಬಿಟ್ಟು ಓಡಿ ಬಂದದ್ದು. ಭಾಸ್ಕರ ಒಳ್ಳೆಯ ಹುಡುಗ. ಮದುವೆಯಾದ. ಅವಳೊಡನೆ ನೇರವಾಗಿ ಸಂಸಾರ ಮಾಡ್ತಾ ಇದಾನೆ... ಅವಳ ಕೈ ಬಿಟ್ಟಿದ್ದರೆ ಅವಳ ಗತಿ ಏನಾಗುತ್ತಿತ್ತು ? ತವರಿನಲ್ಲಿ ಸ್ಥಳವಿಲ್ಲ... ಬೀದಿ ಪಾಲಾಗುತ್ತಿದ್ದಳು. ನಾವು ಅವರಿಬ್ಬರಿಗೆ ಆಸರೆ ಕೊಟ್ಟೆವು. ಸಹಾಯ ಮಾಡಿದೆವು. ಬಾಣಂತನ ಮಾಡಿದೆ. ''

''ಅವರಿಂದ ನಮಗೂ ಬೇಕಾದಷ್ಟು ಸಹಾಯವಾಗಿದೆಯಲ್ಲಮ್ಮ ಅದನ್ನು ಮರೆತು ಬಿಟ್ಯಾ ? ''

''ಅದಕ್ಕೇ ಹೇಳಿದ್ದು, ಈ ಹಣಕಾಸಿನ ತೊಂದರೆ ಇಲ್ಲದೇ ಇದ್ದಿದ್ದರೆ ನಾವೂ

ಹಾಯಾಗಿರುತ್ತಿದ್ದೆವು. ಯಾವಾಗಲೂ ಏನೋ ತಾಪತ್ರಯ. ಈಗಲೂ ಪೂರ್ತಿ ಬಗೆ ಹರಿದಿಲ್ಲ. ಅಜ್ಜಿಯ ಮನೆಗೆ ಮೊದಲಬಾರಿಗೆ ಹೋಗಿದ್ರಲ್ಲ. ಏನು ಉಡುಗೊರೆ ಕೊಟ್ಟರು?''

''ಪಂಚೇನೋ ಷರ್ಟೋ ಏನೋ ಕೊಟ್ಟಿದಾರೆ. ಪೂರ್ಣಿಮಾಳ ಹತ್ತಿರಾನೇ ಇದೆ... ನಾನು ನೋಡಲಿಲ್ಲ.''

''ಅವಳಿಗೂ ಸೀರೆ ಕೊಟ್ಟಿರಬಹುದು. ನನಗೆ ಹೇಳಬೇಕು, ತೋರಿಸಬೇಕು ಅಂತ ಅನ್ನಿಸಲಿಲ್ವಾ ನಿನ್ನ ಹೆಂಡತಿಗೆ.'' ಆಕ್ಷೇಪಣೆಯ ರಾಗ ಎಳೆದಳು,

''ಮರೆತಿರಬಹುದು.. ಬಿಡಮ್ಮ''

''ಅವಳ ಪರ ವಹಿಸಿ ಮಾತನಾಡಬೇಡ ನೋಡು. ನನಗೂ ಕೋಪ ಬರುತ್ತೆ. ನಾನೂ ಅವಳನ್ನು ಮಗಳಂತೆಯೇ ಇಟ್ಟುಕೊಂಡಿದೀನಿ. ಏನೋ ಇವಳ ಬಲೆಗೆ ಸಿಕ್ಕಿಬಿದ್ದೆ ನೀನು. ಅವಳ ಗುಲಾಮನಾಗಿಬಿಟ್ಟಿದ್ದೀಯ.... ''

''ಗುಲಾಮನೂ ಅಲ್ಲ, ಸೇವಕನೂ ಅಲ್ಲ. ಏನೇನೋ ಆಡಬೇಡ. ನಾವಿಬ್ಬರೂ ಅನ್ಯೋನ್ಯತೆಯಿಂದ ಇದೀವಿ. ಅವಳೆಂದಾದ್ರೂ ನನ್ನ ಮೇಲೆ ಜಬರ್ದಸ್ತು ಮಾಡಿದ್ದನ್ನು ಕಂಡಿದೀಯಾ ! ಕೇಳಿದೀಯಾ ? ''

''ನಿನ್ನ ಮೇಲೆ ಜಬರ್ದಸ್ತು ಮಾಡೋಕೆ ಅವಳಿಗೇನು ಹಕ್ಕಿದೆ ? ಅಲ್ಲದೇ ಅವಳೇನಾದರೂ ಆಡುವ ಮೊದಲೇ, ನೀನೇ ಕೋಲೆ ಬಸವನ ಹಾಗೆ ತಲೆ ತೂಗ್ತಾ ಇರ್ತಿಯೇನೋ.... ''

''ಸಾಕು ನಿಲ್ಲಿಸಮ್ಮ.... ಇವತ್ತೇನಾಯ್ತು ನಿನಗೆ ಅಂತ...ಇದುವರೆಗೂ ಸುಮ್ಮನಿದ್ದೆಯಲ್ಲ. ಈಗ ಇದ್ದಕ್ಕಿದ್ದಂತೆ ಏನು ತಪ್ಪನ್ನು ಕಂಡೆ ನೀನು ! ಈ ಮೊದಲು ಎಲ್ಲಾ ಸರಿಯಾಗಿಯೇ ಇತ್ತು ನಿನಗೆ....''

''ನಿನಗೆ ಕೆಲಸ ಸಿಗ್ತಲ್ಲಾ...ಎಲ್ಲಿ ಏನು ಎತ್ತ, ಎಷ್ಟು ಸಂಬಳ ಬರುತ್ತೆ ಅಂತ ನನಗೇಸಾದ್ರೂ ನೀನು ಹೇಳಿದ್ಯಾ ! ಅಥವಾ ನಿನ್ನ ಹೆಂಡತಿ, ಹೇಳೋದೇನೂ ಬೇಡ ಅಂತ ತಾಕೀತು ಮಾಡಿದಾಳೋ...?''

''ಪೂರ್ಣಿಮಾ ಅಂಥೋಳಲ್ಲ, ನಾನೇ ಹೇಳಲಿಲ್ಲ, ನಿನ್ನ ಮಗ ಇಂಜಿನಿಯರಲ್ಲ, ಲೆಕ್ಚರರ್ ಅಲ್ಲ ಪ್ರೈಮರಿ ಸ್ಕೂಲಿನಲ್ಲಿ ಪಾರ್ಟ್‌ಟೈಂ ಟೀಚರು.... ಅದನ್ನು ದೊಡ್ಡದಾಗಿ ಹೇಳಿಕೊಳ್ಳೋಕೆ ನಾಚಿಕೆಯಾಗಲ್ವೇನಮ್ಮ....'' ಆಕೆಯ ಕನಸಿನ ಗೋಪುರ ಕುಸಿದು ಬಿತ್ತು. ಪೆಚ್ಚಾದಳು.

''ಮತ್ತೆ ಅದೇನೋ ಸಾಲ ಮಾಡಿ ಕೋರ್ಸ್ ಬೇರೆ ಮಾಡಿಕೊಂಡೆ.''

''ಅದರಿಂದಲೇ ಈ ಕೆಲಸ ಸಿಕ್ಕಿದ್ದು.... ಇಲ್ಲದಿದ್ದರೆ ನಾನು ಓದಿದ್ದು ಬರೀ ಬಿ.ಎಸ್ಸಿ ಯಾರು ಕೆಲಸ ಕೊಡ್ತಿದ್ರು ? ಮನೆ ಮನೆಗೆ ಹೋಗಿ ಉಪ್ಪಿನ ಕಾಯಿ, ಹಪ್ಪಳ ಮಾರಿಕೊಂಡು ಬರಬೇಕಾಗಿತ್ತು....'' ಕೆಟ್ಟಮುಖ ಮಾಡಿದ. ಆಕೆ ಮಾತಿಲ್ಲದಾದಳು. ಒಂದು ನಿಮಿಷ ನಿಂತಿದ್ದು ಅಲ್ಲಿಂದ ಹೊರಟುಹೋದ. ಮತ್ತೆ ಒಳಗೆ ಬರುತ್ತಿದ್ದವನಿಗೇ ಕಾಯುತ್ತಿದ್ದವಳಂತೆ

ಹೇಳಿದಳು.

''ನಾನು ಏನೇನೋ ಆಡಿದೆ ಅಂತ ಮನಸ್ಸು ಕೆಡಿಸ್ಕೋ ಬೇಡ. ದಿವೂ ಅದೆಲ್ಲಾ ಸರಿ. ಮದುವೆಯಾಗಿ ಮೂರು ವರ್ಷಗಳಾದ್ರೂ ಮಕ್ಕಳಾಗೋ ಸೂಚನೇನೇ ಇಲ್ಲವಲ್ಲ. ಕೇಳೋದೋ ಬೇಡವೋ ಅಂತ ನಾನೇ ದಿನಾ ತಳ್ಳುತ್ತಿದ್ದೆ.''

''ಅದು ನಮ್ಮ ಸ್ವಂತ ವಿಷಯ....''

''ನನಗೂ ಗೊತ್ತು. ಆದರೆ ತಿಳುವಳಿಕೆ ಹೇಳೋ ಹಕ್ಕು ಹಿರಿಯರಿಗೆ ಇದ್ದೇ ಇದೆ. ಡಾಕ್ಟರರ ಬಳಿಗೆ ನಿನ್ನ ಹೆಂಡತೀನ ಕರೆದುಕೊಂಡು ಹೋಗು... ತಡ ಮಾಡಬೇಡ.''

''ಆಗುತ್ತೆ ಬಿಡಮ್ಮಾ ನಿಧಾನವಾಗಿ...'' ಮಾತನ್ನು ಮುಂದುವರಿಸಲು ಇಷ್ಟಪಡದೇ ನುಡಿದ.

''ನಿಧಾನವಾಗಿಯಾಕೆ ? ಗಾಯತ್ರಿಗೆ ವರ್ಷದೊಳಗೇ ಮಗುವಾಗಲಿಲ್ವಾ ? ಸ್ಕಂದಂಗೆ ಇನ್ನೇನು ಮೂರು ವರ್ಷಗಳು ತುಂಬುತ್ತೆ. ಚೊಚ್ಚಲು ಮಗೂಗೆ ತಡವಾಗಬಾರದು... ನೀನು ಇವತ್ತೇ ನಿನ್ನ ಹೆಂಡತೀನ ಡಾಕ್ಟರ ಬಳಿಗೆ ಕರೆದುಕೊಂಡು ಹೋಗಿ ಚೆಕಪ್ ಮಾಡಿಸು...'' ಆಜ್ಞೆ ಮಾಡಿದವಳಂತೆ ಹೇಳಿದಳು.

''ಆಗ್ಲಿ ನೋಡೋಣ....'' ಎಂದು ಗೊಣಗಿದ.

''ನಿನಗೆ ನನ್ನ ಮಾತು ಅಂದ್ರೆ ಹೀಗೇ ಅಸಡ್ಡೆ.... ಮದುವೇನಂತೂ ನಿನ್ನಿಷ್ಟದಂತೆ ಮಾಡಿಕೊಂಡೆ. ಮೊಮ್ಮಗುವಾದರೂ ನನ್ನ ಆಸೆಯಂತೆ ಹುಟ್ಟಲಿ. ''

ತಾಯಿಯ ಮಾತಿನ ಮೇಲೆ ಯಾವ ಆಸಕ್ತಿಯೂ ಇರಲಿಲ್ಲ. ಆದರೆ ತಳ್ಳಿ ಹಾಕುವಂತೆಯೂ ಇರಲಿಲ್ಲ. ಮನಸ್ಸಿನೊಳಗೇ ಏನೇನೋ ಮೆಲುಕು ಹಾಕುತ್ತಿದ್ದಾಳೆ. ಪೂರ್ಣಿಮಾ ಮನೆಯಲ್ಲಿಲ್ಲದ ಸಮಯನೋಡಿ, ಹೊರಗೆಡವಿದ್ದಾಳೆ. ಈ ಮಾತುಗಳನ್ನು ಪೂರ್ಣಿಮಾಗಳಿಗೆ ಹೇಳುವುದು ಹೇಗೆ ? ಮೊದಲೇ ಅಪ್ಸೆಟ್ ಆಗಿದಾಳೆ... ನನಗೀಗ ಸಿಕ್ಕಿರುವ ಕೆಲಸ ಏನು ಮಹಾ ದೊಡ್ಡದು ?

ಇದೇ ಚಿಂತೆಯಲ್ಲಿ ಮುಳುಗಿದ್ದವನಿಗೆ, ಪೂರ್ಣಿಮಾ ಬಂದುದರ ಅರಿವಾಗಲಿಲ್ಲ ''ಏನು ದಿವಾಕರ್, ಏನೋ ಯೋಚನೆ ಮಾಡ್ತಾ ಇದೀರಿ...'' ಅಲುಗಾಡಿಸಿದಳು.

''ಯಾಕೋ ಬೇಸರವಾಗಿತ್ತು... ಸುಮ್ಮನೆ ಕೂತಿದ್ದೆ.''

''ಸ್ಕಂದ ಎಲ್ಲಿ ಮಲಗಿದಾನಾ ?....''

''ಹುಂ ಮಲಗಿದಾನೆ. ಎಬ್ಬಿಸ್ಲಾ... ?''

''ಬೇಡಪ್ಪಾ ಬೇಡ... ಎದ್ದರೆ ಸಾಕು. ವಿಪರೀತ ಚೇಷ್ಟೆ ಮಾಡ್ತಾನೆ.... ಬೈಯ್ಯೋ ಹಾಗಿಲ್ಲ. ಹೊಡೆಯೋ ಹಾಗಿಲ್ಲ.''

''ಇನ್ನು ಚಿಕ್ಕೋನು. ತಿಳುವಳಿಕೆ ಸಾಲದು. ದೊಡ್ಡವನಾದ ಮೇಲೆ ಈ ಚೇಷ್ಟೆ ಗೀಷ್ಟೆ ಒಂದೂ ಇರಲ್ಲ. ನಾವುಗಳು ಚಿಕ್ಕವರಿದ್ದಾಗ ಎಷ್ಟು ಚೇಷ್ಟೆ ಮಾಡ್ತಿದ್ವಿ ಗೊತ್ತಾ? ಅಮ್ಮನಂತೂ ಸದಾ ಕೈಯಲ್ಲಿ ಒಂದು ಕೋಲನ್ನು ಹಿಡಿದುಕೊಂಡೇ ಇರೋಳು'' ಹಳೆಯ ದಿನಗಳನ್ನು ನೆನೆಸಿಕೊಂಡು ನಕ್ಕ.

''ಅದೂ ಒಂದು ಕಾಲ. ಹೊಡೆದ್ರೂ ಬೈದರೂ, ಅಮ್ಮನನ್ನೇ ಎಲ್ಲಾದಕ್ಕೂ ಅವಲಂಬಿಸ್ತಿದ್ವಿ ಅಲ್ವಾ ?''

''ಅಮ್ಮ ಅನ್ನೋ ವಸ್ತುವೇ ಹಾಗೆ... ತಾಯಿಯ ಕೋಪ ಎಲ್ಲಾ ಹುಸಿ. ಮಗು ಅಮ್ಮ ಅಂತ ಕರೆದ ಕೂಡಲೆ ಎಲ್ಲಾ ಮರೆತು ತಬ್ಬಿಕ್ಕೊಳ್ತಾಳೆ. ಆ ದಿನಗಳು ಎಷ್ಟು ಚೆನ್ನಾಗಿರುತ್ವೆ ಅಲ್ವಾ! ಆ ಕಾಲಕ್ಕೇ ಹಿಂತಿರುಗಿ ಹೋಗುವಂತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು....''

''ನೀವು ಆ ಕಾಲಕ್ಕೆ ಹೊರಟು ಹೋದರೆ ನನ್ನ ಗತಿ ?''

''ನನ್ನನ್ನು ಅಷ್ಟು ಪ್ರೀತಿಸ್ತೀಯಾ... ನಾನೊಂದು ಮಾತು ಕೇಳಲಾ ?''

''ಯಾಕೆ ನಂಬಿಕೆ ಇಲ್ವಾ ?... ಕೇಳಿ, ಏನು ಬೇಕು ? ದುಡ್ಡು ಬೇಕಾಗಿತ್ತಾ? ಎಷ್ಟು ಬೇಕು ಹೇಳಿ'' ಪರ್ಸನ್ನು ತೆರೆದಳು. ಅವನು ಅವಳ ಕೈ ತಡೆದ.

''ದುಡ್ಡು ಕಾಸು ಏನೂ ಬೇಡ... ನನ್ನದೊಂದು ಆಸೆ. ಅದಕ್ಕೆ ನಾನು ಅರ್ಹನು ಹೌದೋ ಅಲ್ಲವೋ ತಿಳಿಯದು.''

''ಸುತ್ತಿ ಬಳಸಿ, ಟಿ.ವಿ. ಧಾರವಾಹಿಯ ತರಹ ಅದದನ್ನೇ ಹೇಳಬೇಡಿ ದಿವಾಕರ್... ಬೇಗ ಹೇಳಿ. ನಿಮ್ಮ ಆಸೆಗೆ ನಾನೇಕೆ ಇಲ್ಲ ಅನ್ನಲಿ.?''

''ನಾವು ಪ್ಲಾನಿಂಗ್ ನಿಲ್ಲಿಸಿಬಿಡೋಣ. ''ಅವಳು ಏನಂದು ಬಿಡುವಳೋ ಎಂಬಂತೆ ಅವಳನ್ನೇ ಅನುಮಾನದಿಂದ ನೋಡಿ ಹೇಳಿದ.

''ಓಹ್... ಇಷ್ಟೇನಾ ? ಇದಕ್ಯಾಕಿಷ್ಟು ಹಿಂಜರಿಕೆ ?''

''ನಾನು ಹೇಳೋದರಲ್ಲಿ ಏನಾದ್ರೂ ತಪ್ಪಾಗಿ ಬಿಡುತ್ತೇನೋ ಅಂತ..''

''ಇಲ್ಲ ದಿವಾಕರ್. ಯಾವ ತಪ್ಪೂ ಇಲ್ಲ. ಇನ್‌ಫ್ಯಾಕ್ಟ್ ನಾನೇ ಈ ವಿಷಯವನ್ನು ತಿಳಿಸೋಣ ಅಂತಿದ್ದೆ. ನಾನು ಊರಿನಿಂದ ಬಂದ ರಾತ್ರಿಯಿಂದಲೇ ಮಾತ್ರೆ ತಗೊಳ್ಳುವುದನ್ನು ನಿಲ್ಲಿಸಿ ಬಿಟ್ಟಿದೀನಿ...'' ಬಾಯಿ ತೆರೆದು, ಆಶ್ಚರ್ಯವಾಗಿ ಅವಳನ್ನೇ ನೋಡಿದ.

''ನನಗೊಂದು ಮಾತು ಹೇಳಬಾರದಾಗಿತ್ತಾ... ನನ್ನನ್ನೇ ಫೂಲ್ ಮಾಡ್ತಿದೀಯಲ್ಲ. ಇದು ಸರೀನಾ ? '' ತಮಾಷೆಯಿಂದ ಅವಳ ತಲೆಗೆ ತನ್ನ ತಲೆ ತಾಕಿಸಿದ.

''ಸಾರೀ.... ಸರ್ಪ್ರೈಸ್ ಮಾಡೋಣ ಅಂತ ಸುಮ್ಮನಿದ್ದೆ... ಸಂತಸದ ಸುದ್ದಿ ತಿಳಿಸಿ ನಿಮ್ಮನ್ನು ಖುಷಿ ಪಡಿಸೋಣ ಅಂತಿದ್ದೆ...'' ನಾಚಿದಳು .

''ಸಂತಸದ ಸುದ್ದೀನ ಯಾವಾಗ ತಿಳಿಸ್ತೀರಿ ! ''ಅವಳ ಗಲ್ಲ ಹಿಡಿದು ಮುದ್ದಿಸಿದ.

''ಇನ್ನೊಂದೆರಡು ತಿಂಗಳಲ್ಲಿ ಗೊತ್ತಾಗಬಹುದು. ಕನಫರ್ಮ್ ಆದ ತಕ್ಷಣ ತಿಳಿಸೋಣ ಅಂತಿದ್ದೆ. ಬೇಸರವಾಯ್ತಾ?''

''ಇಲ್ಲ ಬಿಡು... ಹಾಗಾದ್ರೆ ನೀನೂ ತಾಯಿಯಾಗಿ ಬಿಡೋದು ಅಂತ ನಿರ್ಧರಿಸಿ ಬಿಟ್ಟಿದ್ದೀ.... ಅನ್ನು.''

''ಹೂಂ ಇನ್ನೇನ್ಮಾಡೋದು ? ಎಲ್ರಿಗೂ ಏನೋ ಕುತೂಹಲ. ... ಮದುವೆಯಾಗಿ ಮೂರು ವರ್ಷ ಆದರೂ, ಇನ್ನು ಯಾಕೆ ಬಸಿರಿಯಾಗಿಲ್ಲ ಅಂತ...''

''ನನಗೆ ಇದೇ ಬೇಸರ.,.. ನಮ್ಮ ಸ್ವಂತ ವಿಷಯದಲ್ಲಿ ಬೇರೆಯವರಿಗೆ ಆಸಕ್ತಿ ಏಕೆ ಅಂತ...?''

''ಅವರುಗಳೂ ಮಕ್ಕಳನ್ನು ಹೆತ್ತು ಕಷ್ಟಪಟ್ಟಿದಾರೆ. ಸುಖವನ್ನು ಅನುಭವಿಸಿದ್ದಾರೆ. ಅದೆಲ್ಲಾ ನಮಗೂ ಬರಲಿ ಅಂತ ಇರಬಹುದು. ''

''ಇರಬಹುದು. ಅಂತೂ ಅವರ ದಾರಿಗೆ ಎಳೆಯುವ ಬಯಕೆ... ಅಂದ್ಹಾಗೇ ಬಯಕೆ ಅನ್ನುತ್ಲೆ ನೆನಪಾಯಿತು. ಬಸಿರಿಯ ಬಯಕೆಯನ್ನು ಪೂರೈಸದಿದ್ದರೆ ಹುಟ್ಟುವ ಮಗೂಗೆ ಕೋಪ ಜಾಸ್ತಿ ಇರುತ್ತಂತೆ ಹೌದಾ ? ''

''ನಂಗೊತ್ತಿಲ್ಲಪ್ಪ... ನಿಮ್ಮ ತಂದೆ, ನಿಮ್ಮ ತಾಯಿಯ ಬಯಕೆಯನ್ನೆಲ್ಲಾ ಪೂರೈಸಿರಬಹುದು. ಅದಕ್ಕೇ ನಿಮ್ಮಂತಹ ಮಗ ಅವರಿಗೆ ಹುಟ್ಟಿರುವುದು.''

''ನನಗೆ ಕೋಪ ಇಲ್ವಾ ?... ಇನ್ನು ನಿನ್ನ ಮೇಲೆ ಎಂದೂ ಕೋಪ ತೋರಿಸಿಲ್ಲ ಅಷ್ಟೇ... ಯಾಕೆ ಗೊತ್ತಾ... ನೀನು ನನ್ನ ಮುದ್ದಿನ ಹುಡುಗಿ ಅಲ್ವಾ ? ... ನಾನು ಕಾರಣವಿಲ್ಲದೆ ಕೋಪಿಸಿಕೊಂಡರೆ, ನಿನಗೂ ಕೋಪ ಬರುತ್ತೆ... ನಿನ್ನ ಕಣ್ಣುಗಳು ಅಗಲವಾಗುತ್ತವೆ. ನಿನ್ನ ಮೂಗಿನ ಹೊಳ್ಳೆಗಳು ಅರಳುತ್ತವೆ. ಕೆನ್ನೆಗಳು ಬಲೂನಿನಂತೆ ಊದಿಕೊಳ್ಳುತ್ತವೆ. ತುಟಿಗಳು ಅದರುತ್ತವೆ. ನಿನ್ನ ಕೋಪವನ್ನು ಶಮನಗೊಳಿಸಲು ನಾನು ಹರ ಸಾಹಸ ಮಾಡಬೇಕಾಗುತ್ತದೆ.... ಅದಕ್ಕೇ ನಾನು ಸದಾ ಹಸನ್ಮುಖನಾಗಿರುತ್ತೇನೆ. .. ದೇವಿ...'' ಅವನ ನಗುವಿಗೆ ತನ್ನ ನಗುವನ್ನು ಬೆರೆಸಿದಳು.

''ಓ... ಹರಸಾಹಸ ಎಂದರೇನು? ''

''ತಾಂಡವ ನೃತ್ಯ ಅಂತ... ಹೀಗೆ....'' ನಟರಾಜನ ಭಂಗಿಯಲ್ಲಿ ನಿಂತು ಅವಳ ಕಡೆ ನೋಡಿ ಕಣ್ಣು ಹೊಡೆದ.

''ನೀವು ಡ್ಯಾನ್ಸರ್ ಆಗಬೇಕಾಗಿತ್ತು... '' ಚುಡಾಯಿಸಿದಳು.

''ನಾನು ಡ್ಯಾನ್ಸರ್ ಆಗಿದ್ರೆ ಎಂದೋ ಈ ಮನೆಯಿಂದ ಓಡಿಸಿರುತ್ತಿದ್ದರು. ಆಗ ನಿನಗೆ ನಾನೆಲ್ಲಿ ಸಿಗ್ತಿದ್ದೆ! ''ಇದ್ದಕ್ಕಿದ್ದಂತೆ ಪೂರ್ಣಿಮಾ ಗಂಭೀರಳಾದಳು.

''ನಿಜ ಹೇಳಿ ದಿವಾಕರ್... ನಾನು ಡೈವೋರ್ಸಿ ಅಂತ ತಿಳಿದೂ, ನನ್ನ ಮದುವೆಯಾದ್ರಲ್ಲ... ಇಮಗೆ ಯಾವ ತಳಮಳವೂ ಆಗಲಿಲ್ವಾ ?''

''ಇಲ್ಲ ಹಾಗೇನೂ ಆಗಲಿಲ್ಲ. ನಿಮ್ಮ ಮಾವ ನನಗೆ ಈ ವಿಷಯವನ್ನು ತಿಳಿಸಿದಾಗ, ನಿನ್ನ ಮೇಲಿನ ಪ್ರೀತಿ ಇನ್ನೂ ಹೆಚ್ಚಾಯ್ತು.... ನನ್ನಾಣೆ. ''

''ಅದಕ್ಕೆಲ್ಲಾ ಆಣೆ ಯಾಕೆ ? ನಾನು ನಿಮ್ಮನ್ನು ನಂಬ್ತೀನಿ. ''

''ನಿನಗಿಂತ ನಾನು ಎಲ್ಲಾದರಲ್ಲೂ ಕಡಿಮೆ. ಅಂಥಾದ್ದರಲ್ಲೂ ನೀನು ನನ್ನನ್ನೇ ಪ್ರೀತಿಸಿದೆ. ನಿನಗೆ ಎಂದೂ ಏನೂ ಅನ್ನಿಸಿಲ್ವಾ ?''

''ಇಲ್ಲ ದಿವಾಕರ್, ನಾನೆಂದೂ ನಿಮಗಿಂತ ಹೆಚ್ಚು ಅಂತ ಅಂದುಕೊಂಡಿಲ್ಲ. ಈಗ ಈ ಮಾತುಗಳೇಕೆ ? ಮುಂದೆ ನಮಗೆ ಹುಟ್ಟುವ ಮಕ್ಕಳ ಬಗ್ಗೆ ಮಾತನಾಡೋಣ.''

''ಮಕ್ಕಳೂ... ಎಷ್ಟು ಮಕ್ಕಳು ? ಪ್ಲಾನ್ ಜೋರಾಗಿದೆ ಪರವಾಗಿಲ್ಲ.''

''ಎರಡು ಮಕ್ಕಳು ಸಾಕು. ಒಂದೇ ಒಂದು ಅಂತಂದರೆ ಒಂಟಿಯಾಗಿ ಬಿಡುತ್ತಾನೆ. ಮೂರು ಮಕ್ಕಳಾಗಿ ಬಿಟ್ಟರೆ, ಸ್ವಲ್ಪ ಜಾಸ್ತಿಯಾಗಿ ಬಿಡುತ್ತಾರೆ''

''ಮೊದಲನೆಯದು ಮಗನೇ ಅಂತ ನಿರ್ಧರಿಸಿರುವ ಹಾಗಿದೆ.. ಅವನಿಗೆ ನಂತರ, ತಮ್ಮನೋ ತಂಗಿಯೋ...''

''ಯಾರಾದರೂ ಸರಿ... ಅವರುಗಳು ಜೊತೆ ಜೊತೆಯಲ್ಲಿ ಬೆಳೆಯಬೇಕು. ಆಟಪಾಠಗಳನ್ನು ಒಟ್ಟಿಗೆ ಕಲಿಯಬೇಕು. ಸುಖದುಃಖಗಳನ್ನು ಹಂಚಿಕೊಳ್ಳಬೇಕು. ಒಗ್ಗಟ್ಟಾಗಿರಬೇಕು. ನಾವು ಹಾಗೆ ಬೆಳೆಸೋಣ..''

''ಎಲ್ಲಾ ತಂದೆ ತಾಯಿಗಳೂ ಮಕ್ಕಳನ್ನು ಹಾಗೇ ಬೆಳೆಸುತ್ತಾರೆ. ದೊಡ್ಡವರಾಗ್ತಾ ಆಗ್ತಾ ಆ ಮಕ್ಕಳ ಮನೋಧರ್ಮ ಬದಲಾಗುತ್ತೆ. ಆಗ ಅನುಭವಿಸೋರು ನಾವೇ... ಅದನ್ನೆಲ್ಲಾ ನೋಡಿದ್ರೆ ಮದುವೇನೂ ಬೇಡ, ಮಕ್ಕಳಾಗೋದು ಬೇಡ ಅಂತ ಅನ್ನಿಸುತ್ತೆ.'' ಬೇಕೂಂತ ಚುಡಾಯಿಸುವವನಂತೆ ಆಡಿದ.

''ಅಷ್ಟು ವೈರಾಗ್ಯ ಬೇಡ ದಿವಾಕರ್... ಮಕ್ಕಳು ಬೇಕು, ಆಗಲೇ ನಮ್ಮ ಜೀವನ ಪೂರ್ಣವಾಗುವುದು. ನಿಮಗೂ ಮಕ್ಕಳು ಅಂದ್ರೆ ಆಸೆ ಅಲ್ವಾ ? ಸ್ಕಂದನ್ನ ಎತ್ತಿ ಆಡಿಸಿ ಮುದ್ದಾಡ್ತೀರಿ... ಅವನು ನಿಮ್ಮ ಮಗನೇ ಏನೋ ಅನ್ನುವಷ್ಟು ಹಚ್ಚಿಕೊಂಡು ಬಿಟ್ಟಿದೀರಿ.''

''ಹೌದು ಪೂರ್ಣಿಮಾ, ಸ್ಕಂದ ಮನೇಲಿರೋದ್ರಿಂದ ನನಗೆ ಮನೇಲಿ ಹೊತ್ತು ಹೋಗೋದೇ ಗೊತ್ತಾಗುಲ್ಲ. ಸ್ಕಂದನಿಗೂ ಮೂರುವರ್ಷ ತುಂಬುತ್ತಾ ಬಂತಲ್ವಾ ? ಅವರಿಗೆ ಇನ್ನೊಂದು ಮಗು ಯಾವಾಗ ಆಗುತ್ತೆ ಅಂತ ನಿನಗೇನಾದ್ರೂ ಹೇಳಿದ್ರಾ ?''

''ಥೂ ಅದನ್ನೆಲ್ಲಾ ಯಾರು ಕೇಳ್ತಾರೆ. ಅದು ಅವರ ಸ್ವಂತ ವಿಷಯ..''

''ನಮ್ಮ ಸ್ವಂತ ವಿಷಯಕ್ಕೂಅವರು ತಲೆ ಹಾಕಿದ್ದರಿಂದಲೇ ಅಲ್ವಾ ನಮಗೆ ಇದುವರೆಗೂ ಮಗುವಾಗಿಲ್ಲ..''

''ನಮ್ಮ ಒಳ್ಳೆಯದಕ್ಕೇ ತಾನೇ ಅವರು ಹೇಳಿದ್ದು. ನಾವೂ ಹಾಗೇ ನಿರ್ಧರಿಸಿದ್ದೆವು ತಾನೇ... ಒಂದುವೇಳೆ ನಮಗೂ ಈಗಾಗಲೇ ಒಂದು ಮಗು ಹುಟ್ಟಿದ್ದರೆ ನೀವು ಎರಡೆರಡು ಮಕ್ಕಳನ್ನು ಸುಧಾರಿಸಬೇಕಾಗಿತ್ತು... '' ಕಿಲಕಿಲನೆ ನಕ್ಕಾಗ ಅವನು ಅವಳ ಕೆನ್ನೆ ಹಿಂಡಿ ಕೇಳಿದ.

''ಒಂದು ವೇಳೆ ನಮಗೆ ಟ್ವಿನ್ಸ್ ಹುಟ್ಟಿದರೆ ಏನು ಮಾಡ್ತೀಯ ?''

''ಟ್ವಿನ್ಸಾ ? ಬೇಡಪ್ಪಾ ಒಂದು ಮಗೂನ ಹೊಟ್ಟೆಲಿಟ್ಟುಕೊಂಡು ಓಡಾಡುಕ್ಕೇ ನಾಚಿಕೆ ಆಗುತ್ತೆ. ಎರಡೆರಡು ಮಕ್ಕಳು ಹೊಟ್ಟೆಲಿದ್ದರೆ ಎಷ್ಟು ದಪ್ಪಕ್ಕೆ ಕಾಣ್ತೀನೋ. ಬ್ಯಾಂಕಿಗೆ ಹೋಗೋದು ಹೇಗೆ ?''

''ತಾಯಿಯಾಗೋರೆಲ್ಲಾ ಉಬ್ಬಿದ ಹೊಟ್ಟೇಲೇ ಓಡಾಡ್ತಾರೆ. ನಿನಗೆ ಅಷ್ಟು ನಾಚಿಕೆಯಾದರೆ ಬ್ಯಾಂಕಿಗೆ ರಜ ಹಾಕಿಬಿಡು...''

''ಅಷ್ಟೊಂದು ತಿಂಗಳು ರಜ ಯಾರು ಕೊಡ್ತಾರೆ ? ಸಂಬಳವಿಲ್ಲದೆ ರಜ ಹಾಕಬೇಕಾಗುತ್ತದೆ ಅಷ್ಟೇ.''

''ಹೌದಾ ? ಈ ಹಣದ ಚಿಂತೆ ಒಂದಿಲ್ಲದೇ ಇದ್ದಿದ್ದರೆ...''

‘‘ಒಂದಲ್ಲಾ ಒಂದು ಚಿಂತೆ ಮನುಷ್ಯನಿಗೆ ಇದ್ದೇ ಇರುತ್ತದೆ.ಈಗ ನನಗೆ ಹಸಿವಾಗ್ತಿದೆ. ಏನಿದೆ ತಿಂಡಿ ತಿನ್ನುಕ್ಕೆ ?’’

‘‘ಏನೋ ಇರಬೇಕು. ತಂದು ಕೊಡ್ತೀನಿ... ಈಗಲಿಂದಲೇ ನಿನಗೆ ಯಾವ ಯಾವ ತಿಂಡಿ ಇಷ್ಟ ಅಂತ ಹೇಳಿಬಿಡು. ದಿನಕ್ಕೊಂದು ಬಗೆ ತಿಂಡಿಯನ್ನು ಮಾಡಿ ಕೊಡ್ತೀನಿ. ನಿನ್ನ ಬಯಕೆಯನ್ನೆಲ್ಲಾ ಪೂರೈಸ್ತೀನಿ. ....’’ ಮುಗುಳ್ನಗೆ ಬೀರಿದ.

‘‘ಕೂಸು ಹುಟ್ಟೋಕೆ ಮುಂಚೇನೇ ಕುಲಾವಿ ಹೆಣೆದರು ಅನ್ನೋ ಹಾಗೆ ಈಗಲಿಂದ ಆ ಚಿಂತೆ ಯಾಕೆ ! ಮುಂದಿನ ತಿಂಗಳು ಲೇಡಿ ಡಾಕ್ಟರರ ಬಳಿಗೆ ಹೋಗ್ತೀನಿ... ಆ ಮೇಲೆ ನಂಗೇನೇನು ಬೇಕೂಂತ ಅಷ್ಟೂ ಹೇಳ್ತೀನಿ.’’ ಅವಳೂ ಮಂದಹಾಸ ಬೀರಿ ಎದ್ದಳು.

ಎರಡು ತಿಂಗಳ ನಂತರ ಪೂರ್ಣಿಮಾ ಲೇಡಿ ಡಾಕ್ಟರರನ್ನು ಭೇಟಿಯಾದಳು. ಅವರು ವಿವರಗಳನ್ನೆಲ್ಲಾ ಕೇಳಿ ತಿಳಿದುಕೊಂಡು, ಕೂಲಂಕಷವಾಗಿ ಪರಿಶೀಲಿಸಿ, ಗರ್ಭವತಿಯಾಗಿರುವ ಸಾಧ್ಯತೆಯೇ ಇಲ್ಲ ಎಂದು ಹೇಳಿ, ಕೆಲವು ಮುಖ್ಯವಾದ ಸಲಹೆಯನ್ನು ನೀಡಿದರು. ಇನ್ನೊಂದೆರಡು ತಿಂಗಳ ನಂತರ ಬನ್ನಿ. ಆಗಲೂ ಕನ್ಸೀವ್ ಆಗಿಲ್ಲದಿದ್ದರೆ, ಡಿ ಆಂಡ್ ಸಿ ಆಪರೇಷನ್ ಮಾಡೋಣ ಎಂದು ಹೇಳಿ ಕೆಲವು ಟಾನಿಕ್‌ಗಳನ್ನು ಮಾತ್ರೆಗಳನ್ನು ಬರೆದುಕೊಟ್ಟರು. ಅವಳಿಗೆ ಆತಂಕ ಶುರುವಾಗಿತ್ತು.

‘‘ಡಿ ಅಂಡ್‌ಸಿ ಬಹಳ ಸರಳವಾದ ಶಸ್ತ್ರಚಿಕಿತ್ಸೆ, ಒಂದೆರಡು ಗಂಟೆಗಳ ನಂತರ ಮನೆಗೂ ವಾಪಸ್ಸು ಹೋಗಬಹುದು. ಯಾವ ಭಯವೂ ಇಲ್ಲ ಅಂತ ಹೇಳಿದ್ದರೂ ,ಏನೋ ಕಳವಳ. ’’

ಚಂದ್ರನೊಡನೆ ತಾನು ಸಂಸಾರ ಮಾಡಿದ್ದೆ. ಆಗಲೂ ಗರ್ಭ ಧರಿಸಿರಲಿಲ್ಲ. ಈಗಲೂ ಎರಡು ಮೂರು ತಿಂಗಳು ಕಳೆದರೂ, ಗರ್ಭಿಣಿಯಾಗಿರುವ ಸೂಚನೆಗಳಿಲ್ಲ. ಹಾಗಾದರೆ ತನ್ನಲ್ಲೇ ಏನೋ ಕೊರತೆ ಇರಬೇಕು. ಚಂದ್ರ ಹೇಳಿದ ಮಾತುಗಳು ನಿಜವೇ ಇರಬಹುದೋ...ಏನೋ ... ನಾನು ಬಂಜೆಯೇ ಇರಬಹುದು.ಆ ಡಾಕ್ಟರು ಎಲ್ಲಾ ಸರಿಯಾಗಿದೆ ಎಂದು ಸರ್ಟಿಫಿಕೆಟ್ ಕೊಟ್ಟಿದ್ದಳಲ್ಲ... ಅದು ಸುಳ್ಳೇ... ಅವಳಿಗೆ ಅನ್ನ ಸೇರದಾಯಿತು. ನಿದ್ದೆ ದೂರವಾಯಿತು. ಒಂದು ತಿಂಗಳೊಳಗೆ ಕೃಶವಾಗಿ ಹೋಗಿದ್ದಳು. ಅದನ್ನು ಅತ್ತೆ ತಿಳಿದದ್ದೇ ಬೇರೆ ರೀತಿಯಲ್ಲಿ.

‘‘ಒಂದು ನಾಲ್ಕು ದಿನ ರಜ ಹಾಕಿ ರೆಸ್ಟ್ ತಗೋ... ಕೆಲವರಿಗೆ ಹೊಸದರಲ್ಲಿ ಹೀಗೆ ಅನ್ನ ಸೇರುಲ್ಲ. ವಾಕರಿಕೆ ಎಲ್ಲಾ ಇರುತ್ತೆ. ಕ್ರಮೇಣ ಸರಿಹೋಗುತ್ತೆ. ಡಾಕ್ಟರರ ಹತ್ತಿರ ಹೋಗಿ ಬಂದೆಯಾ? ’’ ಆಕೆ ವಿಚಾರಿಸಿದಾಗ ಅವಳಿಗೆ ಅಳು ಬರುವಂತಾಗಿತ್ತು. ಅತ್ತೆಯೊಡನೆ ನಿಜವನ್ನು ಹೇಳುವಂತಿಲ್ಲ, ಬಿಡುವಂತಿಲ್ಲ, ಅಳುವನ್ನು ನುಂಗಿಕೊಂಡಳು.

‘‘ಅಳು ಮುಖ ಯಾಕೆ ಮಾಡ್ತೀಯ ? ಇದೆಲ್ಲಾ ಒಳ್ಳೇದಕ್ಕೆ. ಒಂದು ಮಗುಗೆ ಜನ್ಮ ಕೊಡೋದು ಅಂದ್ರೆ ಸುಲಭದ ಮಾತಲ್ಲ. ತಾಯಿಯೂ ಗೋಳು ಈ ಮಜಲುಗಳನ್ನೆಲ್ಲಾ ದಾಟಿ ಬರಬೇಕು. ’’

ದಿವಾಕರನೊಡನೆ ಹೇಳಿಕೊಂಡಾಗ, ಅವನೂ ಅದೇ ರೀತಿ ಮಾತನಾಡಿದ್ದ. ‘‘ಅಮ್ಮನ ಅನುಭವದ ಕಣ್ಣುಗಳು ನೀನು ಬಸಿರಿ ಅಂತ ಗುರುತು ಹಿಡಿದಿವೆ ನೋಡ್ತಿರು. ಇನ್ನು ನಾಲ್ಕು ತಿಂಗಳಿಗೆ ನಿನ್ನ ಹೊಟ್ಟೆ ಇಷ್ಟು ದಪ್ಪ ಆಗುತ್ತೆ.’’

''ಇಲ್ಲ ದಿವಾಕರ್. ನಾನು ಹೆಂಗಸು... ನನಗೂ ಕೆಲವು ವಿಷಯಗಳು ಗೊತ್ತು. ನನಗೇ ಸ್ವಂತ ಅನುಭವಗಳಾಗುತ್ತವೆ. ಹಾಗೇನಾದರೂ ಇದ್ದಿದ್ದರೆ ನಾನು ನಿಮಗೆ ಹೇಳದೇ ಇರುತ್ತಿದ್ನಾ... ಖಂಡಿತಾ ಇಲ್ಲ. ನನಗೆ ಗೊತ್ತು.''

''ಮತ್ತೆ ಅಮ್ಮ ಸುಳ್ಳು ಹೇಳ್ತಾಳಾ ? ''

''ನಿನಗೆ ನನ್ನ ಮಾತಿನ ಮೇಲೆ ನಂಬಿಕೆ ಇಲ್ಲದೇ ಇದ್ದರೆ, ನನ್ನ ಡಾಕ್ಟರರನ್ನು ಕೇಳಿ. ಅವರೇಕೆ ಸುಳ್ಳು ಹೇಳ್ತಾರೆ ? ''ಅವನ ಮುಖದ ಮಂದಹಾಸವೂ ಮಾಯವಾಯಿತು.

''ಬೇರೆ ಡಾಕ್ಟರ ಹತ್ತಿರ ಹೋಗೋಣ. ಇಂಥ ವಿಷಯಗಳಲ್ಲಿ ಒಬ್ಬರನ್ನೇ ನಂಬುಕ್ಕೆ ಆಗುಲ್ಲ.''

''ಸಧ್ಯಕ್ಕೆ ಬೇಡ. ಅವರು ಔಷಧಿ ಮಾತ್ರೆ ಟಾನಿಕ್ ಕೊಟ್ಟಿದ್ದಾರೆ. ಎರಡು ತಿಂಗಳಾದ ಮೇಲೆ, ಡಿ ಅಂಡ್ ಸಿನ ಆಪರೇಷನ್ ಮಾಡ್ತೀನಿ ಅಂತ ಹೇಳಿದಾರೆ. ''

''ಆಪರೇಷನ್ನಾ... ಬೇಡ ಪೂರ್ಣಿಮಾ... ನನಗೆ ಭಯವಾಗುತ್ತೆ.''

''ಮೈನರ್ ಆಪರೇಷನ್ನು... ಭಯಪಡಬೇಕಾದ್ದೇನಿಲ್ಲ. ಆದರೆ ನನಗೆ ಒಂದು ಅನುಮಾನ, ಎಲ್ಲಾ ಸರಿಯಾಗಿದೆ ಅಂತ ಆ ಡಾಕ್ಟರು ಹೇಳಿದ್ರು.. ಈಗ ಏನು ಕಾಂಪ್ಲಿಕೇಷನ್ ಆಗಿದೆ ಅಂತ.. ಅದೇ ನನಗೆ ಗೊತ್ತಾಗ್ತಿಲ್ಲ.'' ದಿವಾಕರ ಮೌನಿಯಾದ. ಒಂದು ಗಳಿಗೆ ತಡೆದು ಹೇಳಿದ.

''ಹಾಗಾದ್ರೆ ನನ್ನಲ್ಲೇ ಏನೋ ದೋಷವಿರಬೇಕು. ನಾನು ನಾಳೇನೇ ಡಾಕ್ಟರರನ್ನು ಭೇಟಿಯಾಗ್ತೀನಿ...'' ಅವನಾಗಿಯೇ ಹೇಳಿದಾಗ ಅವಳು ಅವನನ್ನು ಏನನ್ನೂ ಆಡಲಿಲ್ಲ. ಸುಮ್ಮನಾಗಿಬಿಟ್ಟಳು. ಆದರೆ ನಂತರ ಅವಳು ಅವನನ್ನು ಏನೂ ಕೇಳಲಿಲ್ಲ. ಡಾಕ್ಟರ್ ಏನಂದ್ರು ? ರಿಪೋರ್ಟ್ಸ್ ಏನು ಹೇಳುತ್ತೆ ಅಂತ ಕೇಳಿ ತಿಳಿದುಕೊಳ್ಳಲು ಹೆದರಿದಳು. ಅವನಾಗಿಯೇ ಹೇಳಲಿ ಎಂದು ಕಾದಳು.

ಒಂದು ವಾರದ ನಂತರ ದಿವಾಕರ ಗೆಲುವಿನಿಂದ ಮನೆಗೆ ಬಂದವನೇ ಪೂರ್ಣಿಮಾಳನ್ನು ಖುಷಿಯಿಂದ ತಬ್ಬಿಕೊಂಡ.

''ಮೆಡಿಕಲ್ ರಿಪೋರ್ಟ್ಸ್ ಬಂತು ಪೂರ್ಣಿಮಾ... ಎಲ್ಲಾ ಪರ್ಫೆಕ್ಟ್ ಆಗಿದೆ. ಐ ಆಮ್ ಎ ಪರ್‌ಫೆಕ್ಟ್ ಮ್ಯಾನ್.....ಅವಳನ್ನು ಹಲವಾರು ಬಾರಿ ಚುಂಬಿಸಿದ. ಅವನ ಸಂತೋಷಕ್ಕೆ ತಕ್ಕ ಸಂತೋಷವನ್ನು ಪ್ರಕಟಿಸಲು ಅವಳಿಂದ ಆಗಲಿಲ್ಲ. ಗಂಡ ಎಲ್ಲಾ ರೀತಿಯಿಂದಲೂ ಸರಿ ಇದಾನೆ. ಅಂದರೆ ತನ್ನಲ್ಲೇ ಏನೋ ಐಬು ಅವಳ ಒಡಲಿಗೆ ಬೆಂಕಿ ಇಟ್ಟಂತಾಯಿತು. ''

''ಅವನ ಮುಖದ ಕಳೆ ಬದಲಾದುದನ್ನು ದಿವಾಕರ ಗಮನಿಸಿ ಪೆಚ್ಚಾದ. ತಾನು ಎಂತಹ ದಡ್ಡ... ತಾನು ಸರಿಯಾಗಿದೀನಿ ಎನ್ನುವ ಉತ್ಸಾಹದಲ್ಲಿ ಎಲ್ಲಾ ಹೇಳಿಬಿಟ್ಟೆ... ಈಗ ತಾನೇ ಸರಿಯಿಲ್ಲ ಎಂಬ ಆತಂಕ ಅವಳನ್ನು ಕಾಡುತ್ತಿದೆ. ಹೇಗಾದರೂ ಮಾಡಿ ಸಮಾಧಾನಗೊಳಿಸಬೇಕು ಎಂದುಕೊಂಡು ನುಡಿದ.''

''ಡಾಕ್ಟರು ಏನಂದ್ರು ಗೊತ್ತಾ ? ಮದುವೆಯಾಗಿ ಮೂರು ವರ್ಷಗಳಾದ್ರೇನಂತೆ. ನೀವಿಬ್ಬರೂ ಇನ್ನು ಚಿಕ್ಕವರು. ಕೆಲವರಿಗೆ ತಡವಾಗಿ ಮಕ್ಕಳಾಗುತ್ತೆ...... ಅದನ್ನೇ ಮನಸ್ಸಿಗೆ

ಹಚ್ಚಿಕೊಂಡು ಕೊರಗುವುದು ಬೇಡ ಅಂತ ಹೇಳಿದಾರೆ.''

''ಕೊರಗ್ದೇ ಏನು ಮಾಡಲಿ ? ಎಲ್ಲಾ ಸರಿಯಾಗಿತ್ತಲ್ಲ. ಈಗ ಏನಾಯ್ತು ಅಂತ. ನಾವು ಪ್ಲಾನಿಂಗ್ ಮಾಡಬಾರದಾಗಿತ್ತು... ಮಾತ್ರೆಗಳದ್ದೇ ಏನೋ ಎಫೆಕ್ಟ್, ನಾನು ಡಿ ಅಂಡ್ ಸಿ ಆಪರೇಷನ್ ಮಾಡಿಸಿಕೊಳ್ತೀನಿ.''

''ಆಫರೇಷನ್ನು ಬೇಡಮ್ಮ... ನಮಗೆ ಮಕ್ಕಳಾಗದಿದ್ದರೂ ಪರವಾಗಿಲ್ಲ, ನನಗೆ ಇದೆಲ್ಲ ಭಯ''

''ಥೂ ಬಿಡ್ತು ಅನ್ನಿ. ಆಪರೇಷನ್ ಮಾಡಿಸಿಕೊಳ್ಳೋಳು ನಾನು. ನನಗೆ ಏನೂ ಆಗುಲ್ಲ.''

''ಬೇಡ ಪೂರ್ಣಿಮಾ.... ನಿನಗೇನಾದ್ರೂ ಆದ್ರೆ ನಾನು ಖಂಡಿತಾ ಬದುಕಿರೋಲ್ಲ. ನಿನಗೆ ಯಾವುದೇ ರೀತಿಯ ಅಪಾಯವಾದರೂ ನನಗೆ ಸಹಿಸುಲ್ಲ.''

''ಹಠ ಮಾಡಬೇಡಿ ದಿವಾಕರ್...ಮೈನರ್ ಆಪರೇಷನ್ನು. ನನಗೇನೂ ಆಗುಲ್ಲ. ಆದರೆ ಅಮ್ಮ ಏನಂತಾರೋ...?''

''ಅಮ್ಮನಿಗೆ ಈಗಲೇ ಏನು ಹೇಳುವುದೂ ಬೇಡ. ಸಮಯ ಬಂದಾಗ ಹೇಳೋಣ...''

ಇಂಥ ವಿಷಯಗಳನ್ನೆಲ್ಲಾ ಮುಚ್ಚಿಡಬಾರದು ದಿವಾಕರ್. ಒಂದು ಹೋಗಿ ಇನ್ನೊಂದಾದ್ರೆ,ನಾಳೆ ನಮ್ಮನ್ನೇ ಆಕ್ಷೇಪಣೆ ಮಾಡ್ತಾರೆ. ನನಗೆ ಇದನ್ನೆಲ್ಲಾಆಡೋಕೆ ಸಂಕೋಚವಾಗುತ್ತೆ. ನೀವೇ ಹೇಳಿಬಿಡಿ.

''ನನಗೂ ಹೇಳೋಕೆ ಕಷ್ಟ, ಗಾಯತ್ರಿಗೆ ಹೇಳೋಣ... ಅವರೇ ಅಮ್ಮನಿಗೆ ಹೇಳಲಿ. ಗಾಯತ್ರಿಯ ಹತ್ತಿರ ಮಾತನಾಡು... ನೀನು ಏನೂ ಚಿಂತಿಸಬೇಡ. ಎಲ್ಲಾ ಒಳ್ಳೆಯದೇ ಆಗುತ್ತೆ...''

ಗಾಯತ್ರಿಯೊಡೆ ಈ ವಿಷಯ ಮಾತನಾಡಿದಾಗ ಅವಳು ಗಂಭೀರವಾಗಿ ಯೋಚಿಸಿದಳು. ಇದನ್ನೆಲ್ಲಾ ನೀನೇಕೆ ನನಗೆ ಮುಂಚೇನೇ ಹೇಳಲಿಲ್ಲ. ನಾನು ಒಳ್ಳೆ ಲೇಡಿ ಡಾಕ್ಟರರ ಬಳಿಗೆ ನಿನ್ನನ್ನು ಕರೆದುಕೊಂಡು ಹೋಗ್ತಿದ್ದೆ. ದಿವಾಕರ ಏನಂದ್ರು ?

''ಡಿ ಅಂಡ್‌ಸಿ ಆಪರೇಷನ್ ಬೇಡವೇ ಬೇಡ ಅಂತಾರೆ.''

''ದಿವಾಕರನಿಗೆ ಏನನ್ನೂ ಹೇಳಲೇಬೇಡ. ನಾನು ನಮ್ಮ ಪರಿಚಯದ ಡಾಕ್ಟರರ ಹತ್ತಿರ ಕರೆದುಕೊಂಡು ಹೋಗ್ತೀನಿ. ಸ್ಕ್ಯಾನಿಂಗ್ ಮಾಡಿಸೋಣ. ಗರ್ಭಕೋಶದಲ್ಲಿ ಏನೇ ತೊಂದರೆ ಇದ್ದರೂ ಗೊತ್ತಾಗುತ್ತೆ. ನೀನೇನೂ ವರಿ ಮಾಡ್ಕೋಬೇಡ. ನಾನಿದೀನಿ...'' ಅವಳ ಬೆನ್ನು ಸವರಿ ಸಮಾಧಾನ ಹೇಳಿದಳು.

ಎರಡು ಮೂರು ದಿನಗಳ ನಂತರ ಗಾಯತ್ರಿ ತನ್ನ ಪರಿಚಯದ ಡಾಕ್ಟರರ ಬಳಿಗೆ ಕರೆದುಕೊಂಡು ಹೋದಳು. ಆಕೆ ಫಾರಿನ್ನಿನಲ್ಲೂ ವ್ಯಾಸಂಗ ಮಾಡಿ ಬಂದಿದ್ದಳು. ಪೂರ್ಣಿಮಾಳ ಕೇಸ್ ಹಿಸ್ಟರಿಯನ್ನೆಲ್ಲಾ ವಿವರವಾಗಿ ತಿಳಿದುಕೊಂಡು ಅದಕ್ಕೆ ಸಂಬಂಧಿಸಿದಂತೆ ಪ್ರಶ್ನೆಗಳನ್ನು ಕೇಳಿದಳು.

"ಬ್ಲಡ್ ಟೆಸ್ಟ್, ಓವರಿ ಟೆಸ್ಟ್ ಎಲ್ಲಾ ಮಾಡಿಸೋಣ. ಸ್ಕ್ಯಾನಿಂಗ್ ಮಾಡಿಸೋಣ. ಆ ನಂತರವೇ ಮುಂದೆ ಏನು ಮಾಡಬೇಕೂಂತ ಹೇಳೋಕ್ಕಾಗುತ್ತೆ. ಸೀರಿಯಸ್ ಪ್ರಾಬ್ಲಂ ಏನೂ ಇಲ್ಲ ಅಂತ ಕಾಣುತ್ತೆ."

ಡಾಕ್ಟರು ಹೇಳಿದಂತೆ, ಎಲ್ಲಾ ಟೆಸ್ಟ್‌ಗಳನ್ನು ಮಾಡಿಸಿದ್ದಾಗಿತ್ತು. ಸ್ಕ್ಯಾನಿಂಗ್‌ನಲ್ಲೂ ಏನೂ ತೊಂದರೆ ಕಾಣಲಿಲ್ಲ. ಡಾಕ್ಟರು ರಿಪೋರ್ಟ್‌ಗಳನ್ನು ನೋಡಿ ಹೇಳಿದರು

ಎಲ್ಲಾ ನಾರ್ಮಲ್ ಆಗಿದೆ. ಏನೂ ಪ್ರಾಬ್ಲಂ ಇಲ್ಲ. ನಿಮಗೆ ಏನೋ ಸೈಕಲಾಜಿಕಲ್ ಪ್ರಾಬ್ಲಂ ಇರೋ ಹಾಗೆ ಅನ್ನಿಸುತ್ತೆ. ಮೊದಲು ಅದನ್ನು ಸರಿಪಡಿಸಿಕೊಳ್ಳಿ. ಖಂಡಿತಾ ಎಲ್ಲಾ ಸರಿ ಹೋಗುತ್ತದೆ

ಅವರ ಸಲಹೆಯಂತೆ ಸೈಕಿಯಾಟ್ರಿಸ್ಟ್ ಬಳಿಗೆ ಹೋಗಿ ಕೂಲಂಕಷವಾಗಿ ಚೆಕಪ್ ಮಾಡಿಸಿಕೊಂಡಿದ್ದಾಯ್ತು. ಅವರು ಹೇಳಿದರು.

"ನಿಮಗೆ ಯಾವ ಮನೋರೋಗವೂ ಇಲ್ಲ. ಪರ್ಫೆಕ್ಟ್ ಆಗಿದೀರಿ. ಇಲ್ಲದಿದ್ದರೆ ನಿಮಗೆ ನಿಮ್ಮ ಗಂಡನೊಡನೆ ಮಲಗಲೇ ಆಗುತ್ತಿರಲಿಲ್ಲ. ಬಹುಶಃ ನೀವು ಇಷ್ಟು ವರ್ಷ ತೆಗೆದುಕೊಂಡ ಕಾಂಟ್ರಸೆಪ್ಟಿವ್ ಪಿಲ್ಸ್‌ದೇ ಸೈಡ್ ಎಫೆಕ್ಟ್ ಇರಬಹುದು ಅಂತ ನನಗನ್ನಿಸುತ್ತದೆ. ಹಾಗೇನಾದರೂ ಇದ್ದರೆ, ಆ ಎಫೆಕ್ಟ್ ಹೋಗುವ ಹಾಗೆ ಜನರಲ್ ಮೆಡಿಸಿನ್ ತಗೋಬೇಕು. ಕ್ರಮೇಣ ಎಲ್ಲಾ ಸರಿಹೋಗುತ್ತದೆ. ನೀವು ನಿಮ್ಮ ಡಾಕ್ಟರು ಕೊಡುವ ಸಲಹೆಗಳನ್ನೇ ಮುಂದುವರಿಸಿ. ಅದೇ ಸರಿಯಾದ ಮಾರ್ಗ."

ಪೂರ್ಣಿಮಾ ನಿರಾಸೆಗೊಂಡಿದ್ದಳು. ಅವಳಿಗೆ ಯಾವ ಮಾತು ಬೇಕಿರಲಿಲ್ಲ. ಗಾಯತ್ರಿಗೂ ಅವಳ ಸ್ಥಿತಿ ಅರ್ಥವಾಗಿತ್ತು. ಕಾಂಟ್ರಾಸೆಪ್ಟಿವ್ ಪಿಲ್ಸ್‌ಗಳನ್ನು ಅವಳೇ ಸೂಚಿಸಿದ್ದು. ಅದರ ದುಷ್ಪರಿಣಾಮ ಏನಾದ್ರೂ ಆಗಿದ್ರೆ, ತಪ್ಪು ತನ್ನದೇ ಆಗುತ್ತದೆ. ಇವಳಿಗೆ ಹೇಗೆ ಸಮಾಧಾನ ಹೇಳುವುದು ? ಮೌನವಾಗಿ ಹೆಜ್ಜೆ ಹಾಕುತ್ತಿದ್ದಳು. ಇದ್ದಕ್ಕಿದ್ದಂತೆ, ಪೂರ್ಣಿಮಾಳ ಎರಡು ಕೈಗಳನ್ನು ಹಿಡಿದಳು.

"ನನ್ನನ್ನು ಕ್ಷಮಿಸು ಬಿಡು ಪೂರ್ಣಿಮಾ... ಹೀಗೆಲ್ಲಾ ಆದದ್ದು ನನ್ನಿಂದಲೇ ..." ಪೂರ್ಣಿಮಾ ತಲೆ ಕೊಡವಿದಳು.

"ಇಲ್ಲ ಗಾಯತ್ರಿ, ನಿಮ್ಮದೇನೂ ತಪ್ಪಿಲ್ಲ . ನನ್ನಗ್ರಹಚಾರವೇ ಚೆನ್ನಾಗಿಲ್ಲ. ಇಲ್ಲದಿದ್ದರೆ ನನಗೇ ಹೀಗಾಗಬೇಕಾ ? ಎಷ್ಟು ಜನ ಹೆಂಗಸರು, ಇದನ್ನು ತಗೊಳ್ಳಲ್ಲ. ಎಲ್ಲರೂ ತುಂಬಾ ಸೇಫ್ ಅಂತ ಅಂತಾರಲ್ಲ. ... ನನ್ನ ಹಣೇಲಿ ಬಂಜೆ ಅನ್ನೋ ಪಟ್ಟ ಇರಬೇಕೂಂತ ಬರೆದಿದ್ರೆ, ಅದರಂತೆ ಆಗುತ್ತೆ."

"ಹಾಗೆಲ್ಲಾ ಮಾತನಾಡಬೇಡಿ ಪೂರ್ಣಿಮಾ..... ಆ ಪಾಪಿ ಹಾಗಂದ ಮಾತ್ರಕ್ಕೆ ಅದು ನಿಜವಾಗುಲ್ಲ. ಈಗಿನ ಕಾಲದಲ್ಲಿ ಮಕ್ಕಳಾಗದೇ ಇರುವವರಿಗೆ ಹೊಸ ಹೊಸ ವಿಧಾನಗಳನ್ನು ಪ್ರಯೋಗಿಸಿ, ಮಕ್ಕಳಾಗುವಂತೆ ಮಾಡುತ್ತಾರೆ. ಬಂಜೆತನ ಅನ್ನೋ ಹೆಸರೇ ಇಲ್ಲದ ಹಾಗೆ ಮಾಡುತ್ತಿದ್ದಾರೆ...ಡಾಕ್ಟರ್ಸ್‌ಗಳು. "

"ನನಗೆ ಯಾವ ಪ್ರಯೋಗವೂ ಬೇಡ...."

''ಹೋಗಲಿ ಬಿಡು, ಅದನ್ನೆಲ್ಲಾ ನಿಧಾನವಾಗಿ ಮಾತನಾಡೋಣ. ಮೊದಲು ಡಿ ಅಂಡ್ ಸಿ ಆಪರೇಷನ್ ಆಗಲಿ. ಅದರಿಂದ ಪಾಸಿಟಿವ್ ರಿಸಲ್ಟ್ ಸಿಗಬಹುದು. ಅದೇನು ಮೈನರ್ ಆಪರೇಷನ್, ಕೆಲವೇ ಗಂಟೆಗಳಲ್ಲಿ ಮನೆಗೆ ಕಳಿಸಿ ಬಿಡ್ತಾರೆ. ನಾನು ನಿನಗೆ ಹೆಲ್ಪ್ ಮಾಡ್ತೀನಿ. ನೀನೆಲ್ಲಾ ನನ್ನ ಬಾಣಂತನದ ಸಮಯದಲ್ಲಿ ಎಷ್ಟು ಸಹಾಯ ಮಾಡಿದೀರಿ. ನಿನ್ನ ಡೆಲಿವರಿ ಸಮಯದಲ್ಲಿ ನಾನು ಒಂದುತಿಂಗಳು ರಜೆ ಹಾಕಿ ನಿನ್ನ ಬಾಣಂತನ ಮಾಡ್ತೀನಿ.'' ಪೂರ್ಣಿಮಾ ನಕ್ಕಂತೆ ಮಾಡಿದಳು. ಅವಳ ಮನಸ್ಸು ಕಲಕಿ ಹೋಗಿತ್ತು.

ಆದರೆ, ಅವರುಗಳು ಎಣಿಸಿದಂತೆ ಯಾವುದೂ ಸರಿಯಾಗಲಿಲ್ಲ. ಎಲ್ಲಾ ಟ್ರೀಟ್‌ಮೆಂಟ್‌ಗಳೂ ಮುಗಿದಿತ್ತು. ಡಿ ಅಂಡ್ ಸಿ ಆಗಿ ತಿಂಗಳುಗಳೇ ಕಳೆದಿತ್ತು. ಪೂರ್ಣಿಮಾ ದೈಹಿಕವಾಗಿ ಚೇತರಿಸಿಕೊಂಡಿದ್ದರೂ, ಮಾನಸಿಕವಾಗಿ ಬಹಳವಾಗಿ ಬಳಲಿ ಹೋಗಿದ್ದಳು. ದಿವಾಕರ ಅವಳಿಗೆ ಸಮಾಧಾನದ ಮಾತುಗಳನ್ನು ಹೇಳೀ ಹೇಳೀ ಸೋತು ಹೋಗಿದ್ದ.

''ಯಾವಾಗ ಆಗುತ್ತೋ ಆ ಮಗುವಾಗಲಿ. ನಾವು ಆ ದಿನಗಳಿಗಾಗಿ ಕಾಯೋಣ. ಮಕ್ಕಳಾಗಲಿಲ್ಲ ಅಂತ ನಾವೇಕೆ ಕೊರಗಬೇಕು ? ದೇವರಿಚ್ಛೆ ಇದ್ದರೆ ಎಂದಾದರೂ ಆಗೇ ಆಗುತ್ತದೆ. ಇಷ್ಟರ ಮೇಲೆ ನಮಗೆ ಮಕ್ಕಳಾಗಲಿಲ್ಲ ಅಂತಂದ್ರೆ ನಾವೇಕೆ ಅದೇ ಚಿಂತೆ ಮಾಡಬೇಕು.. ಒಂದು ಮಗುವನ್ನು ದತ್ತು ತೆಗೆದು ಕೊಂಡರಾಯಿತು. ಅದೇ ನಮ್ಮ ಮಗುವಾಗುತ್ತೆ.''

''ಅದೆಲ್ಲಾ ಏನೂ ಬೇಡ... ತಪ್ಪು ನನ್ನದು. ನನ್ನಲ್ಲಿ ದೋಷವಿದೆ. ನೀವು ಇನ್ನೊಂದು ಮದುವೆ ಮಾಡಿಕೊಳ್ಳಿ. ನಾವು ಸೆಪರೇಟ್ ಆಗೋಣ...''

''ಏನಂದೆ ? ಇನ್ನೊಂದು ಸಲ ಈ ಮಾತಾಡಿದ್ರೆ ಚಚ್ಚಿ ಹಾಕಿ ಬಿಡ್ತೀನಿ.''

''ನಿಧಾನವಾಗಿ ಯೋಚಿಸಿ ದಿವಾಕರ್ ನನಗೆ ತಾಯಿಯಾಗುವ ಅರ್ಹತೆ ಇಲ್ಲದಿರುವಾಗ ನಿಮ್ಮ ಜೀವನವನ್ನು ಹಾಳು ಮಾಡುವ ಅಧಿಕಾರ ನನಗಿಲ್ಲ. ನಾನು ಡೈವೋರ್ಸ್ ಕೊಡ್ತೀನಿ. ನೀವು ಮತ್ತೆ ಮದುವೆಯಾಗಲೇ ಬೇಕು.''

''ನೀನು ಹೀಗೆಲ್ಲಾ ಮಾತಾಡಿದ್ರೆ, ನಾನು ನಿನ್ನ ಹತ್ತಿರ ಮಾತನ್ನೇ ಆಡುಲ್ಲ.''

''ನನಗೂ ಅದೇ ಬೇಕಾಗಿರುವುದು...''

''ನೋಡು ಪೂರ್ಣಿಮಾ... ನಾನು ನಿನ್ನನ್ನು ಮದುವೆಯಾದಾಗ, ಕೆಲವು ವಚನಗಳನ್ನು ಕೊಟ್ಟಿದ್ದೆ. ಅದರ ಪ್ರಕಾರ, ನನ್ನ ಸುಖ, ನಿನ್ನ ಸುಖ, ನಿನ್ನ ದುಃಖ ನನ್ನ ದುಃಖ, ಒಂದು ವೇಳೆ ನಮಗೆ ಮಗುವಾಗದಿದ್ದರೆ ನಾನು ಸ್ವಾರ್ಥಿಯಾಗುವುದಿಲ್ಲ. ನಿನಗೆ ತಾಯಿಯಾಗುವ ಅರ್ಹತೆ ಇಲ್ಲದಿದ್ದರೆ , ನನಗೆ ತಂದೆಯಾಗುವ ಯೋಗ್ಯತೆ ಇಲ್ಲ ಅಂತಂದುಕೊಳ್ಳುತ್ತೇನೆ. ಒಂದುವೇಳೆ, ನನಗೆ ಅಪ್ಪ ಎನಿಸಿಕೊಳ್ಳುವ ಆಸೆ ಆದರೆ, ಆ ಮಗುವಿಗೆ ನೀನು ತಾಯಿಯಾಗಲೇ ಬೇಕು. ಇಲ್ಲದಿದ್ದರೆ ನಾವಿಬ್ಬರೂ ಹೀಗೆ ಇದ್ದು ಬಿಡೋಣ. ಇದೇ ನನ್ನ ಕಡೇ ನಿರ್ಧಾರ.''

''ನೀವೇನು ಹೇಳ್ತೀದೀರೋ ನನಗಂತೂ ಒಂದೂ ಅರ್ಥವಾಗುತ್ತಿಲ್ಲ.''

''ನಾವು ಒಂದು ಮಗುವನ್ನು ದತ್ತು ತೆಗೆದುಕೊಳ್ಳೋಣ. ಆ ಮಗುವನ್ನೇ ನಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗು ಎಂದು ಭಾವಿಸಿ ಪ್ರೀತಿಯಿಂದ ಸಾಕಿ ಸಲಹಿ ಬೆಳೆಸೋಣ...''

''ನಿಮ್ಮಷ್ಟು ಬೇಗ ನಾನು ಯಾವ ನಿರ್ಧಾರವನ್ನು ತೆಗೆದುಕೊಳ್ಳುವುದಿಲ್ಲ. ನನಗೆ

ದುಃಖವಾಗದಿರಲಿ ಅಂತ ನೀವು ಹೀಗೆ ಹೇಳುತ್ತಿದ್ದೀರಿ ಅಂತ ನನಗೆ ಗೊತ್ತು.. ಆದರೆ ನಿಮ್ಮದೇ ಆದ ಒಂದು ಮಗುವನ್ನು ಹೆತ್ತುಕೊಡುವ ಯೋಗ್ಯತೆ ನನಗೆ ಇಲ್ಲದೇ ಇದ್ದರೆ, ನಿಮ್ಮ ಹೆಂಡತಿಯಾಗಿಯೂ ಇರುವ ಅರ್ಹತೆ ನನಗಿಲ್ಲ'' ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಾಗ, ಅವನು ಅವಳನ್ನು ತನ್ನ ಎದೆಗೆ ಒರಗಿಸಿಕೊಂಡ.

''ಈ ವಿಷಯದಲ್ಲಿ ನಾವು ಇನ್ನು ಮುಂದೆ ಚರ್ಚೆ ಮಾಡುವುದು ಬೇಡ. ಮಕ್ಕಳು ಸಧ್ಯಕ್ಕೆ ಬೇಡ ಅಂತ ಫ್ಯಾಮಿಲಿ ಪ್ಲಾನಿಂಗ್ ಮಾಡಿದ್ದೆವು. ಇಂದಿನಿಂದ ಆದಷ್ಟು ಬೇಗ ನಮಗೆ ಒಂದು ಮಗುವಾದರೂ ಆಗಲಿ ಅಂತ ದೇವರಲ್ಲಿ ಪ್ರಾರ್ಥಿಸೋಣ. ಆದರೆ, ನೀನು ನನ್ನಿಂದ ದೂರವಾಗುವ ಮಾತನ್ನು ಮಾತ್ರ ಆಡಬಾರದು ನನ್ನಾಣೆ.''

''ಹೀಗೆ ಆಣೆ ಪ್ರಮಾಣ ಹಾಕಿ ನನ್ನನ್ಯಾಕೆ ಕಟ್ಟಿಹಾಕ್ತೀರಿ ? ''

''ಯಾಕೆ ಅಂದರೆ, ನೀನಿಲ್ಲದೇ ನಾನು ಇರಲಾರೆ. ನೀನಿಲ್ಲದಿದ್ದರೆ ನನ್ನ ಜೀವನ ಅಪೂರ್ಣವಾಗುತ್ತದೆ. ''

''ಒಂದು ಮಾತು ಮರೆತಿಲ್ಲ ದಿವಾಕರ್. ನಮ್ಮಿಬ್ಬರನ್ನು ಅಪ್ಪ ಅಮ್ಮ ಅಂತ ಮುದ್ದು ಮುದ್ದಾಗಿ ಕರೆಯಲು ಒಂದಾದರೂ ಮಗುವಿಲ್ಲದಿದ್ದರೆ, ನಮ್ಮಿಬ್ಬರ ಜೀವನವೇ ಅಪೂರ್ಣವಾಗುತ್ತೆ.''

''ಷ್.... ಮಗುವಿನ ಮಾತು ಬೇಡಾಂತ ಆಗಲೇ ಹೇಳಿದ್ದೆ ಅಲ್ವಾ ?... ಇನ್ನು ಮುಂದೆ, ನಿನಗೆ ನಾನು ಮಗು, ನನಗೆ ನೀನೇ ಮಗು... ಎನ್ನುತ್ತಾ ಅವಳ ತೊಡೆಯ ಮೇಲೆ ತಲೆ ಇಟ್ಟು ಮಲಗಿದ. ಅವಳ ಕೈ ಅವನ ಬೆನ್ನನ್ನು ಮೆಲ್ಲನೆ ತಟ್ಟಲಾರಂಭಿಸಿತು. ಆದರೆ ಅವಳ ಮನಸ್ಸು ಇಲ್ಲಿರಲೇ ಇಲ್ಲ. ''

ಹೀಗೆ ಎಷ್ಟು ವರ್ಷ ಒಬ್ಬರಿಗೊಬ್ಬರು ಸಮಾಧಾನ ಹೇಳಿಕೊಂಡು ತಳ್ಳುಕ್ಕೆ ಆಗುತ್ತೆ. ಒಂದಲ್ಲ ಒಂದು ಒಂದುದಿನ ದಿವಾಕರನಿಗೆ ನನ್ನ ಮೇಲೆ ಬೇಸರ ಬರಬಹುದು. ಅದಕ್ಕೇ ಮೊದಲು ಒಂದು ತೀರ್ಮಾನವಾಗಲೇ ಬೇಕು....

ದಿವಾಕರ ಹಾಗೇ ನಿದ್ದೆ ಹೋಗಿದ್ದ. ಇವಳು ಹಾಗೇ ಕುಳಿತೇ ಇದ್ದಳು.

ಮತ್ತೆ ಮತ್ತೆ ಇನ್ನೊಂದಿಬ್ಬರ ಡಾಕ್ಟರರ ಳಿಗೆ ಹೋಗಿ ಎಲ್ಲಾ ಟೆಸ್ಟ್‌ಗಳನ್ನು ಮಾಡಿಸಿಕೊಂಡದ್ದಾಗಿತ್ತು. ಜ್ಯೋತಿಷಿಗಳನ್ನು ಭವಿಷ್ಯ ಕೇಳಿದ್ದಾಗಿತ್ತು...

ಇನ್ನೊಂದು ವರ್ಷದ ಒಳಗೆ ಮಡಿಲನ್ನು ತುಂಬುವ ಮಗು ನಿಮ್ಮ ಮನೆಗೆ ಬರುತ್ತದೆ.ಅವರು ಯಾವ ಅರ್ಥದಲ್ಲಿ ಹೇಳಿದ್ದರೋ, ಪೂರ್ಣಿಮಾ , ದಿವಾಕರ ಊಹಿಸಿದ್ದೇ ಬೇರೆ. ಬಹುಶಃ ನಮ್ಮದೇ ಸ್ವಂತ ಮಗು ಹುಟ್ಟುವುದು ಸಾಧ್ಯವಿಲ್ಲ ಅಂತ ಕಾಣುತ್ತೆ. ಅದಕ್ಕೇ ಈ ಪಂಡಿತರು ಹೀಗೆ ಹೇಳಿರುವರೆಂದು ಭಾವಿಸಿದರು.

ತಾಯಿ ಆಕ್ಷೇಪಣೆ ಮಾಡದೇ ಬಿಡಲಿಲ್ಲ''ಹಿರಿಯೋರು ಅಂತ ನಮಗೆ ಒಂದು ಮಾತು ತಿಳಿಸುಲ್ಲ... ನೀವು ನೀವೇ ಏನೇನೋ ಮಾಡಿಕೊಳ್ತೀರಿ. ಈಗ ನೋಡು ರಿಪೇರಿ ಮಾಡುಕ್ಕೆ ಆಗದ ಹಾಗಾಗಿದೆ. ''

'' ಹಾಗೇನಿಲ್ಲಮ್ಮ. ಯಾವ ಸಮಸ್ಯೆಗೂ ಉಪಾಯವಿಲ್ಲದೇ ಏನಿಲ್ಲ. ನಾವು ಒಂದು

ಮಗುವನ್ನು ದತ್ತು ತೆಗೆದುಕೊಂಡು ಸಾಕ್ತೀವಿ.''

''ಏನಂದೆ! ದತ್ತು ತಗೋತೀಯ .. ನಮ್ಮ ರಕ್ತ ಮಾಂಸ ಹಂಚಿಕೊಂಡು ಬೆಳೆದ ಮಕ್ಕಳೇ ನಮ್ಮವರಲ್ಲ ಅನ್ನೋ ತರಹ ವರ್ತಿಸುತ್ತಾರೆ. ಅಂಥದ್ದರಲ್ಲಿ ಯಾವುದೋ ಗೊತ್ತಿಲ್ಲದ ಮಗುವನ್ನು ತಂದು ಸಾಕಿ, ಮಣ್ಣಿಗೆ ಮಣ್ಣು ತಿಂತೀಯ ಅಷ್ಟೇ.'' ಉದ್ರೇಕದಿಂದ ನುಡಿದಳು.

''ಯಾಕಮ್ಮಾ ಪ್ರತಿಯೊಂದಕ್ಕೂ ಹೀಗೆ ಮಾತಾಡ್ತೀಯ... ನಮಗೂ ನಮ್ಮ ಸ್ವಂತ ಮಕ್ಕಳೇ ಆಗಲಿ ಅನ್ನೋ ಆಸೆ ಇರುಲ್ವೆ ... ಅದು ನೆರವೇರದೇ ಇದ್ದಾಗ ಈ ಉಪಾಯ ಸರಿ ಅನ್ನಿಸ್ತು...''

''ಏನು ಸರಿಯೋ ಏನು ಬೆಸವೋ... ಅಂತೂ ನಿನ್ನ ಹೆಂಡತಿಗೆ ಮಗು ಹಡೆಯುವ ಯೋಗ ಇಲ್ಲ ಅನ್ನು... ಈ ಡಾಕ್ಟರ್ಸು ಏನೇನೋ ಹೇಳ್ತಾರೆ ಏನೇನೋ ಓದಿರುತ್ತಾರೆ. ಏನೂ ಮಾಡುಕ್ಕೆ ಆಗುಲ್ವಂತಾ ? ಬರೀ ಹುಸಿ ಮಾತುಗಳು ಅಷ್ಟೇ... ''

ಡಾಕ್ಟರ್ಸ್ ಎಲ್ರೂ ಏನೂ ದೇವರಲ್ಲ... ವರಕೊಡೋಕೆ. ದೇವರಿಚ್ಛೆಯೆ ಹೀಗಿರುವಾಗ, ಡಾಕ್ಟರ್ಸ್ ಏನ್ಮಾಡ್ತಾರೆ ?

''ಯಾವುದೋ ಮಗೂನ ತಂದು ಸಾಕುಕ್ಕೆ ನನಗಂತೂ ಸುತಾರಾಂ ಇಷ್ಟವಿಲ್ಲ. ಬೆಳಗ್ಗಿಂದ ಸಾಯಂಕಾಲದವರೆಗೂ ಅವಳು ಕೆಲಸಕ್ಕೆ ಅಂತ ಹೊರಟು ಹೋಗ್ತಾಳೆ. ಯಾವುದೋ ತಂದೆ ತಾಯಿಗಳಿಗೆ ಹುಟ್ಟಿದ ಮಗುವನ್ನು ನೋಡಿಕೊಳ್ಳಲು ನನ್ನಿಂದ ಸಾಧ್ಯವಿಲ್ಲ.''

''ನಾವು ದತ್ತು ತೆಗೆದುಕೊಂಡ ಮೇಲೆ ಅದಕ್ಕೆ ನಾವೇ ತಂದೆ ತಾಯಿ, ನೀವು ಅಜ್ಜಿ ತಾತಾ. ಆ ಮಗು ನಿನ್ನನ್ನೇ ಅಜ್ಜೀಂತ ಕರೆಯೋದು.''

''ಬೇಡಪ್ಪಾ ಬೇಡ. ನಾನು ಅಜ್ಜಿಯಾಗುವುದೂ ಬೇಡಾ. ಆ ಮಗು ನನ್ನನ್ನು ಅಜ್ಜಿ ಅಂತ ಕರೆಯುವುದೂ ಬೇಡ.''

''ಬರೀ ನಿನ್ನ ವಿಷಯವನ್ನೇ ಚಿಂತಿಸ್ತಿದೀಯಲ್ಲ. ಪೂರ್ಣಿಮಾಳಿಗೆ ಎಷ್ಟು ಆಘಾತವಾಗಿದೆ ಅಂತ ನೀನೇನು ಬಲ್ಲೆ ? ತಪ್ಪೆಲ್ಲಾ ತನ್ನದೇ ಅಂತ ಕೊರಗಿ ಕೊರಗಿ ಕೃಶವಾಗಿದಾಳೆ ಅವಳು. ಅವಳಿಗೂ ಮುದ್ದಾಡೋಕೆ ಒಂದು ಮಗು ಬೇಡ್ವೇನಮ್ಮಾ. ಅಮ್ಮ ಅಂತ ಕರೆಸಿಕೊಳ್ಳೋಕೆ ಅವಳೂ ಹಂಬಲಿಸ್ತಾ ಇದಾಳೆ.''

''ಅಂದರೇ ... ದೋಷವಿರುವುದು ಅವಳಲ್ಲಿ. ಹೇಗಾದರೂ ಸರಿ ಆ ದೋಷವನ್ನು ಸರಿ ಮಾಡೋಕೆ ನೀನು ಹೊರಟಿದೀಯ. ಒಂದು ವೇಳೆ ನಿನ್ನಲ್ಲೇ ದೋಷವಿದ್ದಿದ್ದರೆ ಅವಳೇನು ಮಾಡ್ತಿದ್ದಳು ?''

''ನಾನೇ ಒಂದು ಮಗುವನ್ನು ದತ್ತು ತೆಗೆದುಕೊಳ್ಳುವಂತೆ ಸಲಹೆ ನೀಡ್ತಿದ್ದೆ. ಅವಳಿಗೆ ಒಪ್ಪಿಯಾಗದಿದ್ದರೆ ಡೈವೋರ್ಸ್ ಕೊಡುತ್ತಿದ್ದೆ.''

''ಈಗ ಅವಳೇ ಏಕೆ ನಿನಗೆ ಡೈವೋರ್ಸ್ ಕೊಡಬಾರದು? ಅವಳೂ ತಿಳುವಳಿಕಸ್ಥೆ, ವಿದ್ಯಾವಂತೆ. ಅವಳಿಗೂ ನಿನ್ನ ವಿಷಯ ಅರ್ಥ ಆಗುತ್ತೆ ತಾನೇ ....?''

''ಅಮ್ಮಾ.... ನೀನೇನು ಹೇಳ್ತಿದೀಯ ಅಂತ ನಿನಗೆ ತಿಳಿದಿದೆ ತಾನೇ ? .... .. ಈ ಡೈವೋರ್ಸ್ ವಿಷಯವನ್ನು ಕನಸ್ನಲ್ಲೂ ಆಲೋಚಿಸಬೇಡ.''

''ಯಾಕೋ... ? ನಿನ್ನ ಹಾಗೇ ಎಲ್ರೂ ಆಡುವುದಿಲ್ಲ. ಡೈವೋರ್ಸ್ ಕೊಟ್ಟು ಇನ್ನೊಂದು ಮದುವೆಯಾಗ್ತಾರೆ. ನಿನ್ನ ಆಸೆಗಳಿಗೆ ಬೆಲೇನೇ ಇಲ್ವೇ ?....''

''ನನ್ನ ಆಸೆಗಳೇ ಪೂರ್ಣಿಮಾಳ ಆಸೆ... ಈಗಾಗಲೇ ಅವಳು ಅರ್ಧ ಹುಚ್ಚಿಯಾಗಿದಾಳೆ. ಇಂಥ ಮಾತುಗಳನ್ನು ಕೇಳಿಸಿಕೊಂಡರೆ ಪೂರ್ತಿ ಹುಚ್ಚಿಯಾಗಿ ಬಿಡ್ತಾಳೆ ಅಷ್ಟೆ... ಇನ್ನೆಂದಿಗೂ ಇಂತಹ ಮಾತುಗಳನ್ನಾಡಕೂಡದು ನೀನು.''

''ಈ ರಗಳೆಗಳಿಗೆಲ್ಲಾ ಗಾಯತ್ರಿಯೇ ಕಾರಣ... ಪೂರ್ಣಿಮಾಳಿಗೆ ಹೀಗೆ ದೋಷವಿದೆ ಅಂತ ಮೊದಲೇ ಗೊತ್ತಿತ್ತು ಅಂತ ಕಾಣುತ್ತೆ. ಅದಕ್ಕೆ ಹಾಗೆ ಆತುರಾತುರ ವಾಗಿ ನಿನ್ನ ತಲೆಗೆ ಕಟ್ಟಿದಳು. ನೀನೊಬ್ಬ ಪೆಕರ ಅವಳ ಕಣ್ಣಿಗೆ ಬಿದ್ದೆ. ಇದರಲ್ಲಿ ಅವಳಿಗೆ ಏನೋ ಲಾಭವಿದೆ. ನಾನು ಅವಳನ್ನು ಕೇಳಿಯೇ ಕೇಳ್ತೀನಿ. ''

''ಸುಮ್ಮನಿರಮ್ಮ. ಏನೇನೋ ಹಗರಣ ಮಾಡಬೇಡ. ಆಗೆಲ್ಲಾ ಗಾಯತ್ರಿ ನನ್ನ ಮಗಳಂತೆ ಅಂತ ಮದುವೆಗೆ ಓಡಾಡಿದೆ. ಬಾಣಂತನ ಮಾಡಿದೆ. ಈಗ ಅವರೂ ಕೆಟ್ಟವರಾದ್ರಾ ನಿನಗೆ... ''

''ಹೊಟ್ಟೇಲಿ ಹುಟ್ಟಿದ ಮಕ್ಕಳೇ ಮುಚ್ಚುಮರೆ ಮಾಡಿ ಕೆಟ್ಟವರಾಗ್ತಾರೆ. ಇನ್ನು ಇವಳದ್ದೇನು ? ನಮಗೆ ಅವಳಿಂದ ಆದದ್ದು ಮೋಸವೇ ತಾನೇ, ನಾನು ಕೇಳದೇ ಬಿಡುವುದಿಲ್ಲ.''

''ನನ್ನಾಣೆ.... ಇನ್ನೆಂದೂ, ಯಾರೊಂದಿಗೂ ನೀನು ಈ ವಿಷಯವನ್ನು ಮಾತನಾಡಕೂಡದು. ಆಡಿದ್ದು ತಿಳಿದರೆ, ನಾನು ಈ ಮನೆಯನ್ನು ಬಿಟ್ಟು ಹೊರಟು ಹೋಗ್ತೀನಿ ಅಷ್ಟೇ.''

''ನನ್ನ ಮನೆ ಬಿಟ್ಟು, ನಮ್ಮನ್ನು ಬಿಟ್ಟು ಬೇಕಾದರೆ ಹೋಗ್ತೀಯ... ಆ ಚೆಲುವೇನ ಬಿಡೋಕೆ ರೆಡಿಯಾಗಿಲ್ಲ. ಇಷ್ಟೇ ತಾನೇ ಸಾಕಿ ಬೆಳೆಸಿದ್ದಕ್ಕೆ ''ಆಕೆಯ ಧ್ವನಿ ಗದ್ಗದವಾಯಿತು. ದಿವಾಕರನಿಗೂ ಮನಸ್ಸು ರೋಸಿ ಹೋಗಿತ್ತು.ಆ ಸ್ಥಳದಿಂದ ಸರಿದು ಹೋದ.

ಕೆಲವೇ ದಿನಗಳ ನಂತರ ದಿವಾಕರ, ದಿನ ಪತ್ರಿಕೆಯೊಂದರಲ್ಲಿ ಪ್ರಕಟಣೆ ಹಾಕಿಸಿದ. ''ಮಕ್ಕಳಿಲ್ಲದ ದಂಪತಿಗಳಿಗೆ ಮುದ್ದಾದ, ಆರೋಗ್ಯವಂತ, ಒಂದು ವರ್ಷದೊಳಗಿನ ಮಗುವೊಂದು ಬೇಕಾಗಿದೆ. ದತ್ತು ಕೊಡಲು ಸಿದ್ಧರಿರುವವರು ವಿವರಗಳನ್ನು ತಿಳಿಸಬಹುದು ಎಂದು ಹೇಳಿ ತನ್ನ ಮನೆಯ ಫೋನು ನಂಬರನ್ನು ಕೊಟ್ಟಿದ್ದ. ವಾರ ಕಳೆದರೂ ಯಾರೂ ಫೋನು ಮಾಡಿರಲಿಲ್ಲ. ಅವನಿಗೆ ನಿರಾಸೆ ಯಾಗಿತ್ತು. ಯಾರೂ ತಮ್ಮ ಕರುಳ ಕುಡಿಯನ್ನು ಇನ್ನೊಬ್ಬರಿಗೆ ಕೊಡಲು ಸಿದ್ಧರಾಗಿರುವುದಿಲ್ಲ. ಅಲ್ಲದೇ ಈ ಕಾಲದಲ್ಲಿ ಒಂದೋ ಎರಡೋ ಮಕ್ಕಳಿರುತ್ತವೆ. ಅವುಗಳನ್ನು ಬೇರೆಯವರಿಗೆ ಕೊಡಲು ಹೇಗೆ ಮನಸ್ಸು ಬರುತ್ತದೆ ? ಅವನು ಈ ವಿಷಯವನ್ನು ಪೂರ್ಣಿಮಾಳಿಗಾಗಲೀ, ತಾಯಿಗಾಗಲೀ ತಿಳಿಸಿರಲಿಲ್ಲವಾದ್ದರಿಂದ, ಅದರ ಬಗ್ಗೆ ಮಾತನಾಡುವಂತಿಲ್ಲ.

ದಿನಪತ್ರಿಕೆಯಲ್ಲಿ ಪ್ರಕಟಣೆ ಬಂದು ಒಂದುತಿಂಗಳ ಮೇಲಾಗಿತ್ತು. ಒಂದು ದಿನ ಒಬ್ಬ ವ್ಯಕ್ತಿ ದಿವಾಕರನನ್ನು ಭೇಟಿ.ಯಾಗಲು ಬಂದ. ಆಗ ಅವನಾಗಲೀ, ಪೂರ್ಣಿಮಾಳಾಗಲೀ ಮನೆಯಲ್ಲಿರಲಿಲ್ಲ. ಆಕೆಯೇ ಅವನನ್ನು ಕೂರಿಸಿ ಮಾತನಾಡಿಸಿದಳು.

''ನಾನು ದಿವಾಕರನ ಫ್ರೆಂಡ್. ನಾನೀಗ ತುಂಬಾ ಕಷ್ಟದಲ್ಲಿದ್ದೇನೆ. ನಾನು ಅವನನ್ನು ಕಾಣಬೇಕಿತ್ತು'' ಎಂದು ಹೇಳಿ ತನ್ನ ವಿಳಾಸವನ್ನು ಕೊಟ್ಟು ಆದಷ್ಟುಬೇಗ ತನ್ನನ್ನು ಬಂದು ನೋಡಲು ಹೇಳಿ ಎಂದು ಹೇಳಿ ಹೊರಟುಹೋದ.

ಆಕೆಗೆ ದಿಗ್ಭ್ರಮೆ. ತನಗೆ ತಿಳಿದಂತೆ ದಿವಾಕರನಿಗೆ ಸ್ನೇಹಿತರು ಇಲ್ಲ. ಇದ್ದರೂ ಅವನು ತನಗೆ ತಿಳಿಸದೇ ಇರುತ್ತಿರಲಿಲ್ಲ. ಯಾರಿವನು ? ಮುಖದಪರಿಚಯವೂ ಸಿಗದಂತೆ ಗಡ್ಡ ಮೀಸೆ ಬೆಳೆಸಿಕೊಂಡಿದ್ದ. ತನಗೂ ಎಂತಹ ಪೆದ್ದುತನ ? ಕಳ್ಳನಿರ ಬಹುದೇ ? ಒಳಗೆ ಕೂರಿಸಿ ಮಾತನಾಡಿಸಿದೆನಲ್ಲ. ಎಲ್ಲೆಲ್ಲಿ ಏನೇನಿದೆ ಅಂತ ಎಲ್ಲವನ್ನೂ ಗಮನಿಸಲು ಒಳಗೆ ಬಂದಿರಬಹುದು. ತಾನು ನಂಬಿಬಿಟ್ಟೆನಲ್ಲ.

ಮಗ ಬಂದೊಡೆ, ''ನಿನ್ನನ್ನು ಹುಡುಕಿಕೊಂಡು ಅದ್ಯಾವನೋ ಬಂದಿದ್ದ. ಗಡ್ಡ ಮೀಸೆ ಬೆಳೆಸಿದ್ದ. ನನಗೆ ಯಾರೂಂತ ಗೊತ್ತಾಗ್ತಲಿಲ್ಲ. '' ವರದಿ ಒಪ್ಪಿಸಿದಳು.

''ಅವನ ಹೆಸರೇನಂತೆ ? ''

''ನಾನು ಕೇಳಲೇ ಇಲ್ಲ...''

''ಯಾವನೋ ಅಪರಿಚಿತ ವ್ಯಕ್ತಿಯನ್ನು ಕರೆದು ಕೂರಿಸಿ ಮಾತನಾಡಿಸಿದೀಯ. ಅವನ ಹೆಸರೇನೂಂತ ತಿಳಿದುಕೊಳ್ಳೋಕೆ ಆಗಲಿಲ್ವಾ ನಿನ್ನ ಕೈಲಿ.''

''ಅಪರೂಪಕ್ಕೆ ಯಾರೋ ದಿಢೀರನೇ ನಿನ್ನ ಸ್ನೇಹಿತ ಅಂತ ಹೇಳಿಕೊಂಡು ಮನೆಗೆ ಬಂದ. ಗಡಿಬಿಡಿಯಲ್ಲಿ ಮರೆತು ಬಿಟ್ಟೆ.''

''ಕಳ್ಳನೋ ಸುಳ್ಳವೋ ಯಾರಿಗೆ ಗೊತ್ತು ! ಹಾಗೆಲ್ಲಾ ಯಾರು ಯಾರನ್ನೋ ಒಳಗೆ ಕರೆದು ಸೇರಿಸುವುದು ಕ್ಷೇಮ ಅಲ್ಲ. ''

''ಆಮೇಲೆ ನನಗೂ ಹಾಗೆ ಅನ್ನಿಸ್ತು. ಅವನ ವೇಷವನ್ನು ನೋಡಿದರೆ, ಸಾಚಾ ಮನುಷ್ಯನಂತೆ ಕಾಣಲಿಲ್ಲ. ಅಂಥೋನ ಹತ್ತಿರ ನಿನ್ನ ಸ್ನೇಹ ಏನು ?''

''ಅವನ್ಯಾರೋ ನನಗೇನು ಗೊತ್ತು ? ಹೆಸರಾದ್ರೂ ಗೊತ್ತಿದ್ದಿದ್ರೆ...''

''ಅವನು ತನ್ನ ಅಡ್ರೆಸ್ ಕೊಟ್ಟಿದ್ದ.... ಇಲ್ಲೇ ಎಲ್ಲೋ ಇಟ್ಟಿದ್ದೆ. ತಡೀ ನೋಡ್ತೀನಿ. ಆ ವ್ಯಕ್ತಿ ಬರೆದುಕೊಟ್ಟಿದ್ದ ಚೀಟಿಯನ್ನು ಹುಡುಕಿಕೊಟ್ಟಳು. ಹೆಸರನ್ನು ಓದಿಕೊಂಡು ವಿಳಾಸವನ್ನು ನೋಡಿದ. ಈ ಹೆಸರಿನ ವ್ಯಕ್ತಿ ತನ್ನ ಸ್ನೇಹಿತರಲ್ಲಿ ಯಾರೂ ಇದ್ದಂತಿಲ್ಲ. ಯಾರಿರಬಹುದು? ತನ್ನನ್ನು ನೋಡಲೇಬೇಕೆಂದು ಯಾಕೆ ಹೇಳಿರಬಹುದು. ಏನಾದರಾಗಲಿ ತಾನೊಮ್ಮೆ ಅವನನ್ನು ಭೇಟಿಯಾಗುವುದು ಒಳ್ಳೆಯದು ಅಂತ ನಿರ್ಧರಿಸಿದ.

ಬಿಡುವು ಮಾಡಿಕೊಂಡು ಆ ವಿಳಾಸವನ್ನು ಹಿಡಿದುಕೊಂಡು, ಆ ರಸ್ತೆಯಲ್ಲಿ ಕಡೆಗೂ ಆ ಮನೆಯನ್ನು ಪತ್ತೆ ಹಚ್ಚಿದ. ಪಕ್ಕದ ಗಲ್ಲಿಯಲ್ಲಿನ ಒಂದು ಓಣಿಯಲ್ಲಿ ಔಟ್ ಹೌಸ್ ಮನೆಯನ್ನು ತಲುಪಿ, ಬಾಗಿಲನ್ನು ಬೆರಳಿನಿಂದ ತಟ್ಟಿದ. ಬಾಗಿಲು ತೆಗೆದ ವ್ಯಕ್ತಿ ಇವನನ್ನೇ ಮೇಲಿನಿಂದ ಕೆಳಕ್ಕೆ ನೋಡಿ, ಬನ್ನಿ ಎಂದು ಒಳಕ್ಕೆ ಕರೆಯಿತು. ಬೆಳಕು ಗಾಳಿ ಇಲ್ಲದ ಸಾಧಾರಣವಾದ ಮನೆ. ಒಳಗೆಲ್ಲಾ ಒಂದು ತರಹ ವಾಸನೆ ತುಂಬಿಕೊಂಡಿತ್ತು. ಅದೇನೆಂದು ಇವನಿಗೆ ತಿಳಿಯಲಿಲ್ಲ. ಅಲ್ಲಿದ್ದ ಒಂದು ಕುರ್ಚಿಯ ಮೇಲೆ ದಿವಾಕರ ಕುಳಿತ. ಆ ವ್ಯಕ್ತಿ ಗೋಡೆಗೊರಗಿ ನಿಂತ.

''ನೀವು ದಿವಾಕರ್ ತಾನೇ. ....'' ಈ ಧ್ವನಿಯನ್ನು ಹಿಂದೆ ಎಲ್ಲೋ ಕೇಳಿದ್ದೀನೆಂದೆನಿಸಿತು . ನೆನಪಿಸಿಕೊಳ್ಳಲು ಪ್ರಯತ್ನಿಸಿ ಸೋತ.

''ಹೌದು, ನೀವು.....''

''ನನ್ನ ಹೆಸರು ನಿಮಗೆ ಈಗಾಗಲೇ ಗೊತ್ತಾಗಿದೆ. ಇನ್ನು ನನ್ನ ಪರಿಚಯದ ವಿವರವನ್ನು ನಿಧಾನವಾಗಿ ತಿಳಿಸುತ್ತೇನೆ.ಈಗ ಮುಖ್ಯವಾದ ವಿಷಯದ ಬಗ್ಗೆ ಮಾತನಾಡೋಣ... ದತ್ತು ಮಗುಬೇಕೆಂದು ನೀವು ಪೇಪರ್ರಿನಲ್ಲಿ ಹಾಕಿಸಿದ್ರಿ ಅಲ್ಲವೇ ?''

''ಹೌದು... ಆದರೆ ನೀವೆಂದೂ ಫೋನ್‌ಮಾಡಿದಂತೆ ಜ್ಞಾಪಕವಿಲ್ಲ. ''

''ಹೌದು ನಾನು ಫೋನು ಮಾಡಲಿಲ್ಲ. ನೇರವಾಗಿ ನಿಮ್ಮನ್ನು ನೋಡಿ ಮಾತನಾಡೋಣ ಅಂತ ನಿಮ್ಮ ಮನೆಗೇ ಬಂದೆ...''

''ಇದರ ಬಗ್ಗೆ ವಿವರಣೆಯನ್ನು ನಮ್ಮ ತಾಯಿಗೇ ಕೊಡಬಹುದಾಗಿತ್ತಲ್ಲ....''

''ನಿಮ್ಮ ಮನೆಯನ್ನು ನೋಡಿದ ಮೇಲೆ ನಿಮ್ಮೊಡನೆ ಮಾತನಾಡಿದ ಮೇಲೇ ಬೇರೆ ಯಾರಿಗಾದರೂ ಈ ವಿಷಯ ತಿಳಿಸುವುದು ಅಂತ ನಿರ್ಧರಿಸಿದ್ದೆ.''

''ಹೋಗಲಿ ಹೇಳಿ...''

''ನನಗೆ ಇಬ್ಬರು ಮಕ್ಕಳು. ಒಂದು ಹೆಣ್ಣು ಒಂದು ಗಂಡು... ನಾನೀಗ ತುಂಬಾ ಕಷ್ಟದಲ್ಲಿದೀನಿ. ಮಕ್ಕಳನ್ನು ಸಾಕುವ ಯೋಗ್ಯತೆ ಸಹ ನನಗಿಲ್ಲ. ಆದ್ದರಿಂದ....''

''ಮಕ್ಕಳ ವಯಸ್ಸೆಷ್ಟು?''

''ಮಗಳಿಗೆ ಮೂರುವರ್ಷ. ಅವಳ ತಮ್ಮನಿಗೆ ಒಂದು ವರ್ಷ.. ನಿಮಗೆ ಒಂದು ವರ್ಷದೊಳಿಗನ ಮಗು ಬೇಕು ಅಂತ ತಿಳಿಸಿದೀರಿ...''

''ಹೌದು... ನಮಗೆ ಚಿಕ್ಕ ಮಗು ಬೇಕು... ನಾನು ಆ ಮಗುವನ್ನು ನೋಡಬಹುದೇ ?''

''ನೋಡಬಹುದು ಏನು ? ಆ ಮಗು ನಿಮ್ಮದು ಅಂತಲೇ ತಿಳಿದುಕೊಳ್ಳಿ. ... ಆದರೆ ಅದಕ್ಕೆ ಮುಂಚೆ ಮುಖ್ಯವಾದ ವಿಷಯದ ಬಗ್ಗೆ ತೀರ್ಮಾನವಾಗಬೇಕು....''

''ಅಂದರೇ.... ನಾನು ಕಾನೂನಿನ ಪ್ರಕಾರ ದತ್ತು ಸ್ವೀಕಾರ ಮಾಡಿಕೊಳ್ಳುತೀನಿ. ಅದಕ್ಕೆ ಎಲ್ಲಾ ಡಾಕ್ಯೂಮೆಂಟ್ಸ್‌ನ್ನ ನಾನು ರೆಡಿಮಾಡ್ತೀನಿ....''

''ಅದಲ್ಲ... ನನಗೆ ಹಣದ ಅಗತ್ಯವಿದೆ ಆದ್ದರಿಂದ....''

''ಅಂದರೆ ನಿಮ್ಮ ಮಗುವನ್ನು ಮಾರ್ತಾ ಇದೀರಾ ?''

''ಮಾರಬೇಕೂಂತ ನನಗೂ ಏನಿರಲಿಲ್ಲ ಆದರೆ ಪರಿಸ್ಥಿತಿ ಹಾಗಿದೆ... ಈ ಮಕ್ಕಳ ತಾಯಿ ಆಸ್ಪತ್ರೆಯಲ್ಲಿ ನರಳ್ತಾ ಮಲಗಿದಾಲೆ. ಅವಳ ಚಿಕಿತ್ಸೆಗಾಗಿ, ಈಗಾಗಲೇ ಎಪ್ಪತ್ತು ಎಂಬತ್ತು ಸಾವಿರ ರೂ.ಗಳ ಮೇಲೆ ಖರ್ಚಾಗಿದೆ. ನನಗೆ ಉದ್ಯೋಗವಿಲ್ಲ. ಇದ್ದುದನ್ನು ಈ ಮಕ್ಕಳಿಗೋಸ್ಕರ ಬಿಟ್ಟುಬಿಟ್ಟೆ. ನನ್ನ ಹೆಂಡತಿಯೂ ಅವಳಿಗೆ ಅನಾರೋಗ್ಯವಾದ ಮೇಲೆ ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಟ್ಟಳು. ಅವಳಿಗೆ ಬರಬೇಕಾದ ಹಣ ಇನ್ನೂ ಬಂದಿಲ್ಲ. ನನ್ನ ಬಳಿ ಯಾವ ಬ್ಯಾಂಕ್ ಬ್ಯಾಲೆನ್ಸೂ ಇಲ್ಲ. ಸಂಪಾದಿಸಿದ್ದೆಲ್ಲಾ ಸಂಸಾರಕ್ಕೇ ಖರ್ಚಾಗಿ ಹೋಗುತ್ತಿತ್ತು. ಮಧ್ಯೆ ಈ ಎಕಸ್ಟ್ರಾ ಖರ್ಚು ಬೇರೆ. ''

''ನಿಮ್ಮ ಪತ್ನಿಗೆ ಏನು ಖಾಯಿಲೆ ?''

''ಎರಡನೇ ಮಗು ಹುಟ್ಟಿದ ಆರು ತಿಂಗಳ ನಂತರ ನನ್ನ ಹೆಂಡತಿ ಮತ್ತೆ ಪ್ರೆಗ್ನೆಂಟ್ ಆದಳು. ಅಬಾರ್ಷನ್ ಮಾಡಿಸುವುದೆಂದು ತೀರ್ಮಾನಿಸಿದೆವು. ಆದರೆ ಏನೋ ಕಾಂಪ್ಲಿಕೇಶನ್ ಆಯ್ತೆಂದು ಡಾಕ್ಟರು ಹೇಳ್ತಾರೆ. ಅವಳಿಗೆ ಆಪರೇಷನ್ ಮಾಡಿದರು. ಆಗ, ಅವಳ ಒಂದು ಕಿಡ್ನಿಯನ್ನು ತೆಗೆದುಬಿಟ್ಟರಂತೆ. ಇನ್‌ಫೆಕ್ಷನ್ ಆಗಿತ್ತು ತೆಗೆಯಲೇ ಬೇಕಾಗಿತ್ತು ಅಂತ ಹೇಳಿದರು. ನಮಗೇನು ಗೊತ್ತಾಗುತ್ತೆ. ಈ ಮೆಡಿಕಲ್ ಸೈನ್ಸ್? ಈಗ ಅವಳಿಗೆ ಗರ್ಭಕೋಶವೂ ಇಲ್ಲ, ಒಂದು ಕಿಡ್ನಿಯೂ ಇಲ್ಲ. ಅವಳು ಚೇತರಿಸಿ ಕೊಳ್ಳಲು ಹಲವಾರು ತಿಂಗಳುಗಳೇ ಬೇಕಾಗುತ್ತದೆ. ಈಗಾಗಲೇ ನಾನು ಸಾಲಗಾರನಾಗಿ ಬಿಟ್ಟಿದೀನಿ. ನನ್ನ ಮಾತಿನ ಮೇಲೆ ನಂಬಿಕೆ ಇಲ್ಲದಿದ್ದರೆ, ಈ ರೆಕಾರ್ಡ್ಸ್‌ಗಳನ್ನು ನೋಡಿ ಎನ್ನುತ್ತಾ ಮೆಡಿಕಲ್ ರಿಪೋರ್ಟ್‌ಗಳನ್ನು ಅವನ ಮುಂದೆ ಹಿಡಿದ. ''

''ಪರವಾಗಿಲ್ಲ ಬಿಡಿ. ನಾನು ನಿಮ್ಮ ಮಾತನ್ನು ನಂಬ್ತೀನಿ. ಆದರೆ, ಆಮೇಲೆ ಈ ಮಗುವಿನ ತಾಯಿಗೆ ಏನು ಉತ್ತರ ಕೊಡ್ತೀರಿ ?''

''ಅವಳೇ ಈ ಸಲಹೆಯನ್ನು ಕೊಟ್ಟಿದ್ದು. ಯಾರಾದರೂ ಸಾಕಿ ಕೊಳ್ಳೋರು ಇದ್ದರೆ, ಅವರಿಗೆ ನಮ್ಮ ಮಕ್ಕಳನ್ನು ಕೊಟ್ಟು ಬಿಡೋಣ. ನಮ್ಮ ತಾಪತ್ರಯ ನಮಗಿರಲಿ, ಮಕ್ಕಳಾದರೂ ಸುಖವಾಗಿ ಬೆಳೆಯಲಿ ಅಂತ ಅವಳಾಸೆ...''

''ನಿಮ್ಮ ಹತ್ತಿರದ ಬಳಗದವರು ಯಾರೂ ಇಲ್ವೇ ?''

''ಇದಾರೆ... ಆದರೆ ನೆಂಟರಿಷ್ಟರಲ್ಲಿ ಸಾಲವನ್ನು ಕೇಳುವುದಾಗಲೀ, ಮಕ್ಕಳನ್ನು ಸಾಕಲು ಕೊಡುವುದಾಗಲೀ, ಸರಿಯಲ್ಲ ಅಂತ ನನ್ನ ಅನಿಸಿಕೆ. ನಮ್ಮ ಕಷ್ಟದ ಸಮಯದಲ್ಲಿ ಆಗುವ ಬದಲು ಹಿಂದೆ ಆಡಿಕೊಂಡು ನಗೋರೆ ಜಾಸ್ತಿ.''

''ನೋಡುವುದಕ್ಕೆ ವಿಚಿತ್ರ ವ್ಯಕ್ತಿಯಂತೆ ಕಂಡು ಬಂದರೂ, ಮಾತುಗಳನ್ನು ವಿವೇಚನೆಯಿಂದ ಆಡುತ್ತಾನೆಂದೆನಿಸಿತ್ತು. ಆದರೂ, ಇವನ್ಯಾರೋ ಇವನ ಕುಲಗೋತ್ರ ಗಳೇನೋ ಸರಿಯಾಗಿ ವಿಚಾರಿಸದೇ ಮುಂದುವರೆಯಬಾರದು .. ಅಲ್ಲದೇ ಈ ಕಾಲದಲ್ಲಿ ಮೋಸ ಮಾಡುವವರಿಗೇನೂ ಕಡಿಮೆ ಇಲ್ಲ. ಈ ಮಕ್ಕಳು ಇವನವೇ ಅಂತ ಹೇಳೋಕು ರುಜುವಾತುಗಳು ಬೇಕೇ ಬೇಕು ಎಂದುಕೊಂಡು, ಆಗಲಿ, ನಾನು ಈ ವಿಷಯವನ್ನು ನನ್ನ ಹೆಂಡತಿಯೊಡನೆ ಚರ್ಚಿಸಿ, ನಿಮಗೆ ತಿಳಿಸುತ್ತೀನಿ'' ಅಂತಂದ.

''ಆದಷ್ಟು ಬೇಗ ತಿಳಿಸಿ. ... ಈ ಕಾಲದಲ್ಲಿ ನಿಮಗೆ ಸುಲಭವಾಗಿ ಇಂತಹ ಮಗು ಎಲ್ಲಿ ಸಿಗುತ್ತದೆ ? ನನ್ನ ಹೆಂಡತಿ ಆರೋಗ್ಯವಾಗಿದ್ದಿದ್ರೆ ನಮಗೆ ಈ ಆಲೋಚನೆಯೇ ಬರುತ್ತಿರಲಿಲ್ಲ.''

''ಆಗಲಿ ಆದಷ್ಟು ಬೇಗ ತಿಳಿಸ್ತೀನಿ. ನಿಮಗೆ ನನ್ನಿಂದ ಏನಾದ್ರೂ ಸಹಾಯ ಬೇಕಾಗಿದ್ರೆ ಕೇಳಿ. ನನಗೆ ಆದರೆ ಮಾಡ್ತೀನಿ. ''

''ಒಂದು ರಿಕ್ವೆಸ್ಟ್ ... ನಿಮಗೆ ತೊಂದರೆ ಇಲ್ಲದಿದ್ದರೆ ಕೆಲವು ದಿನಗಳ ಮಟ್ಟಿಗೆ ಈ ಮಕ್ಕಳನ್ನು ನಿಮ್ಮ ಮನೆಯಲ್ಲಿಟ್ಟುಕೊಂಡಿರಿ. ನನಗೆ ಆಸ್ಪತ್ರೆ ಓಡಾಟ ಮಕ್ಕಳನ್ನು ನೋಡಿಕೊಳ್ಳೋಕೇ ಯಾರೂ ಇಲ್ಲ. ''

''ಈ ಸಮಯದಲ್ಲೂ ಮನೆಯವರು ಸಹಾಯ ಮಾಡುಲ್ಲ ಅಂತಂದ್ರೆ ಆಶ್ಚರ್ಯವಾಗುತ್ತೆ.''

''ಅದೆಲ್ಲ ಒಂದು ದೊಡ್ಡ ಕತೆ.. ಈಗ ಹೇಳುಕ್ಕೆ ಸಮಯ ಸಾಲದು''

''ಹೀಗೆ ಏಕಾಏಕಿ ನಿರ್ಧರಿಸುವುದು ಕಷ್ಟವಾಗುತ್ತೆ. ನನ್ನ ಹೆಂಡತಿ, ಹಾಗೂ ನನ್ನ ತಾಯಿಯ ಹತ್ತಿರ ಮಾತನಾಡಬೇಕು. ''

''ಹಾಗೇ ಮಾಡಿ. ಆದರೆ ಆದಷ್ಟು ಬೇಗ ತೀರ್ಮಾನ ತೆಗೆದುಕೊಂಡರೆ ನನಗೆ ಉಪಕಾರ ಮಾಡಿದಂತಾಗುತ್ತದೆ.'' ಅವನು ಕೈ ಮುಗಿದು ಕೇಳಿಕೊಂಡಾಗ ದಿವಾಕರ ಕರಗಿ ಹೋದ.

''ಆಯ್ತು ನಾನು ಯಾವುದಕ್ಕೂ ನಾಳೇನೇ ಬಂದು ಹೇಳ್ತೀನಿ.'' ಹಾಗೆ ಹೇಳಿದರೂ, ದಿವಾಕರನಿಗೆ ಆತಂಕವಾಗಿತ್ತು. ಪೂರ್ಣಿಮಾ ಏನನ್ನುವಳೋ , ತಾಯಿ ಒಪ್ಪುವಳೋ ಇಲ್ಲವೋ.... ಮೊದಲು ಗಾಯತ್ರಿಯ ಸಲಹೆಯನ್ನು ಕೇಳುವುದು ಒಳ್ಳೆಯದು ಎಂದು ತನ್ನಲ್ಲೇ ಹೇಳಿಕೊಂಡ. ಪಬ್ಲಿಕ್ ಬೂತ್‌ನಿಂದ ಮನೆಗೆ ಫೋನು ಮಾಡಿ ತಾನು ಗಾಯತ್ರಿಯೊಂದಿಗೆ ಮಾತನಾಡಬೇಕು ಎಂದ.

ಗಾಯತ್ರಿ ಲೈನಿಗೆ ಬಂದಳು. ''ನಾನು ಈಗಲೇ ಮುಖ್ಯವಾದ ವಿಷಯವನ್ನು ನಿಮ್ಮೊಡನೆ ಹೇಳಬೇಕು. ಈಗಲೇ ಯಾರಿಗೂ ಏನನ್ನೂ ಹೇಳಬೇಡಿ. ನಮ್ಮ ಮನೆಯ ಹತ್ತಿರದ ಬಸ್‌ಸ್ಟಾಪ್ ಬಳಿ ಕಾಯ್ತಾ ಇರ್ತೀನಿ.''ಅಂತಂದ. ಗಾಯತ್ರಿಗೆ ಆತಂಕ ವಾಗಿತ್ತು. ಭಾಸ್ಕರನಿಗೆ ಮಗುವನ್ನು ನೋಡಿಕೊಳ್ಳುವಂತೆ ಹೇಳಿ, ತಾನು ಬಸ್‌ಸ್ಟಾಪ್‌ಗೆ ಬಂದಳು.

''ತಾನು ಪೇಪರ್‌ನಲ್ಲಿ ಕೊಟ್ಟ ಪ್ರಕಟಣೆಯ ಬಗ್ಗೆ ಸಂಕ್ಷಿಪ್ತವಾಗಿ ಹೇಳಿ, ತಾನು ಆ ವ್ಯಕಿಯೊಡನೆ ಮಾತಾಡಿದುದನ್ನು, ಆತನ ರಿಕ್ವೆಸ್ಟ್ ಬಗ್ಗೆ ಹೇಳಿ, ನಾನು ಈ ಬಗ್ಗೆ ಅಮ್ಮನಿಗಾಗಲೀ, ಪೂರ್ಣಿಮಾಳಿಗಾಗಲೀ, ಏನೂ ತಿಳಿಸಿಲ್ಲ, ಈಗ ಏಕಾಏಕಿ ನಾನು ಆ ಮಕ್ಕಳನ್ನು ಹೇಗೆ ಮನೆಗೆ ಕರೆದುಕೊಂಡು ಬರಲಿ ಈಗ ನೀವೇ ಏನಾದರೂ ಉಪಾಯವನ್ನು ಹೇಳಬೇಕು'' ಕೇಳಿಕೊಂಡ.

''ನನ್ನ ಉಪಾಯದಿಂದ ನಿಮ್ಮಬ್ಬರಿಗೆ ತೊಂದರೆಯೇ ಆಗಿದೆ. ದಿವಾಕರ್ ಇದು ನಿಮ್ಮ ಪರ್ಸನಲ್ ವಿಷಯ. ನಾನೇನು ಹೇಳಲಿ ? ''

''ಆತ ಕಷ್ಟದಲ್ಲಿದಾನೆ. ಆತನಿಗೆ ಸಹಾಯ ಮಾಡೋಣ ಅಂತನ್ನಿಸುತ್ತೆ. ಆದರೆ, ಯಾವುದೇ ಒಂದು ಕರಾರು ಆಗದೇ, ಆ ಮಕ್ಕಳನ್ನು ಕರೆದುಕಂಡು ಬಂದು ಇಟ್ಟುಕೊಂಡರೆ ತಪ್ಪಾಗುತ್ತೆ. ನಾಳೆ ಏನಾದ್ರೂ ಹೆಚ್ಚುಕಡಿಮೆ ಆದರೆ ... ? ''

''ಏನೇ ರಿಸ್ಕ್ ಬಂದರೂ ಅದನ್ನು ಫೇಸ್ ಮಾಡಬೇಕಾಗುತ್ತದೆ. ನಿಮಗೆ ಬೇಕಾಗಿರುವುದು ಒಂದೇ ಮಗು. ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಎರಡೂ ಮಕ್ಕಳನ್ನು ನಿಮ್ಮ ಮನೆಯಲ್ಲಿಟ್ಟುಕೊಂಡರೆ, ನಿಮಗೇ ಕಷ್ಟವಾಗಬಹುದು. ಅಲ್ಲದೇ ಮಕ್ಕಳು ಯಾರದ್ದು ಅಂತ ನಿಮ್ಮ ತಾಯಿಗೆ ಹೇಳ್ತೀರಿ?''

''ಅದಕ್ಕೇ ನಿಮ್ಮನ್ನು ಗುಟ್ಟಾಗಿ ಕರೆಸಿದ್ದು. ನೀವೇ ನನಗೆ ಈಗ ಸಹಾಯ ಮಾಡಬೇಕು. ಪೂರ್ಣಿಮಾ ಮನಸ್ಸಿನಲ್ಲೇ ಕೊರಗ್ತಾಳೆ. ಅದನ್ನು ನನ್ನಿಂದ ನೋಡುಕ್ಕೆ ಆಗದೇ,ಒಂದು ಮಗುವನ್ನು ದತ್ತು ತೆಗೆದುಕೊಳ್ಳುವುದು ಅಂತ, ಯೋಚಿಸಿದ್ದೆ.''

''ನಿಮ್ಮ ಯೋಚನೆ ತುಂಬಾ ಯೋಗ್ಯವಾಗಿದೆ ದಿವಾಕರ್. ಇನ್ಯಾರೇ ಆಗಿದ್ದರೂ ಬೇರೆ ಮದುವೆ ಮಾಡಿಕೊಳ್ಳುವ ಯೋಚನೆ ಮಾಡುತ್ತಿದ್ದರು. ಯೂ ಆರ್ ಎ ಗ್ರೇಟ್ ಮ್ಯಾನ್ '' ಹೇಳಿದಳು.

''ನಾನು ಮಕ್ಕಳಿಲ್ಲದೇ ಜೀವಮಾನವೆಲ್ಲಾ ಹಾಗೇ ಇರಬಲ್ಲೆ ಗಾಯತ್ರಿ. ಆದರೆ ಪೂರ್ಣಿಮಾ.... ? ಆ ಹಳೆಯ ಮಾತುಗಳನ್ನೇ ಮೆಲುಕು ಹಾಕಿ ತನ್ನನ್ನೇ ತಾನು ಹಳಿದುಕೊಳ್ತಾಳೆ. ನಾನು ಪೂರ್ಣಿಮಾಳನ್ನು ಪ್ರೀತಿಸಿದ್ದು ನಿಜ ತಾನೇ. ಆ ಪ್ರೀತಿ ಸುಖದಲ್ಲಿ ಹೆಚ್ಚಿದ್ದು, ದುಃಖದಲ್ಲಿ ಯಾವ ರೀತಿಯಿಂದಲೂ ಕಡಿಮೆ ಆಗಬಾರದು ಅಲ್ವಾ? ನಾನು ಸ್ವಾರ್ಥಿಯಾಗಲಾರೆ... ಅವಳನ್ನು ಆದಷ್ಟು ಸುಖವಾಗಿಟ್ಟು ಕೊಳ್ಳಬೇಕೆಂಬುದೇ ನನ್ನ ಆಸೆ...''

ಐ ಲೈಕ್ ದಿಸ್ ಸ್ಪಿರಿಟ್ ದಿವಾಕರ್. ...ನಾನು, ಭಾಸ್ಕರನಿಗೆ ನಿಜವಾದ ಪ್ರೇಮಿ ಎಂದು ಹೆಮ್ಮೆ ಪಟ್ಟಿದ್ದೆ. ನೀವು ಭಾಸ್ಕರನನ್ನು ಮೀರಿಸಿದ್ದೀರಿ. ಪೂರ್ಣಿಮಾ ಅದೃಷ್ಟವಂತೆ, ನಿಮ್ಮಂತಹ ಪ್ರೇಮಿ, ಪತಿ ಸಿಕ್ಕಿದ್ದು ಅವಳ ಅದೃಷ್ಟವೇ ಸರಿ.

''ನನ್ನನ್ನು ಆಮೇಲೆ ಹೊಗಳುವಿರಂತೆ. ಈಗ ನನ್ನ ಸಮಸ್ಯೆಗೆ ಪರಿಹಾರ ಹೇಳಿ...'' ಒತ್ತಾಯಿಸಿದ.

''ಓ.ಕೇ. ನಾನು ಒಂದು ಪ್ಲಾನ್ ಆಡ್ತೀನಿ. ಬಹುಶಃ ಇದರಿಂದ ಯಾರಿಗೂ ತೊಂದರೆ ಆಗುಲ್ಲ, ಆಗಲೂ ಬಾರದು '' ಎಂದು ತನ್ನ ಪ್ಲಾನನ್ನು ಹೇಳಿದಳು.

ರಾತ್ರಿ ಎಲ್ಲರೂ ಒಟ್ಟಿಗೆ ಕುಳಿತಿದ್ದಾಗ, ಗಾಯತ್ರಿ ಮಾತನ್ನೆತ್ತಿದಳು.

''ನನ್ನ ಕಲೀಗ್ ಒಬ್ಬರು ಬಹಳ ಕಷ್ಟದಲ್ಲಿದ್ದಾರೆ. ಆತನಿಗೆ ಕೆಲಸವಿಲ್ಲ. ಹೆಂಡತಿಗೆ ಅನಾರೋಗ್ಯ. ಆಗಲೋ ಈಗಲೋ ಎನ್ನುವ ಸ್ಥಿತಿ. ಎರಡು ಮಕ್ಕಳು. ಒಂದಂತೂ ತುಂಬಾ ಚಿಕ್ಕದು. ನೋಡಿಕೊಳ್ಳಲು ಯಾರೂ ಇಲ್ಲ. ಆ ಮಕ್ಕಳನ್ನು ನೋಡಿದರೆ ಅಯ್ಯೋ ಅಂತ ಅನ್ನಿಸುತ್ತೆ. ಆ ಮಕ್ಕಳಿಗೆ ಒಂದು ಸರಿಯಾದ ದಿಕ್ಕು ದೆಸೆ ಸಿಗುವವರೆಗೆ, ನಮ್ಮ ಮನೇಲಿ ಇಟ್ಟುಕೊಂಡಿರೋಣ ಅಂತ. ನಿಮ್ಮೆಲ್ಲರ ಒಪ್ಪಿಗೆ ಬೇಕು... ಏನಂತೀರಿ ಆಂಟೀ.... ಅಳುಕುತ್ತಾ ಕೇಳಿದಳು. ಮಕ್ಕಳು ಅನಾಥರಲ್ಲ. ಇಲ್ಲದಿದ್ದರೆ ಅನಾಥಾಶ್ರಮಕ್ಕೆ ಸೇರಿಸಿ ಅಂತ ಹೇಳಬಹುದಾಗಿತ್ತು. ಆ ಮಾತನ್ನು ಸೇರಿಸಿದಳು.''

''ತಂದೆ ತಾಯಿ, ಅಜ್ಜ ಅಜ್ಜಿ ಚಿಕ್ಕಪ್ಪ ಮಾವ ಅತ್ತೆ ಯಾರೂ ಇಲ್ವೇ ....?''

''ಹುಂ ನಮ್ಮ ಹಾಗೇ ಅವರೂ ಮನೆಯಿಂದ ಓಡಿ ಬಂದು ಮದುವೆ ಯಾದವರು. ನಮ್ಮ ಅದೃಷ್ಟ ಚೆನ್ನಾಗಿತ್ತು. ತಂದೆ ತಾಯಿಗಳಿಗಿಂತ ಹೆಚ್ಚಾಗಿ ನಿಮ್ಮ ನೆರವು ನಮಗೆ ಸಿಕ್ಕಿತು. ಸ್ಕಂದ ಬಹಳ ಲಕ್ಕೀ... ಅವನಿಗೆ ಅಜ್ಜಿ, ತಾತ ಸೋದರ ಮಾವ ಅತ್ತೆ ಎಲ್ಲಾ ಇದಾರೆ. ಆ ಮಕ್ಕಳ ಸ್ಥಿತಿ ನೋಡಿದರೆ ಕರುಳು ಕಿತ್ತು ಬರುತ್ತೆ. ಅಂತ ಸ್ಥಿತಿ ನಮ್ಮ ಶತ್ರುಗಳಿಗೂ ಬರಬಾರದು.''

ದಿವಾಕರ ಅವಳನ್ನೇ ಬೆರಗಾಗಿ ನೋಡುತ್ತಿದ್ದ. ನಾನು ಕೊಟ್ಟಿದ್ದು ಕ್ಲೂ ಮಾತ್ರ. ಒಂದು ಸೊಗಸಾದ ನಾಟಕವನ್ನೇ ರಚಿಸುತ್ತಿದಾಳಲ್ಲ, ತಾಯಿ ಏನು ಹೇಳಿ ಬಿಡುವಳೋ

ಎಂದು ಕಾತುರದಿಂದ ಆಕೆಯನ್ನೇ ನೋಡಿದ.

''ನಮ್ಮ ಕಷ್ಟವೇ ನಮಗೆ ಸಾಕಷ್ಟಿದೆ. ಹೊಸ ಹೊಸ ತಾಪತ್ರಯಗಳನ್ನು ಯಾಕೆ ಅಂಟಿಸ್ಕೋಬೇಕು.''

''ಏನಮ್ಮಾ ನಮ್ಮ ಕಷ್ಟಕ್ಕೆ ನೀವು ನೆರವಾಗಲಿಲ್ವಾ '' ಭಾಸ್ಕರ ನುಡಿದ.

''ಹೌದಪ್ಪಾ ಅದೂ ಒಂದು ಕಾಲ ಇತ್ತು. ನಮಗೆ ನೀವು ಸಹಾಯ ಮಾಡಿದಿರಿ. ನಾವು ನಿಮಗೆ ನೆರವಾದೆವು. ಈಗ ಆ ಕಾಲ ಬದಲಾಗಿದೆ. ನಮ್ಮ ಮನೆಗೆ ಸೊಸೆ ಬಂದಿದಾಳೆ. ನನ್ನ ಮಗ ಸಂಸಾರಿಯಾಗಿದಾನೆ. ಈಗ ಅವರುಗಳದ್ದೇ ಯಜಮಾನಿಕೆ'' ಆಂಟಿ ಮೆಲ್ಲನೆ ಜಾರಿಕೊಳ್ಳಲು ನೋಡಿದಳು.

''ಏನಪ್ಪಾ ದಿವಾಕರ್, ನಿಮ್ಮ ತಾಯಿ ಹೀಗಂತಾರೆ. ನೀವೇನಂತೀರಿ... ಇವತ್ತಿಗೂ ನಾವು ಈ ಮನೇಲಿ ಪೇಯಿಂಗ್ ಗೆಸ್ಟ್‌ಗಳು. .. ನಮಗೆ ಪೂರ್ಣ ಸ್ವತಂತ್ರವಿಲ್ಲ.''

''ಹಾಗೆ ಹೇಳಬೇಡಿ ಗಾಯತ್ರಿಯವರೇ, ನಾವೆಲ್ಲಾ ಒಂದು ಮನೆಯವರ ತರಹ ಇದೀವಿ. ನಿಮಗೂ ಸ್ವಾತಂತ್ರ್ಯವಿದೆ. ಆದರೆ, ಎರಡೆರಡು ಮಕ್ಕಳನ್ನು ನೋಡಿಕೊಳ್ಳುವುದು ಕಷ್ಟವಾಗುತ್ತೆ ಅಲ್ವಾ ?''

''ಒಂದು ಹದಿನೈದು ದಿನ ರಜೆ ಹಾಕಿ ನಾನೇ ನೋಡಿಕೊಳ್ತೀನಿ. ಅಷ್ಟರಲ್ಲಿ ಅವರು ಏನಾದ್ರೂ ಅರೇಂಜ್ ಮಾಡಬಹುದು. ನೀವೇನಂತೀರಿ ಆಂಟಿ ?''

''ನಾನು ಆಗಲೇ ಹೇಳಿದ್ನಲ್ಲ ನಂದೇನಿಲ್ಲ ಅಂತ... ಪೂರ್ಣಿಮಾ ಸುಮ್ಮನೇನೇ ಕೂತಿದಾಳೆ. ಅವಳನ್ನು ಒಂದು ಮಾತು ಕೇಳಿ ... ಅವಳೂ ಮಾತನ್ನಾಡಲಿ.''

''ಪೂರ್ಣಿಮಾ ಏನಂತೀಯ ?'' ದಿವಾಕರ ಅವಳನ್ನು ಅಲುಗಾಡಿಸಿ ಕೇಳಿದ. ಬೆಚ್ಚಿಬಿದ್ದವಳಂತೆ ಅವಳು ಆಂ ಎಂದಳು.

''ಎಲ್ಲಿದ್ದೆ ನೀನು ? ನಾವೆಲ್ಲಾ ಮಾತಾಡ್ತಾನೇ ಇದೀವಿ.''

''ಏನೋ ಯೋಚಿಸುತ್ತಿದ್ದೆ. ನಿಮಗೆಲ್ಲಾ ಹೇಗೆ ಬೇಕೋ ಹಾಗೇ ಮಾಡಿ ಕೊಳ್ಳಿ... ನನಗೇನೂ ತೊಂದರೆ ಇಲ್ಲ.''

''ಮನೇಲಿ ಒಟ್ಟೊಟ್ಟಿಗೆ ಮೂರು ಮಕ್ಕಳು ಸೇರಿ ಗಲಾಟೆ ಮಾಡಬಹುದು. ಅಳಬಹುದು. ನಿಮಗೆ ಬೇಜಾರಾದರೆ.... ''

''ನನಗೇಕೆ ಬೇಜಾರಾಗುತ್ತೆ ? ನಾನು ಬ್ಯಾಂಕಿಗೆ ಹೋಗಿರುತ್ತೀನಲ್ಲ.''

''ಹಾಗಾದರೆ ಅವರು ಮಕ್ಕಳನ್ನು ಕರೆದುಕೊಂಡು ಬಂದರೆ, ನಿನಗೆ ಏನೂ ಅಬ್ಜೆಕ್ಷನ್ ಇಲ್ಲಾ ಅನ್ನು , ಅವನುಉತ್ಸಾಹದಿಂದ ನುಡಿದಾಗ ಅವನನ್ನೇ ವಿಚಿತ್ರವಾಗಿ ನೋಡಿದಳು. ಯಾರದ್ದೋ ಮಕ್ಕಳು, ಯಾರೋ ಕರೆತಂದು ನೋಡ್ಕೋತಾರೆ, ಇವನಿಗೇಕೆ ಇಷ್ಟು ಉತ್ಸಾಹ? ಅವಳ ನೋಟವನ್ನು ಗಮನಿಸಿ, ಬೇರೆಡೆಗೆ ದೃಷ್ಟಿಯನ್ನು ತಿರುಗಿಸಿದ. ಗಾಯತ್ರಿ ಅವನ ಗಮನವನ್ನು ಸೆಳೆದು ಮುಗುಳ್ನಕ್ಕಳು. ಬಲಗೈ ಹೆಬ್ಬೆಟ್ಟನ್ನು ಎತ್ತಿ ಗೆಲುವಿನ ಸಂಜ್ಞೆಯನ್ನು ತೋರಿದಳು. ''

ಗಾಯತ್ರಿ ಆಫೀಸಿಗೆ ಹೊರಟಾಗ, ದಿವಾಕರನೂ ಅವಳೊಂದಿಗೆ ಹೊರಟ. ಬ್ಯಾಂಕಿನಿಂದ ಹತ್ತು ಸಾವಿರ ರುಪಾಯಿಗಳನ್ನು ಡ್ರಾ ಮಾಡಿ ದಿವಾಕರನಿಗೆ ಕೊಟ್ಟಳು. ''ಈ ಹಣವನ್ನು ಆ ಮನುಷ್ಯನಿಗೆ ಕೊಡಿ. ಆತನಿಗೆ ವಿಪರೀತ ಹಣದ ಅಗತ್ಯವಿದೆ ಅಂತ ಅನ್ನಿಸುತ್ತೆ. ಆ ಮಕ್ಕಳು ನಿಮ್ಮೊಂದಿಗೆ ಬರಲು ಒಪ್ಪದಿರಬಹುದು. ಆತನಿಗೇ ನಿಮ್ಮ ಮನೆಗೆ ಕರೆತಂದು ಬಿಡುವಂತೆ ಹೇಳಿಬಿಡಿ. ಗುಡ್‌ಲಕ್. ..''

''ಥ್ಯಾಂಕ್ಸ್ ಗಾಯತ್ರಿ. ನನ್ನ ಸ್ವಂತ ಅಕ್ಕನೇ ಇದ್ದಿದ್ದರೂ ಇಷ್ಟು ಸಹಾಯ ಮಾಡ್ತಾ ಇದ್ದಳೋ ಇಲ್ಲವೋ....'' ಅವನು ಭಾವುಕನಾಗಿದ್ದ.

''ಇದೆಲ್ಲಾ ಏನು ದಿವಾಕರ.. ನಮ್ಮವರುಗಳಿಂದ ದೂರವಿದ್ದಾಗ ನೀವುಗಳು ಎಷ್ಟೋ ಸಹಾಯ ಮಾಡಿದೀರಿ. ಅದರ ಮುಂದೆ ಇದೇನು? ನೀವು ಹೊರಡಿ. ಹಣದ ಆಸೆಗೆ ಆತ ಬೇರೆ ಯಾರಿಗಾದರೂ, ನಿಮಗಿಂತ ಮುಂಚೆ ಮಕ್ಕಳನ್ನು ಮಾರಿಯಾನು.... ಹಾಗೇ ಎಲ್ಲಾ ಮಾತುಕತೆಗಳನ್ನು ಕ್ಲಿಯರ್ ಆಗಿ ಮುಗಿಸಬೇಕು.''

''ಹಾಗೆ ಮಾಡಲಾರ. ನನಗೋಸ್ಕರ ಕಾಯ್ತಾ ಇರ್ತಾನೆ ಅಂತ ಅನ್ನಿಸುತ್ತೆ. ಅವನಿಗೆ ಹಣದ ಅಗತ್ಯವಿದೆ. ನಮಗೆ ಮಗುಬೇಕಾಗಿದೆ... ಆದರೂ ಯಾಕೋ ಎದೆ ಢವ ಢವ ಅಂತಿದೆ.''

''ಒಂದು ಒಳ್ಳೆಯ ಕೆಲಸಕ್ಕೆ ಹೊರಟಿದೀರಿ. ದೇವರಿದಾನೆ.'' ಗಾಯತ್ರಿ ಅವನಿಗೆ ಧೈರ್ಯ ಹೇಳಿ ಕಳುಹಿಸಿದಳು. ಆ ವ್ಯಕ್ತಿ ಇವನಿಗಾಗಿಯೇ ಕಾದು ನಿಂತಿದ್ದಂತೆ ತೋರಿತು.

''ಏನು ಡಿಸೈಡ್ ಮಾಡಿದ್ರಿ ?'' ಕಾತುರದಿಂದ ಕೇಳಿತು.

''ನಿಮ್ಮ ಮಕ್ಕಳನ್ನು ನಾನು ನೋಡಲೇ ಇಲ್ಲ, ಅವುಗಳೂ ನನ್ನನ್ನು ನೋಡಿಲ್ಲ, ನನ್ನ ಜೊತೆ ಬರದಿದ್ದರೇ...''

''ನಾನು ಈಗಲೇ ನನ್ನ ಮಕ್ಕಳ ಪರಿಚಯ ಮಾಡಿಸಿಕೊಡ್ತೀನಿ... ಜ್ಯೋತೀ .... ಜ್ಯೋತೀ... ಕಿರಣ್‌ನೂ ಕರೆದುಕೊಂಡು ಬಾ... ಅಂಕಲ್ ಬಂದಿದಾರೆ.''

ಮೂರು ವರ್ಷದ ಹುಡುಗಿ ಜ್ಯೋತಿ ಒಂದೇ ಒಂದು ಅವನೆದುರಿಗೆ ಬಂದು ನಿಂತಿತು. ಅವನು ಇವಳೇ ನನ್ನ ಮಗಳು ಜ್ಯೋತಿ ಎಂದು ಹೇಳಿ, ಅಂಕಲ್‌ಗೆ ಹಲೋ ಹೇಳು... ಎಂದು ಆಜ್ಞಾಪಿಸಿದ.

''ಹಲೋ ಅಂಕಲ್....'' ಬೆದರು ಕಣ್ಣುಗಳಿಂದ ಅವನನ್ನೇ ನೋಡಿತು. ಇವನಿಗೆ ಕಸಿವಿಸಿಯಾಯಿತು.

''ಕಿರಣ್ ಮಲಗಿದಾನೆ ಅಂತ ಕಾಣುತ್ತೆ. ಒಂದ್ನಿಮಿಷ ಈಗ ಎತ್ತಿಕೊಂಡು ಬರ್ತೀನಿ'' ಎನ್ನುತ್ತಾ ಅವನು ಒಳಗಿನ ಕೋಣೆಗೆ ಹೋದ.

''ಬಾಯಿಲ್ಲಿ...'' ಆ ಹುಡುಗಿಯನ್ನು ಮೃದುವಾಗಿ ಕರೆದ. ಆದರೆ ಆ ಹುಡುಗಿ ಹತ್ತಿರಕ್ಕೆ ಬರಲಿಲ್ಲ, ಓದ್ತಾ ಇದೀಯ ? ಮತ್ತೆ ಕೇಳಿದ.

ಹೂಂ ಹೂಂ ಎನ್ನುವಂತೆ ತಲೆ ಆಡಿಸಿತು. ಚಾಕಲೇಟುಗಳನ್ನೋ ಬಿಸ್ಕತ್ತುಗಳನ್ನೋ ತಂದಿದ್ದರೆ ಚೆನ್ನಾಗಿತ್ತೆನಿಸದೇ ಇರಲಿಲ್ಲ, ಆ ವ್ಯಕ್ತಿ ಒಳಗಿನಿಂದ ನಿದ್ದೆ ಮಾಡುತ್ತಿದ್ದ ಮಗುವನ್ನು

ಎತ್ತಿಕೊಂಡು ಬಂದು ತೋರಿಸಿದ. ಒಂದು ವರ್ಷದ ಕಿರಣ ಮುದ್ದಾಗಿದ್ದ. ಇವನಿಗೆ ಮೆಚ್ಚುಗೆಯಾದ.

''ಮಕ್ಕಳು ಮುದ್ದಾಗಿವೆ. '' ಮೆಚ್ಚುಗೆಯಿಂದ ನುಡಿದ.

''ಬೆಳೆಯುವ ಮಕ್ಕಳು, ತಾಯಿಯಿ ಆರೈಕೆ ಇಲ್ಲದೇ ಸ್ವಲ್ಪ ಡಲ್ ಆಗಿದಾರೆ. ಹೊತ್ತು ಹೊತ್ತಿಗೆ ಊಟ ನಿದ್ದೆ ಮಾಡಿದರೆ... ಸರಿಹೋಗ್ತಾರೆ. ...''

''ಹೋಗು ಜ್ಯೋತಿ ಆಡ್ಕೋ ಹೋಗು. ನಾನು ಕರೀತಿನಿ '' ಮಗಳನ್ನು ಹೊರಕ್ಕೆ ಕಳಿಸಿ, ಇವನತ್ತ ತಿರುಗಿದ.

''ಒಬ್ಬರ್ರೇ ಬಂದಿದೀರಿ. ಮನೆಯವರನ್ನು ಕರೆತರಲಿಲ್ವಾ ? ''

''ನನ್ನ ಹೆಂಡತಿ ಕೆಲಸಕ್ಕೆ ಹೋಗ್ತಾಳೆ. ನನ್ನ ತಾಯಿಗೆ ವಯಸ್ಸಾಗಿದೆ.''

''ನಿಮ್ಮ ಮನೇಲಿ ಇನ್ನು ಯಾರ್‍ಯಾರು ಇದೀರಿ ? ''

''ಮೇಲಿನ ಮನೆಯನ್ನು ಬಾಡಿಗೆಗೆ ಕೊಟದೀವಿ. ಅಲ್ಲಿ ಒಂದು ಸಂಸಾರ ಇದೆ. ಅವರಿಗೆ ನಿಮ್ಮ ಮಗಳ ವಯಸ್ಸಿನ ಒಬ್ಬ ಮಗ ಇದಾನೆ. ನನ್ನ ಜೊತೆ ನಿಮ್ಮಮಕ್ಕಳು ಬರಲು ಹೆದರಬಹುದು. ನೀವೂ ಬನ್ನಿ''

''ನಾನೇ ಕರೆತಂದು ಬಿಡ್ತೀನಿ. ಅದಕ್ಕೆ ಮೊದಲು ನನ್ನ ಹೆಂಡತಿಗೆ ಕಡೆಯಬಾರಿ ಅವಳ ಮಕ್ಕಳನ್ನು ತೋರಿಸಬೇಕು.''

''ನಿಮ್ಮ ಪತ್ನಿಯ ಆರೋಗ್ಯ ಈಗ ಹೇಗಿದೆ ?''

''ಹಾಗೇ ಇದೆ. ಕಿಡ್ನಿ ಫಂಕ್ಷನ್ ಸರಿಯಾಗಿ ಮಾಡುತ್ತಿಲ್ಲ ಅಂತ ಹೇಳಿದಾರೆ. ಔಷಧಕ್ಕೇ ಸಿಕ್ಕಾಬಟ್ಟೆ ಖರ್ಚಾಗುತ್ತಿದೆ.... ನನಗೆ ಅವಳ ಚಿಂತೆಯಿಂದ ಈ ಮಕ್ಕಳ ಚಿಂತೆಯಿಂದ ಈ ಜೀವನವೇ ಸಾಕು ಅನ್ನಿಸಿಬಿಟ್ಟಿದೆ. ''

''ಇದು ತಗೊಳ್ಳಿ. ಹತ್ತು ಸಾವಿರ ರುಪಾಯಿ ಇದೆ... ಇಷ್ಟು ಕಡಿಮೆ ಅಂತ ಅನ್ನಿಸಿದರೆ ಇನ್ನು ಸ್ವಲ್ಪ ಕೊಡ್ತೀನಿ.'''' ನನ್ನ ಮಕ್ಕಳನ್ನು ನಾನು ಮಾರುವುದಿಲ್ಲ. ನನ್ನ ಮಕ್ಕಳನ್ನು ಪ್ರೀತಿಯಿಂದ ನೋಡಿಕೊಳ್ಳುವ ತಂದೆ ತಾಯಿ ಸಿಕ್ಕಿದರೆ ಸಾಕು. ಇವತ್ತೇ ನಾನು ನನ್ನ ಹೆಂಡತಿಗೆ ಈ ವಿಷಯ ಹೇಳ್ತೀನಿ. ಅವಳಿಗೂ ನೆಮ್ಮದಿ ಉಂಟಾಗುತ್ತದೆ. ಆದರೆ ಈಗ ನನಗೆ ಹಣದ ಅಗತ್ಯವಿದೆ. ಇದನ್ನು ಸಾಲ ಅಂತ ತೊಗೊಳ್ತೀನಿ. ನಿಧಾನವಾಗಿ ತೀರಿಸ್ತೀನಿ....''

''ನಿಮ್ಮಿಷ್ಟ.... ಹಾಗಾದ್ರೆ ನಾನು ಹೊರಡ್ತೀನಿ.''

''ಸಾಯಂಕಾಲದ ಹೊತ್ತಿಗೆ, ಮಕ್ಕಳನ್ನು ಕರೆತಂದು ಬಿಡ್ತೀನಿ. ''

''ಹಾಗೇ ನಿಮ್ಮ ಮಕ್ಕಳಿಗೆ ಏನು ಇಷ್ಟ ಅಂದರೆ ಅಡಿಗೆ, ತಿಂಡಿ ಇತ್ಯಾದಿ. ಇದನ್ನೆಲ್ಲ ತಿಳಿಸಿಬಿಡಿ. ಹಾಗೇ ಬರ್ತ್ ಸರ್ಟಿಫಿಕೇಟ್ಸ್, ಮೆಡಿಕಲ್ ಸರ್ಟಿಫಿಕೇಟ್ಸ್ ಏನೇನಿದೆಯೋ ಎಲ್ಲಾ ಕೊಡಿ.''

''ಖಂಡಿತಾ ಎಲ್ಲಾ ರೆಡಿಯಾಗಿಟ್ಟಿದೀನಿ. ಮಕ್ಕಳ ಬಟ್ಟೆ ಪುಸ್ತಕಗಳು, ಆಟದ ಸಾಮಾನುಗಳನ್ನೆಲ್ಲಾ ಪ್ಯಾಕ್ ಮಾಡಿಟ್ಟಿದೀನಿ. ಇದು ನನ್ನ ಮಗಳ ಟೆಡ್ಡೀಬೇರ್. ಇದನ್ನು ಪಕ್ಕದಲ್ಲಿಟ್ಟುಕೊಂಡೇ ಮಲಗುವ ಅಭ್ಯಾಸ. ಇದು ನನ್ನ ಮಗನ ಕಾರು. ಇದನ್ನು ಕೈಲಿ ಹಿಡಿದೇ

ನಿದ್ದೆ ಮಾಡ್ತಾನೆ.'' ಹೇಳ್ತಾ ಹೇಳ್ತಾ ಅವನ ತುಟಿಗಳು ಅದುರ ತೊಡಗಿದವು. ಗಂಟಲು ಕಟ್ಟಿದಂತಾಯಿತು. ಮಗುವನ್ನು ಎದೆಗೆ ಒತ್ತಿಕೊಂಡು, ಶಬ್ದವಾಗದಂತೆ ಅತ್ತ. ದಿವಾಕರನಿಗೆ ಬೇಸರವಾಗಿತ್ತು. ಆತನಿಗೆ ಏನು ಸಮಾಧಾನ ಹೇಳಬೇಕೆಂದು ಗೊತ್ತಾಗಲಿಲ್ಲ.

ರಾತ್ರಿ ಎಂಟು ಗಂಟೆಯ ಹೊತ್ತಿಗೆ ಆ ವ್ಯಕ್ತಿ ಲಗೇಜುಗಳೊಂದಿಗೆ ಮಕ್ಕಳೊಂದಿಗೆ ಬಂದ. ದಿವಾಕರನ ವಶಕ್ಕೆ ಮಕ್ಕಳನ್ನು ವಹಿಸಿ, ಹಾಗೇ ಹಿಂದಕ್ಕೆ ಹೊರಟ. ... ಜ್ಯೋತಿ ಅಪ್ಪನ ಕೈ ಹಿಡಿಯಿತು. ಕಿರಣ್ ಅಳತೊಡಗಿದ.

''ಜ್ಯೋತಿ ಪುಟ್ಟೀ ನೀನು ಜಾಣೆ ಅಲ್ವಾ! ಇವತ್ತು ರಾತ್ರಿ ನೀವಿಬ್ಬರೂ ಇಲ್ಲಿ ಅಂಕಲ್ ಮನೇಲಿರಿ. ನಾನು ನಾಳೆ ಬೆಳಿಗ್ಗೆ ಮತ್ತೆ ಬರ್ತೀನಿ.''

''ಅಪ್ಪಾ ನಾನೂ ನಿನ್ನ ಜೊತೆ ಬರ್ತೀನಿ.''

''ಇಲ್ಲಿ ಅಜ್ಜಿ, ತಾತ, ಆಂಟಿ, ಮಾಮ ಎಲ್ಲಾ ಇದಾರೆ. ನಿನ್ನ ಮಮ್ಮಿಗೆ ಹುಶಾರಿಲ್ಲ ಅಲ್ವಾ ? ನಾನು ಆಸ್ಪತ್ರೆಗೆ ಹೋಗಬೇಕು... ಸುಮ್ಮನೆ ನಾನು ಹೇಳಿದ ಹಾಗೆ ಕೇಳು... ''

''ಪೂರ್ಣಿಮಾ, ಸ್ವಲ್ಪ ಗಾಯತ್ರೀನ ಕರೀತೀಯಾ ?''

''ಗಾಯತ್ರೀ.... ದಿವಾಕರ್ ಕರೀತಾ ಇದಾರೆ ಬರ್ತೀರಾ ?'' ಕೆಳಗಿನಿಂದ ಪೂರ್ಣಿಮಾ ಕರೆದ ಧ್ವನಿಕೇಳಿಸಿತ್ತು. ''ನಾನು ಬರ್ತೀನಿ '' ಎಂದು ಹೇಳಿ ಹಿಂತಿರುಗಿ ನೋಡದೇ ಆ ವ್ಯಕ್ತಿ ರಸ್ತೆಯಲ್ಲಿ ಮರೆಯಾದ. ಗಾಯತ್ರಿ ಕೆಳಗೆ ಇಳಿದು ಬಂದಿದ್ದಳು. ಆ ಮಕ್ಕಳನ್ನು ನೋಡಿಯೇ ಅವಳಿಗೆ ಎಲ್ಲಾ ಅರ್ಥವಾಗಿತ್ತು. ದಿವಾಕರನ ಕೈನಿಂದ ಕಿರಣ್‌ನನ್ನು ಎತ್ತಿಕೊಂಡಳು. ಜ್ಯೋತಿಯ ಕೈ ಹಿಡಿದಳು.

''ಅವರೆಲ್ಲಿ ? ಹೊರಟು ಹೋದ್ರಾ ? ''ಅಳುತ್ತಿದ್ದ ಮಕ್ಕಳನ್ನು ಸಮಾಧಾನ ಮಾಡುತ್ತಾ ಒಳಗೆ ಕರೆದುಕೊಂಡು ಹೋದಳು. ತಾಯಿಯ ಕೈಯಲ್ಲಿದ್ದ ಕಿರಣ್‌ನನ್ನು ಕಂಡು ಸ್ಕಂದ ರಗಳೆ ಮಾಡತೊಡಗಿದ. ಜ್ಯೋತಿ ಪೆಚ್ಚಾಗಿ ನಿಂತಿದ್ದಳು.

''ಕಂದೂ ನೋಡಿಲ್ಲಿ, ನಿನ್ನ ಹೊಸ ಫ್ರೆಂಡ್ ಜ್ಯೋತಿ....''

''ಅವನನ್ನು ಇಳಿಸು.... ನನ್ನನ್ನು ಎತ್ಕೋ....'' ಅವನು ಮುದ್ದಾಗಿ ಹೇಳಿದಾಗ, ದಿವಾಕರ ಬಂದು ಕಿರಣನನ್ನು ಎತ್ತಿಕೊಂಡ. ಅವನು ಅಳತೊಡಗಿದಾಗ, ಪೂರ್ಣಿಮಾ ರೂಮಿನಿಂದ ಹೊರ ಬಂದಳು. ಸ್ಕಂದ ಓಡಿ ಬಂದು ಪೂರ್ಣಿಮಾಳ ಬಳಿ ನಿಂತ. ''ಆಂಟೀ ನನ್ನನ್ನು ಎತ್ಕೋ.... ''ಎಂದ.

''ಬೇಡ ಪೂರ್ಣಿಮಾ, ಅವನನ್ನು ಎತ್ಕೋ ಬೇಡ. ಮೂರು ವರ್ಷದ ಕೋಣ ಆಗಿದಾನೆ.. ಅವನನ್ನು ಎತ್ಕೊಳ್ಳೋಕೆ ಆಗುತ್ತಾ? ''ಪೂರ್ಣಿಮಾ ಸ್ಕಂದನ ಕೆನ್ನೆ ಸವರಿದಳು.

''ನೋಡು, ಇವನಿಗೆ ಕೋಪ, ನಾನು ಕಿರಣನನ್ನು ಎತ್ತಿಕೊಂಡು ಬಿಟ್ಟೆ ಅಂತ. ಅದಕ್ಕೇ ನಿನ್ನ ಬಳಿಗೆ ಓಡಿ ಬಂದಿದಾನೆ. ''

''ಅಪ್ಪಾ... ಅಪ್ಪಾ...''ಜ್ಯೋತಿ ಅಳತೊಡಗಿದಾಗ, ಕಿರಣನೂ ಕಿರುಚಿ ಕಿರುಚಿ ಅಳತೊಡಗಿದ. ಅವರಿಬ್ಬರ ಅಳುವನ್ನು ಕೇಳಿ, ಕಾರಣವಿಲ್ಲದೇ ಸ್ಕಂದನೂ ಅಳತೊಡಗಿದ. ಭಾಸ್ಕರ ಓಡಿಬಂದು ಅವನನ್ನು ಎತ್ತಿಕೊಂಡ...

''ಹೇಗಪ್ಪಾ ಈ ಮಕ್ಕಳನ್ನು ಸುಮ್ಮನಾಗಿಸೋದು ? ಭಾಸ್ಕರ ತಲೆ ಕೆರೆದುಕೊಂಡ. ಆಂಟಿ ಬಂದು ಸ್ಕಂದನನ್ನು ಎತ್ತಿಕೊಂಡಳು.''

''ಇವನು ಮನೆಯವನು. ನನಗೆ ಒಗ್ಗಿ ಹೋಗಿದಾನೆ. ಅವರಿಬ್ಬರೂ ಹೊಸಬರು. ಅವರಿಬ್ಬನ್ನು ನೀನೇ ಸುಧಾರಿಸು... ಬಾಮ್ಮಾ ಕಂದೂ....'' ಎಂದು ಮುದ್ದಿಸುತ್ತಾ ಅಡಿಗೆ ಮನೆಗೆ ಕರೆದುಕೊಂಡು ಹೋದಳು.

''ನಿಮ್ಮಬ್ಬರ ಊಟ ಆಗಿದೆಯಾ ಜ್ಯೋತಿ...''

''ಊಟ ಆಗಿದೆ..... ಕುಡಿಯೋಕೆ ಹಾಲು ಬೇಕು.''

''ಬಟ್ಟಲಲ್ಲಿ ಕುಡಿತೀರೋ, ಬಾಟಲಲ್ಲಿ ಕುಡಿತೀರೋ ?''

''ನಾನು ಲೋಟದಲ್ಲಿ ಕುಡಿತೀನಿ. ನನ್ನ ತಮ್ಮ ಬಾಟ್ಲಲ್ಲಿ ಕುಡೀತಾನೆ. ಆ ಬ್ಯಾಗ್‌ನಲ್ಲಿ ಫೀಡಿಂಗ್ ಬಾಟಲ್ ಇದೆ.''

''ನೀನು ಇಲ್ಲಿ ಅಂಕಲ್ ಜೊತೇಲೇ ಇರು. ನಾನು ನಿಮ್ಮಿಬ್ಬರಿಗೂ ಹಾಲು ಬಿಸಿ ಮಾಡಿ ತಂದುಕೊಡ್ತೀನಿ.... '' ಎನ್ನುತ್ತಾ ಅವಳೂ ಒಳಗೆ ಬಂದಳು. ಅಲ್ಲಿಯೇ ಇದ್ದ ಪೂರ್ಣಿಮಾ ಭಾಸ್ಕರನ್ನ ಕೇಳಿದಳು.

''ಇವರಿಬ್ಬರನ್ನು ನೋಡಿಕೊಳ್ಳೋಕೆ ಕಷ್ಟವಾಗುತ್ತೆ ಅಲ್ವಾ ? ಈ ಮಕ್ಕಳನ್ನು ನೋಡಿ, ಸ್ಕಂದಂಗೆ ಕಾಂಪ್ಲೆಕ್ಸ್ ಬೆಳೆಯುತ್ತೇ ಅಷ್ಟೇ.''

''ಒಂದು ನಾಲ್ಕು ದಿನ ಅಷ್ಟೇ. ಇವರ ಅಪ್ಪ ಬಂದು ಕರೆದುಕೊಂಡು ಹೋಗ್ತಾರಂತಲ್ಲ. ಹೇಗೋ ಅಡ್ಜಸ್ಟ್ ಮಾಡಿಕೊಂಡರಾಯ್ತು.'' ಪೂರ್ಣಿಮಾ ತನಗೆ ಏನೂ ಸಂಬಂಧಿಸಿದುದೇ ಅಲ್ಲವೆಂಬಂತೆ ನಿರ್ವಿಕಾರವಾಗಿ ತನ್ನ ಪಾಡಿಗೆ ತಾನು ಸುಮ್ಮನಾದಳು. ದಿವಾಕರ ಅವಳನ್ನೇ ಗಮನಿಸಿದ್ದ. ನಿರಾಸೆಯಾಗಿತ್ತು.

ಬೆಳಗಾಗುತ್ತಲೇ ಮಕ್ಕಳೆರಡೂ ವಾಲಗ ಊದಲು ಪ್ರಾರಂಭಿಸಿದವು. ಗಾಯತ್ರಿಯೇ ಸಮಾಧಾನ ಮಾಡಿದಳು. ಸ್ಕಂದ ಆಂಟಿ ಜೊತೆಯಲ್ಲೇ ಮಲಗಿದ್ದುದ ರಿಂದ, ಗಾಯತ್ರಿ ತನ್ನ ಬಳಿಯೇ, ಜ್ಯೋತಿ ಹಾಗೂ ಕಿರಣನನ್ನು ಮಲಗಿಸಿಕೊಂಡಿದ್ದಳು ಮಲಗುವ ಮೊದಲು ಸ್ವಲ್ಪ ಅತ್ತು ಕರೆದು ರಗಳೆ ಮಾಡಿದ್ದರೂ, ಬೇಗ ನಿದ್ದೆ ಆವರಿಸಿತ್ತು.

''ಹೊಸ ಜಾಗ, ಹೊಸಜನ, ಮಕ್ಕಳಿಗೆ ಗಾಬರಿಯಾಗುವುದು ಸಹಜ... ನಾವು ಸಹನೆಯನ್ನು ಕಳೆದುಕೊಳ್ಳಬಾರದು.''ಇದು ಭಾಸ್ಕರನ ಮತ. ಗಾಯತ್ರಿ ಆಫೀಸಿಗೆ ರಜ ಹಾಕಿದ್ದಳು. ದಿವಾಕರ ಅವಳಿಗೆ ಸಹಾಯಕನಾಗಿದ್ದ. ಪೂರ್ಣಿಮಾ ತನ್ನ ಪಾಡಿಗೆ ತಾನು ಬ್ಯಾಂಕಿಗೆ ಹೊರಟು ಹೋದಳು.

ಎರಡು ದಿನಗಳ ನಂತರ, ಆ ಮಕ್ಕಳ ತಂದೆ, ಬೆಳಿಗ್ಗೆ ಹತ್ತು ಗಂಟೆಯ ಸುಮಾರಿಗೆ ಇವರ ಮನೆಗೆ ಬಂದ. ಗಾಯತ್ರಿ ಎದುರಾದಳು. ಜ್ಯೋತಿ ಓಡಿಬಂದು ಅಪ್ಪನನ್ನು ತಬ್ಬಿಕೊಂಡಳು.

''ಹೇಗಿದೀಯ ಪುಟ್ಟೀ ? ಕಿರಣ ಹೇಗಿದಾನೆ ?''

''ಅಂಕಲ್ ಎತ್ತಿಕೊಂಡು, ಅಂಗಡಿಗೆ ಕರೆದುಕೊಂಡು ಹೋಗಿದಾರೆ.''

ಗಾಯತ್ರಿ ತನ್ನ ಪರಿಚಯವನ್ನು ಮಾಡಿಕೊಂಡಳು. ''ನಾನೂ ಈ ಮನೆಯ ಸದಸ್ಯೆ. ಏನು ವಿಷಯ ನನಗೇ ಹೇಳಿ ಪರವಾಗಿಲ್ಲ. ''

''ದತ್ತು ತೆಗೆದುಕೊಳ್ಳುವುದರ ಬಗ್ಗೆ ಏನು ತೀರ್ಮಾನಿಸಿದಾರೆ ಅಂತ...''

''ಕಿರಣನನ್ನು ದತ್ತು ತೆಗೆದುಕೊಳ್ಳುತ್ತಾರೆ... ನಿಮ್ಮ ಮಗಳಿಗೆ ಏನು ವ್ಯವಸ್ಥೆ ಮಾಡ್ತೀರಿ?''

''ಅದನ್ನೇ ಹೇಳೋಣ ಅಂತ ಬಂದೆ. ಅಕ್ಕ ತಮ್ಮನನ್ನು ಅಗಲಿಸುವುದು ನನಗೆ ಇಷ್ಟವಿಲ್ಲ. ಇವಳನ್ನು ನೀವೇ ಸಾಕಿಕೊಳ್ಳಬಹುದು.''

''ಅದ್ಹೇಗಾಗುತ್ತೆ? ನಮಗೆ ಬೇಕಾಗಿರುವುದು ಒಂದು ಮಗು. ಎರಡೆರಡು ಮಕ್ಕಳ ಜವಾಬ್ದಾರಿ ಈ ಕಾಲದಲ್ಲಿ ಕಷ್ಟ. ನೀವು ಒಂದು ಮಗುವನ್ನು ಇಟ್ಟುಕೊಳ್ಳಿ. ''

''ನನಗೆ ನನ್ನ ಮಗಳದೇ ಚಿಂತೆ. ನೀವುಗಳಾದರೆ ಚೆನ್ನಾಗಿ ಬೆಳೆಸ್ತೀರಿ, ಓದಿಸ್ತೀರಿ... ಒಳ್ಳೆಯ ಕಡೆಗೆ ಕೊಟ್ಟು ಮದುವೆ ಮಾಡ್ತೀರಿ.. ಇವನು ಗಂಡು ಹುಡುಗ, ಹೇಗಾದ್ರೂ ಬೆಳೆದುಕೊಳ್ತಾನೆ.''

''ನಮಗೆ ಚಿಕ್ಕ ಮಗು ಮಾತ್ರ ಬೇಕು. ದೊಡ್ಡ ಮಕ್ಕಳಾದರೆ ಹೊಂದಿ ಕೊಳ್ಳುವುದು ಕಷ್ಟವಾಗುತ್ತೆ...''

''ಎರಡು ದಿನಗಳಿಂದ ನೋಡಿಕೊಂಡ್ರಲ್ಲ ಏನನ್ನಿಸ್ತು?''

''ಪರವಾಗಿಲ್ಲ ಹೊಂದಿಕೊಳ್ಳಬಹುದೇನೋ...ಇವಳಂತೂ ನಿಮ್ಮ ದಾರೀನೇ ನೋಡ್ತಿದ್ಲು. ಅವನು ಚಿಕ್ಕೋನು ಅವನಿಗೆ ಏನೂ ಅರ್ಥವಾಗುಲ್ಲ.... ''

''ಹಾಗಾದರೆ ನಿಮ್ಮ ಅಭಿಪ್ರಾಯವೇನು ?''

''ನಾವುಗಳು ಆಲೋಚಿಸಿ ನಿಮಗೆ ತಿಳಿಸ್ತೀವಿ. ಇನ್ನೊಂದೆರಡು ದಿನಗಳ ಸಮಯವನ್ನು ಕೊಡಿ. ಈಗ ಮಕ್ಕಳನ್ನು ಕರೆದುಕೊಂಡು ಹೋಗ್ತೀರಾ ?''

''ಎಲ್ಲಿಗೆ ಅಂತ ಕರೆದುಕೊಂಡು ಹೋಗಲಿ ? ನಾನಿದ್ದ ಮನೆ ಬಾಡಿಗೆಯದು. ಎರಡು ತಿಂಗಳುಗಳಿಂದ ಬಾಡಿಗೆ ಕೊಟ್ಟಿರಲಿಲ್ಲ. ಮನೆ ಬಿಡಬೇಕಾಗಿದೆ. ನನ್ನ ಹೆಂಡತಿ ಆಸ್ಪತ್ರೆಯಲ್ಲಿ ಮಲಗಿದಾಳೆ. ನನಗೆ ದಿಕ್ಕೇ ತೋಚದ ಹಾಗಾಗಿದೆ.''

''ಸರಿ ಹಾಗಾದರೆ ಇನ್ನೆರಡು ದಿನಗಳನ್ನು ಬಿಟ್ಟು ಬನ್ನಿ.'' ಗಾಯತ್ರಿಗೆ ಕೈ ಮುಗಿದು ಥ್ಯಾಂಕ್ಸ್ ಹೇಳಿ ಅಲ್ಲಿಂದ ಹೊರಟುಹೋದ.

ಇದಾದ ನಂತರ , ಒಂದು ವಾರವಾದರೂ ಅವನು ಮತ್ತೆ ಬಂದಿರಲಿಲ್ಲ. ಅವರು ವಾಸವಾಗಿದ್ದ ಮನೆಯ ಕಡೆ ಹೋಗಿದ್ದರು. ಮನೆಗೆ ಬೀಗ ಹಾಕಿತ್ತು. ಅವನ ಹೆಂಡತಿ ಯಾವ ಆಸ್ಪತ್ರೆಯಲ್ಲಿದ್ದಳು, ಅವಳ ಕಂಡಿಷನ್ ಹೇಗಿದೆ ಅಂತ ಯಾರಿಗೂ ತಿಳಿಯದು. ಗಾಯತ್ರಿ ದಿವಾಕರನಿಗೆ ಹೊಸ ಆತಂಕ ಪ್ರಾಂಭವಾಗಿತ್ತು. ಯಾರೋ ಏನೋ ಅಪರಿಚಿತ ಮನುಷ್ಯ, ನಿರಾಂತಕವಾಗಿ ಮಕ್ಕಳನ್ನು ಇಲ್ಲಿ ಬಿಟ್ಟು ಎಲ್ಲಿ ಹೋದನೋ ಈಗ ಅವನನ್ನು ಹುಡುಕುವುದು ಹೇಗೆ ?

ಹದಿನೈದು ತಿನಗಳ ನಂತರ ಅವನ ಹೆಸರಿಗೆ ಒಂದು ಕೊರಿಯರ್ ಪತ್ರ ಬಂದು.

ಆ ವ್ಯಕ್ತಿ ದಿವಾಕರನಿಗೆ ಪತ್ರ ಬರೆದಿದ್ದ. ಎರಡು ವಾರಗಳ ಹಿಂದೆ ತನ್ನ ಪತ್ನಿ ತೀರಿಹೋದಳೆಂದೂ, ಅವಳ ಅಂತ್ಯಕ್ರಿಯೆಗಳನ್ನು ನೆರವೇರಿಸಲು, ತಾನು ತೀರ್ಥಕ್ಷೇತ್ರಕ್ಕೆ ಬಂದಿರುವುದಾಗಿಯೂ ತಿಳಿಸಿದ್ದ. ಆದರೆ ಯಾವ ಊರು ಎಂದು ತಿಳಿಸಿರಲಿಲ್ಲ. ಕವರಿನ ಮೇಲೂ ವಿಳಾಸವಿರಲಿಲ್ಲ. ಗಾಯತ್ರಿಗೆ ಆ ಪತ್ರವನ್ನು ತೋರಿಸಿದ. ಅವಳಿಗೆ ಏನೋ ಸಂಕಟವಾಗಿತ್ತು. ಜ್ಯೋತಿಯನ್ನು ತಬ್ಬಿಕೊಂಡು ಅತ್ತುಬಿಟ್ಟಳು. 'ಪಾಪ, ತಬ್ಬಲಿಯಾಗಿ ಹೋಯ್ತು...' ಇನ್ನು ಈ ಹುಡುಗಿಯ ಗತಿ ಏನು ?

''ಕೆಲವು ದಿನಗಳ ನಂತರ ಈ ಹುಡುಗರನ್ನು ಕರೆದುಕೊಂಡು ಹೋಗಲು ಬರಬಹುದು. ಆಗ ಸಾಫ್ ಸಾಫ್ ಹೇಳಿಬಿಡೋಣ. ನಮಗೆ ಕಿರಣ ಒಬ್ಬ ಸಾಕು...ಎರಡೆರಡು ಮಕ್ಕಳನ್ನು ಸಾಕುವ ಸ್ಥಿತಿಯಲ್ಲಿ ಇದೀವಾ ನಾವು ? ''

''ಆತ ಹೇಳೋ ಮಾತು ನಿಜ... ಹುಡುಗಿಯರು ಬೇಗ ಬೇಗ ಬೆಳೆದು ಬಿಡ್ತಾರೆ. ತಾಯಿಯಿಲ್ಲದಿದ್ದರೆ ಹೆಣ್ಣುಮ್ಮಕಳಿಗೆ ತುಂಬಾ ಕಷ್ಟವಾಗುತ್ತದೆ. ''

''ಆತ ಇನ್ನೊಂದು ಮದುವೆಯಾಗಲಿ'' ಗಾಯತ್ರಿ ಕೆಟ್ಟನಗೆ ನಕ್ಕಳು.

''ಚೆನ್ನಾಗಿದೆ ನಿಮ್ಮ ತರ್ಕ. ಆತನಿಗೆ ಸಂಪಾದನೆ ಇಲ್ಲ. ಸಾಲಗಾರನಾಗಿರಲೂ ಬಹುದು. ಎರಡೆರಡು ಮಕ್ಕಳಿರುವವನನ್ನು ಮತ್ತೆ ಯಾರು ಮದುವೆಯಾಗ್ತಾರೆ ?''

''ಹಾಗಾದ್ರೆ ಈ ಮಕ್ಕಳಿಗೆ ಗತಿ ? ಎಷ್ಟು ದಿನಾಂತ ನಮ್ಮ ಮನೆಯಲ್ಲಿ ಇಟ್ಟುಕೊಳ್ಳೋಕೆ ಆಗುತ್ತೆ. ಅಮ್ಮ ಏನಂತಾಳೋ...''

''ಪೂರ್ಣಿಮಾಳ ಹತ್ತಿರ ಮಾತನಾಡಿದ್ರಾ ದಿವಾಕರ್ ''

''ಇಲ್ಲ ಗಾಯತ್ರಿ. ಅವಳು ಮಕ್ಕಳ ಬಗ್ಗೆ ಯಾವ ಆಸಕ್ತೀನೂ ತೋರಿಸ್ತಿಲ್ಲ. ನಾನು ಹೇಗೇ ಈ ಮಾತನ್ನು ಎತ್ತಲಿ ? ಒಂದು ಮಗುವನ್ನು ನೀವು ಸಾಕಿಕೊಳ್ಳಿ. ಇನ್ನೊಂದನ್ನು ನಾವು ಸಾಕಿ ಕೊಳ್ಳುತ್ತೇವೆ. ನಾನು ಅವಳನ್ನು ಒಪ್ಪಿಸ್ತೇನೆ.''

''ಅವಳಿಗೆ ಯಾವ ಆಸಕ್ತಿಯೂ ಇಲ್ಲದಿದ್ದರೆ ನೀವು ಹೇಗೆ ಒಪ್ಪಿಸ್ತೀರಿ ? ''

''ನೀವೇ ಅವಳೊಂದಿಗೆ ಮಾತನಾಡಿ... ''ಗಾಯತ್ರಿಗೇ ಒಪ್ಪಿಸಿದ.

ರಾತ್ರಿ ಎಲ್ಲರ ಊಟ ಮುಗಿಯಿತು. ಮಕ್ಕಳಿಗೂ ಊಟ ಮಾಡಿಸಿಯಾಗಿತ್ತು. ಗಾಯತ್ರಿ ಪೂರ್ಣಿಮಾಳನ್ನು ಮಹಡಿಯ ಮೇಲಿನ ತನ್ನ ರೂಮಿಗೆ ಕರೆದೊಯ್ದಳು. ನಿಧಾನವಾಗಿ ಮಕ್ಕಳ ವಿಷಯವನ್ನು ಪ್ರಾರಂಭಿಸಿದಳು.

''ತಾಯಿಯನ್ನು ಕಳೆದುಕೊಂಡು ತಬ್ಬಲಿಗಳಾಗಿವೆ. ತಂದೆ ನೋಡಿದರೆ ಪರದೇಶಿಯಂತೆ, ಅಲ್ಲಿ ಇಲ್ಲಿ ತಿರುಗಾಡಿಕೊಂಡಿದಾನೆ. ಈ ಮಕ್ಕಳನ್ನು ಯಾವುದಾದರೂ ಅನಾಥಾಶ್ರಮಕ್ಕೆ ಸೇರಿಸುತ್ತಾನಂತೆ. ''

''ಯಾಕೆ ಬಳಗದವರು ಯಾರೂ ಇಲ್ಲವೇ ? ''

''ಬಳಗದವರು ಎಲ್ಲಾ ಚೆನ್ನಾಗಿದ್ದಾಗ ಮಾತ್ರ. ಸಮಯಕ್ಕೆ ಬೇಕಾದಾಗ ಜಾರಿಕೊಳ್ತಾರೆ. ನಾನೊಂದು ಮಾತು ಹೇಳಿದರೆ, ನೀವು ಬೇಸರಿಸುವುದಿಲ್ಲ ತಾನೇ ...''

''ಇಲ್ಲ ಹೇಳಿ.''

''ಕಿರಣನನ್ನು ನೀವೇಕೆ ದತ್ತು ತೆಗೆದುಕೊಂಡು ಸಾಕಿ ಬೆಳೆಸಬಾರದು ?''

''ಯಾರೋ ಏನೋ ಏನೂ ಬೇಡ ಅನ್ನಿಸುತ್ತೆ ಗಾಯತ್ರಿ.''

''ನನಗೆ ಗೊತ್ತು, ನಿಮಗೆ ನಿರಾಸೆಯಾಗಿದೆ. ನಿಮ್ಮ ನಿರಾಸೆಗೆ ನಾನೂ ಅಪರೋಕ್ಷವಾಗಿ ಕಾರಣಳು.''

''ಬಿಡಿ ಗಾಯತ್ರಿ, ನಮ್ಮ ಗ್ರಹಚಾರಕ್ಕೆ ನೀವೇನು ಕಾರಣವಾಗ್ತೀರಿ ?''

''ನಾನು ಸಲಹೆ ಕೊಟ್ಟಿದ್ದೇ ತಪ್ಪಾಯ್ತೇನೋ ಅಂತ ಅನ್ನಿಸ್ತಿದೆ. ಇಲ್ಲದಿದ್ದರೆ ನಿಮಗೂ ಇಷ್ಟು ಹೊತ್ತಿಗೆ ಎರಡು ಎರಡೂವರೆ ವರ್ಷದ ಮಗು ಇರುತ್ತಿತ್ತು. ಕೃತಕವಾದ ಪ್ರಯೋಗ ಬೇಡ ಅಂದು ಬಿಟ್ರಿ. ಇಲ್ಲದಿದ್ದರೆ ಪ್ರನಾಳಶಿಶುವಿನ ಬಗ್ಗೆ ಪ್ರಯತ್ನ ಪಡಬಹುದಾಗಿತ್ತು.''

''ಅದಕ್ಕೆಲ್ಲ ಸಿಕ್ಕಾಬಟ್ಟೆ ಹಣ ಖರ್ಚಾಗುತ್ತದಂತೆ. ಅಲ್ಲದೆ ಅದು ಸಕ್ಸಸ್ ಆಗುತ್ತೆ ಅಂತ ಏನು ಗ್ಯಾರಂಟಿ ? ಅದಕ್ಕೆ ಏನೂ ಬೇಡ ಅಂತ ಸುಮ್ಮನಾಗಿ ಬಿಟ್ಟೆ...''

''ಹಾಗಾದರೆ ಜೀವಮಾನವೆಲ್ಲಾ ಹೀಗೇ ಇದ್ದು ಬಿಡ್ತೀರ ?''

''ಬೇರೆ ದಾರಿ ಏನಿದೆ ?''

''ಅದಕ್ಕೇ ಹೇಳಿದ್ದು ಕಿರಣನನ್ನು ನೋಡಿದೀರಲ್ಲ ಎಷ್ಟು ಮುದ್ದಾಗಿದಾನೆ. ನಿಮ್ಮ ಹಾಗೇ ಇದಾನೆ. ಯಾರಿಗೂ ನಿಮ್ಮ ಸ್ವಂತ ಮಗುವಲ್ಲ ಅನ್ನೋ ಅನುಮಾನಾನೇ ಬರುಲ್ಲ.''

''ನಾನು ಈಗಲೇ ಏನೂ ಡಿಸೈಡ್ ಮಾಡಿಲ್ಲ.... ನನಗೆ ಸಮಯಬೇಕು.''

''ಓ.ಕೆ. ಸಮಯ ತಗೋಳ್ಳಿ. ಆದರೆ ಆ ಮಕ್ಕಳು ಅನಾಥಾಸ್ರಮ ಸೇರಿ ಬಿಟ್ಟರೆ, ಮತ್ತೆ ಕರೆತರುವುದು ಕಷ್ಟವಾಗುತ್ತೆ. ಏನೇನೋ ಫಾರ್ಮಾಲಿಟೀಸ್ ಇರುತ್ತದೆ. '' ಎಂದು ಹೇಳಿ ಪೂರ್ಣಿಮಾಳ ಬೆನ್ನು ತಟ್ಟಿದಳು.

ಸ್ಕಂದ ಬಹಳ ತುಂಟನಾಗಿದ್ದ. ಜ್ಯೋತಿಯೊಡನೆ ಎಲ್ಲಾ ವಿಷಯಕ್ಕೂ ಜಗಳವಾಡುತ್ತಿದ್ದ. ಕಿರಣ ತೊದಲು ಮಾತುಗಳನ್ನಾಡುತ್ತಿದ್ದ. ಸ್ಕಂದ ಗಾಯತ್ರಿಯನ್ನು ಅಮ್ಮಾ ಅಂತ ಕರೆದಾಗ, ಅವನೂ ಅಮ್ಮಮ್ಮಾಮ್ಮಾ ಎಂದು ಮಾತನಾಡುತ್ತಿದ್ದ. ಒಂದು ದಿನ ಇದನ್ನು ಗಾಯತ್ರಿ ಗಮನಿಸಿದಳು. ಬಂದು ಅವನನ್ನು ಎತ್ತಿಕೊಂಡು, ಅಮ್ಮಾ.. ಅಮ್ಮಾ.... ಎಂದು ಸರಿಯಾಗಿ ಕಲಿಸಿಕೊಟ್ಟಳು. ಸ್ಕಂದ ಬಂದು ಕಿರಣನನ್ನು ಹೊಡೆದು, ಇದು ನನ್ನಮ್ಮ... ನಿನ್ನಮ್ಮ ಅಲ್ಲ ಎಂದು ಮುಖವನ್ನೆಲ್ಲಾ ಪರಚಿದ. ಗಾಯತ್ರಿ ಸ್ಕಂದನನ್ನು ಹೊಡೆದಳು. ಅವನು ಹೋ ಎಂದು ಅತ್ತ. ಕೆಲವೇ ಕ್ಷಣಗಳಲ್ಲಿ ಒಂದು ರಂಪವಾಗಿ ಹೋಯಿತು.

''ನಿನ್ನ ಮಗ ಭಾರಿ ತುಂಟನಾಗಿದಾನೆ. ಮೊದಲೇ ಅನಾಥ ಮಕ್ಕಳು... ಸುಮ್ಮನೇ ಅನ್ಯಾಯವಾಗಿ ಏಟನ್ನು ತಿನ್ನುತ್ತವೆ. ಆ ಮನುಷ್ಯನೋ ಇತ್ತ ಮತ್ತೆ ಸುಳಿದಿಲ್ಲ. ಎಲ್ಲಿ ಹಾಳಾದ್ನಂತೆ... ನೀನೇ ಕರೆದುಕೊಂಡು ಹೋಗಿ ಯಾವುದಾದರೂ ಅನಾಥಶ್ರಮಕ್ಕೆ ಸೇರಿಸಿ ಬಿಟ್ಟುಬಾ.... ''

''ನಾನು ಇವನನ್ನೇ ಯಾವುದಾದರೂ ಅನಾಥಾಶ್ರಮಕ್ಕೆ ಸೇರಿಸಿ ಬಿಡ್ತೀನಿ. ಸಾಕಾಗಿದೆ ಇವನ ಕಾಟ''ಎನ್ನುತ್ತಾ ಮತ್ತೆ ಎರಡು ಹಾಕಿದಳು ಸ್ಕಂದನಿಗೆ.

''ಸಾಕು , ಮಗೂನ ಹೊಡೀಬೇಡ. ಹೊಡೆದು ಬಡಿದು ಮಕ್ಕಳನ್ನು ಬೆಳೆಸೋಕೆ

ಆಗುಲ್ಲ. ಇವನ ಕಾಟ ಸಾಕಾಯ್ತು ಅನ್ನೋದಾದ್ರೆ ಯಾಕೆ ಹೆತ್ತೆ? ಒಂದು ಸಾಲದು ಅಂತ ಇನ್ನೊಂದಕ್ಕೆ ರೆಡಿಯಾಗಿರುವ ಹಾಗಿದೆ.... '' ಗಾಯತ್ರಿ ನಾಚಿದಳು.

''ಎಷ್ಟು ತಿಂಗಳು ಈಗ? ಮೂರೋ ನಾಲ್ಕೋ...?''

''ಮೂರು ತುಂಬಿದೆ. ನಿಮಗೆ ಹೇಗೆ ಗೊತ್ತಾಯು?''

ನಾನೂ ಮಕ್ಕಳನ್ನು ಹೆತ್ತಿರುವವಳೇ... ಯಾವುದನ್ನು ಬೇಕಾದರೂ ಮುಚ್ಚಿಡಬಹುದು. ಬಸಿರನ್ನು ಮುಚ್ಚಿಡೋಕೆ ಆಗುತ್ತಾ? ... ನೀನು ಕಿರಣನನ್ನು ಸದಾ ಎತ್ಕೋಬೇಡ. ಹೆಚ್ಚು ಕಡಿಮೆ ಆದೀತು. ಗಾಯತ್ರಿ ಕಿರಣನನ್ನು ದಿಗಿಲಿನಿಂದ ಇಳಿಸಿದಳು. ಅವನು ''ಅಮ್ಮಾ... ಅಮ್ಮಾ... ''ಎಂದು ಅತ್ತ. ಅಲ್ಲಿಯೇ ಕೂತು ಇವರುಗಳ ಮಾತನ್ನು ಕೇಳಿಸಿಕೊಳ್ಳುತ್ತಿದ್ದ ಪೂರ್ಣಿಮಾಳಿಗೆ ಏನನ್ನಿಸಿತೋ ಏನೋ,

''ಕಿರಣಾ.... ಬಾ. ಇಲ್ಲಿ.... ಕೈ ಮಾಡಿ ಕರೆದಳು. ಅವನು ಬರಲಿಲ್ಲ. ಅವಳೇ ಎದ್ದು ಬಂದಳು, ಬರುಲ್ಲ ಅಂತಿಯಾ ಕಳ್ಳ ...''ಎನ್ನುತ್ತಾ ಮುದ್ದಿಸಲು ಬಂದಳು. ಅವನು ಗಾಯತ್ರಿಯ ಸೀರೆಯ ಸೆರಗನ್ನು ಹಿಡಿದು ''ಅಮ್ಮಾ.... ಅಮ್ಮಾ...''ಎಂದ.

''ನಾನೇ ನಿನ್ನ ಅಮ್ಮಾ ಕಣೋ.... ನಾನೇ ನಿನ್ನ ಅಮ್ಮಾ.... ಎಲ್ಲಿ ಅಮ್ಮಾ .. ಅನ್ನು ಎನ್ನುತ್ತಾ ಅವನನ್ನು ಎತ್ತಿಕೊಂಡು, ತನ್ನ ಎದೆಗೆ ಒತ್ತಿಕೊಂಡಳು. ಗಾಯತ್ರಿ ಕಣ್ಣುಗಳನ್ನು ಮುಚ್ಚಿಕೊಂಡು ನಿರಾಳವಾದ ಉಸಿರನ್ನು ಬಿಟ್ಟಳು. ಆಂಟಿ ತೆರೆದ ಬಾಯಿ, ಕಣ್ಣುಗಳಿಂದ ಪೂರ್ಣಮಾಳನ್ನೇ ವೀಕ್ಷಿಸಿದಳು. ಅಳುತ್ತಿದ್ದ ಕಿರಣನನ್ನು ಸಮಾಧಾನ ಗೊಳಿಸಲೆಂದು ಪೂರ್ಣಿಮಾ ಅವನೊಂದಿಗೆ ತನ್ನ ರೂಮಿಗೆ ಹೋದಳು. ಜ್ಯೋತಿಯೂ ಅವಳನ್ನು ಹಿಂಬಾಲಿಸಿದಳು.''

''ನಾನು ನಿನ್ನ ತಮ್ಮನಿಗೆ ಏನೂ ಮಾಡುಲ್ಲ ಕಣೆ... ನೀನ್ಯಾಕೆ ಬಂದೆ?''

''ನಾನೂ ನಿಮ್ಮನ್ನು ಅಮ್ಮ ಂತ ಕರೀಲಾ?''

''ಯಾಕೆ? ನಾನೇನೂ ನಿನ್ನ ಅಮ್ಮ ಅಲ್ಲ... ಕಿರಣಂಗೆ ಮಾತ್ರ ಅಮ್ಮ....''

''ನನ್ನ ಅಮ್ಮ ದೇವರ ಹತ್ತಿರ ಹೊರಟು ಹೋಗಿದಾಳೆ. ... ನನಗೂ ಅಮ್ಮ ಇಲ್ಲ, ಕಿರಣಂಗೂ ಅಮ್ಮ ಅಲ್ಲ.... '' ಜ್ಯೋತಿ ಅಳತೊಡಗಿದಾಗ ಅವಳಿಗೆ ಕಸಿವಿಸಿ ಆಯಿತು. ''ಅಳಬೇಡ, ನಿನಗೂ ಒಂದು ಅಮ್ಮನ್ನು ಹುಡುಕಿಕೊಡ್ತೀನಿ.'' ಸಮಾಧಾನ ಹೇಳಿದಳು.

''ನನಗೆ ಬೇರೆ ಅಮ್ಮ ಬೇಡ... ನನಗೆ ಕಿರಣನ ಅಮ್ಮನೇ ಬೇಕು.... ಊ ಊ ಊ... '' ಮತ್ತೆ ಅವಳಿಗೆ ಏನು ಹೇಳಬೇಕೆಂದು ತೋಚದೆ, ತಕ್ಷಣಕ್ಕೆ ಸಮಾಧಾನ ಮಾಡಲೆಂದು ''ಹೂಂ... ನಾನೂ ನಿನ್ನ ಅಮ್ಮ... ಅಮ್ಮಾ ಅಂತಲೇ ಕರಿ ಪರವಾಗಿಲ್ಲ'' ಜ್ಯೋತಿ ಅಮ್ಮ ಎಂದು ಕರೆಯುತ್ತಾ ಅವಳ ಸೊಂಟವನ್ನು ಬಳಸಿ ನಿಂತಿತು. ಪೂರ್ಣಿಮಾಳ ಮೈಯೆಲ್ಲಾ ಏನೋ ಒಂದು ಬಗೆಯ ಹೊಸತನ ತುಂಬಿದಂತಾಯಿತು. ಹೇಳಲಾಗದಂತಹ ಆನಂದದಲ್ಲಿ ಮುಳುಗಿ ಹೋದಳು.

''ಎಡ ಭುಜಕ್ಕೆ ಒರಗಿರುವ ಕಿರಣ, ಸೊಂಟವನ್ನು ಬಳಸಿ ನಿಂತಿರುವ ಜ್ಯೋತಿ ಎಷ್ಟೋ ಗಳಿಗೆಯವರೆಗೂ ಇದೇ ಭಂಗಿಯಲ್ಲಿ ನಿಂತು, ಮಹದಾನಂದವನ್ನು

ಅನುಭವಿಸಿದಳು. ಈ ಮಕ್ಕಳಿಗೆ ಅಮ್ಮನ ಅಗತ್ಯವಿದೆ ಎನಿಸುವುದಕ್ಕಿಂತ ಹೆಚ್ಚಾಗಿ, ತನಗೆ ಈ ಮಕ್ಕಳು ಬೇಕಾಗಿದೆ ಎಂದೆನಿಸಿತ್ತು. ಎಷ್ಟೋ ವರ್ಷಗಳಿಂದ ಇವು ತನ್ನ ಮಕ್ಕಳೇ... ತಾನೇ ಇವುಗಳನ್ನು ಮರೆತು ಬಿಟ್ಟಿದ್ದೆನೇನೋ ಎನ್ನುವಂತೆ, ಇನ್ನು ಈ ಮಕ್ಕಳನ್ನು ಬಿಟ್ಟಿರಲಾರೆ ಎಂದುಕೊಂಡು, ಒಂದು ಕೈಯನ್ನು ಕಿರಣನ ಬೆನ್ನ ಮೇಲೂ, ಇನ್ನೊಂದು ಕೈಯನ್ನು ಜ್ಯೋತಿಯ ಭುಜದ ಮೇಲೂ ಇರಿಸಿದಳು. ''

ಮನೆಯಲ್ಲಿ ಒಂದುತರಹದ ಮೌನವಾದ ವಾತಾರವಣ ತುಂಬಿತ್ತು. ಆಂಟಿ ಗಾಯತ್ರಿಯ ಕಡೆ ನೋಡಿದಳು. ಗಾಯತ್ರಿ ಸುಮ್ಮನಿರಿ ಎನ್ನುವಂತೆ ಸಂಜ್ಞೆ ಮಾಡಿದಳು. ಹೊರಗಿನಿಂದ ಬಂದ ದಿವಾಕ ಗಾಯತ್ರಿ ಸಂಜ್ಞೆಯಂತೆ,ದೂರದಿಂದಲೇ ನಿಂತು ಆ ಅಪರೂಪದ ದೃಶ್ಯವನ್ನು ಕಂಡ. ಹಾಯೆನ್ನಿಸಿತ್ತು. ಗಾಯತ್ರಿಯ ಕಡೆ ನೋಡಿ ಮಂದಹಾಸ ಬೀರಿದ. ಪೂರ್ಣಿಮಾ ತಾಯಿಯಾದಳು .ನಮ್ಮ ಜೀವದಕೊರತೆಯ ಹೊಂಡ ತುಂಬಿತು. ನನ್ನ ಪೂರ್ಣಿಮಾ ಪೂರ್ಣವಾದಳು. ಅವನು ಲಘುವಾಗಿ ಕಂಪಿಸಿದ. ದೇಹದಲ್ಲಿ ಹೊಸ ಚೈತನ್ಯ ತುಂಬಿದಂತಾಗಿತ್ತು... ಉದ್ವೇಗವನ್ನು ತಡೆದು ಕೊಳ್ಳಲಾರದೇ ಓಡಿ ಹೋಗಿ ಪೂರ್ಣಿಮಾಳನ್ನು ತಬ್ಬಿಕೊಂಡ.

ಅನಿರೀಕ್ಷಿತ ಆಲಿಂಗನದಿಂದ ಬೆಚ್ಚಿ ಬಿದ್ದಳು... ಸಾವರಿಸಿಕೊಂಡು ಅವನ ಕಡೆ ನೋಡಿದಳು. ಲಜ್ಜೆಯಿಂದ ಕೆಂಪಾಗಿದ್ದಳು.... ಆನಂದಾತಿರೇಕದಿಂದ ಮುಖವೆಲ್ಲಾ ತೋಯ್ದಂತಾಗಿತ್ತು. ಸಿಂಚನದ ಮಧ್ಯೆ ಅರಳಿದ ಕುಸುಮದಂತೆ ಕಂಡು ಬಂದಳು. ಅವಳ ಮುಖವನ್ನು ತನ್ನ ಬೊಗಸೆಯಲ್ಲಿ ಹಿಡಿದು ಮೃದುವಾಗಿ ಚುಂಬಿಸಿದ.

''ದಿವಾಕರ್... ಮಕ್ಕಳು ನೋಡ್ತಿವೆ...'' ಹಿತವಾಗಿ ತಳ್ಳಿದಳು.

''ನೋಡಲಿ ಬಿಡು.... ನಮ್ಮ ಮಕ್ಕಳೇ ತಾನೇ ... ಕಿರಣ್‌ಗೊಂದು ಮುತ್ತು ಜ್ಯೋತಿಗೊಂದು ಮುತ್ತು.. ನಿಮ್ಮ ಅಮ್ಮನಿಗೆ ಎರಡು ಮುತ್ತು ''ಎನ್ನುತ್ತಾ ಪೂರ್ಣಿಮಾಳ ಕೆನ್ನೆಗಳಿಗೆ ಮುತ್ತನ್ನಿತ್ತ.

''ಅತಿಯಾಯ್ತು ನಿಮ್ಮದು... ನಾನು ಹೋಗ್ಬೇಕು... ಜಾಗ ಬಿಡಿ...''

''ನನಗೂ ಒಂದು ಮುತ್ತು ಕೊಟ್ಟುಬಿಡು. ನಾನು ಜಾಗ ಬಿಡ್ತೀನಿ....'' ತನ್ನ ಮುಖವನ್ನು ಮುಂದೆ ಒಡ್ಡಿದ.

''ಎರಡು ಮಕ್ಕಳ ತಂದೆ ಆದರೂ, ನಾಚಿಕೆ ಮಾತ್ರ ಇಲ್ಲ'' ನಕ್ಕಳು. ಅವನ ಮುಖವನ್ನು ಹಿಂದಕ್ಕೆ ತಳ್ಳಿದಳು.

''ಮಕ್ಕಳ ಮುಂದೆ ಅವಮಾನ ಮಾಡ್ತಾಇದೀಯ .... ಈ ಮಕ್ಕಳ ಅಪ್ಪ ನಾನು... ಗೊತ್ತಾ?''

''ಅಪ್ಪಾ... ಅಪ್ಪಾ...'' ಪೂರ್ಣಿಮಾ ರಾಗವಾಗಿ ಕಿರಣನಿಗೆ ಹೇಳಿಕೊಟ್ಟಳು. ಅವನು ಮುದ್ದಾಗಿ, ಪಾ....ಪಾ...ಪಾ.... ಎಂದ. ಕಿರಣನನ್ನು ಬಾಗಿ ಎತ್ತುಕೊಂಡ. ಥ್ಯಾಂಕ್‌ಯೂ ಪೂರ್ಣಿಮಾ, ಥ್ಯಾಂಕ್‌ಯೂ. ಅವಳ ಕಿವಿಯಲ್ಲಿ ಉಸುರಿದ.

''ನಾನೂ ಇದೀನಿ'' ಎನ್ನುವಂತೆ ಜ್ಯೋತಿ ಅವನ ಕೈ ಹಿಡಿದಳು.

''ಏನು ಪುಟ್ಟೀ... ಏನು ಬೇಕು ?'' ಇತ್ತತಿರುಗಿ ಕೇಳಿದ.

''ನಾನು ಅಪ್ಪನ್ನ ನೋಡಬೇಕು...'' ಸರ್ರನೆ ಯಾರೋ ಅವನನ್ನು ಹಿಂದಕ್ಕೆ ಎಳೆದಂತಾಯಿತು. ವಾಸ್ತವಕ್ಕೆ ಇಳಿದು ಬಂದ. ಆ ವ್ಯಕ್ತಿ ಮತ್ತೆ ಇಲ್ಲಿಗೆ ಬಂದಿಲ್ಲ, ಎಲ್ಲಿದಾನೆ, ಏನ್ನೋ ವಿಷಯ ತಿಳಿಯದು... ಈಗೇನು ಮಾಡುವುದು ? ಎಷ್ಟು ದಿನ ಅಂತ ಅವನಿಗಾಗಿ ಕಾಯುವುದು ? ಗಾಯತ್ರಿಯೊಡನೆ ಅದೇ ಮಾತನ್ನಾಡಿದಾಗ ಅವಳೂ ತಲೆಯಾಡಿಸಿದಳು.

''ನಂಗೂ ಗೊತ್ತಿಲ್ಲ. ಆದರೆ ಸದ್ಯದಲ್ಲೇ ಎಂದಾದ್ರೂ ಬರಬಹುದು ಅನ್ನೋ ನಂಬಿಕೆ ನನಗಿದೆ. ಮಕ್ಕಳಿಂದ ಎಷ್ಟು ದಿನ ದೂರ ಇರೋಕೆ ಸಾಧ್ಯ ?''

''ಒಂದು ವೇಳೆ, ಆ ವ್ಯಕ್ತಿ ಬಂದು ಮಕ್ಕಳನ್ನು ಕರೆದುಕೊಂಡುಹೊರಟು ಹೋದರೆ? ಪೂರ್ಣಿಮಾಳ ಹೃದಯ ಒಡೆದು ಹೋಗುತ್ತೆ.''

''ಏನೇನೋ ಯಾಕೆ ಯೋಚಿಸ್ತೀರಿ ದಿವಾಕರ್.... ಎರಡೂ ಮಕ್ಕಳನ್ನು ನಿಮಗೇ ವಹಿಸಿಕೊಟ್ಟು ಹೋಗಿದಾರೆ. ಆಗಾಗ್ಗೆ ಮಕ್ಕಳನ್ನು ನೋಡಲು ಬರಬಹುದು. ಅದನ್ನು ಬೇಡ ಅಂತ ಹೇಳಿಬಿಡಬೇಕು. ಆಗ ಮಕ್ಕಳು ಆತನನ್ನು ಮರೆಯುವುದಿಲ್ಲ. ಪೂರಾ ನಿಮ್ಮ ಮಕ್ಕಳಾಗುವುದಿಲ್ಲ.''

''ಮಕ್ಕಳು ಮಕ್ಕಳು ಅಂತ ಹೇಳ್ತೀದೀರಲ್ಲ ಗಾಯತ್ರಿಯವರೇ, ನಾವು ಕಿರಣನನ್ನು ಮಾತ್ರ ದತ್ತುತೆಗೆದುಕೊಳ್ಳುತ್ತಿರುವುದು.''

ಕಿರಣನಿಗಿಂತ ಜ್ಯೋತಿಗೆ ತಾಯಿಯ ಅಗತ್ಯ ಹೆಚ್ಚಾಗಿದೆ ದಿವಾಕರ್. ಅವಳು ಹುಡುಗಿ. ಹುಡುಗಿಯರ ಮನಸ್ಸು ಬಹಳ ಸೂಕ್ಷ್ಮವಾಗಿರುತ್ತದೆ. ಕಿರಣ ಹುಡುಗ. ಚಿಕ್ಕವನು, ಎಲ್ಲಿಯಾದರೂ ಸುಲಭವಾಗಿ ಹೊಂದಿಕೊಳ್ಳಬಹುದು. ಜ್ಯೋತಿಯ ವಿಷಯ ಹಾಗಲ್ಲ.

''ಎರಡೆರಡು ಮಕ್ಕಳನ್ನು ಸಾಕುವ ಶಕ್ತಿ ನಮಗಿಲ್ಲ. ಪೂರ್ಣಿಮಾ ಏನಂತಾಳೋ.. ಅಮ್ಮ ಏನಂತಾಳೋ?''

''ನಾನು ಮತ್ತೆ ಪ್ರೆಗ್ನೆಂಟ್ ಆಗಿಲ್ದೇ ಇದ್ದಿದ್ರೆ ನಾನೇ ಜ್ಯೋತೀನ ಅಡಾಪ್ಟ್ ಮಾಡಿಕೊಳ್ಳುತ್ತಿದ್ದೆ. ಈಗ ನಾನು ಏನು ಮಾಡಲಿ ?''

''ನೀವು ಮತ್ತೆ ಕ್ಯಾರಿಯಿಂಗ್ ಅಂತ ಪೂರ್ಣಿಮಾಳಿಗೆ ಗೊತ್ತಾ? ''

''ಗೊತ್ತಾಗಿದೆ... ''ದಿವಾಕರ ಮಾತನ್ನು ಮುಂದುವರಿಸಲಿಲ್ಲ.

ಪೂರ್ಣಿಮಾ ಮಕ್ಕಳೊಡನೆ ಹೆಚ್ಚು ಹೆಚ್ಚು ಸಯವನ್ನು ಕಳೆಯುವುದನ್ನು ಆಂಟಿ ಗಮನಿಸಿದ್ದಳು. ಈ ಮಕ್ಕಳಲ್ಲಿ ಏನು ಆಕರ್ಷಣೆ ? ಆಂಟಿಗೆ ಕೌತುಕವೆನಿಸಿತ್ತು. ಆ ವ್ಯಕ್ತಿ ಯಾರೋ , ಈ ಮಕ್ಕಳು ಯಾರೋ... ಇವಳೇಕೆ ಇಷ್ಟು ಆಸಕ್ತಿಯನ್ನು ವಹಿಸಬೇಕು .. ನಾಳೆ ಆ ವ್ಯಕ್ತಿ ಬಂದು ಮಕ್ಕಳನ್ನು ಕರೆದುಕೊಂಡು ಹೊರಟು ಹೋದರೆ , ಅವಳ ಬೇಸರ ಅಧಿಕವಾಗುವುದಿಲ್ಲವೇ ?

ತಾಯಿ ಸತ್ತು ಹೋದರೇನಂತೆ ? ಅಪ್ಪ ಬದುಕಿದಾನಲ್ಲ. ಸದ್ಯದಲ್ಲೇ ಮರುಮದುವೆಯಾಗಲೂಬಹುದು. ಮಲತಾಯಿಯ ಕೈಕೆಳಗೆ ಈ ಮಕ್ಕಳು ಬೆಳೆಯಬೇಕು, ಏನು ವಿಧಿಯ ಲೀಲೆಯೋ... ಈ ಮಕ್ಕಳಿಗೆ ಸ್ವಂತ ತಾಯಿ ಇಲ್ಲ, ಏನು ಭವಿಷ್ಯ ಕಾದಿದೆಯೋ?

ಮನಸ್ಸು ಕಹಿಯಾಗಿತ್ತು.

''ಸುಮಾರು ಒಂದು ತಿಂಗಳಾಗುತ್ತಾ ಬಂತು. ಈ ಮಕ್ಕಳು ಈ ಮನೆಗೆ ಬಂದು ಸೇರಿಕೊಂಡು...ಎಂದಿಗೆ ಬಂದು ಕರೆದುಕೊಂಡು ಹೋಗ್ತಾನೋ ?''

ಈ ಮಾತಿಗೆ ಉತ್ತರಕೊಡುವಂತೆ ಪೂರ್ಣಿಮಾ ಅತ್ತೆಯೊಡನೆ ಮಾತನಾಡಿದಳು. ''ನಾನು ಕಿರಣನನ್ನು ದತ್ತು ತೆಗೆದುಕೊಂಡು ಬೆಳೆಸುತ್ತೇನೆ.''

''ಏನಂದೆ ? .... '' ಆಕೆ ಅಚ್ಚರಿಗೊಂಡಿದ್ದಳು. ದಿವಾಕರನಿಗೆ ಗೊತ್ತಾ?

''ಇನ್ನೂ ಗೊತ್ತಿಲ್ಲ. ನೀವೂ ಅವರನ್ನು ಒಪ್ಪಿಸಬೇಕು.''

''ಯಾಕೆ ? ಈ ಮಗೂನೇ ಯಾಕೆ ? ಮುಂದೆ ನಿಮಗೆ ಸ್ವಂತ ಮಕ್ಕಳಾದರೆ ಈ ಮಗುವಿನ ಗತಿ ಏನಾಗುತ್ತೆ ಅಂತ ಚಿಂತಿಸಿದೀಯ ?''

''ನಮಗೆ ಸ್ವಂತ ಮಕ್ಕಳಾಗುವ ಆಸೆಯನ್ನು ಎಂದೋ ಬಿಟ್ಟು ಬಿಟ್ಟಿದೀನಿ. ಆಗೋದಾದ್ರೆ ಇಷ್ಟರೊಳಗೇ ಆಗಿರುತ್ತಿತ್ತು. ಈಗ ಏನಾದ್ರೂ ಒಂದು ಇತ್ಯರ್ಥವಾಗ ಬೇಕು. ಒಂದೇ ಹೀಗೆ ಒಬ್ಬಳೇ ಕಾಲ ಕಳೆಯಬೇಕು. ಇಲ್ಲದಿದ್ದರೆ ಈ ಸಾಕು ಮಗುವಿನ ತಾಯಿಯಾಗಬೇಕು. ನಾನು ಬಂಜೆಯಲ್ಲ ಅಂತ ನನಗೆ ನಾನೇ ಹೇಳಿಕೊಳ್ಳಲು ಒಂದು ಉಪಾಯವನ್ನು ಹುಡುಕಿದೀನಿ.''

''ಏನಮ್ಮಾ ಹೀಗೆಲ್ಲಾ ಹೇಳ್ತೀಯ. ನೋಡೋಕೆ ಸರಿಯಾಗಿಯೇ ಕಾಣ್ತೀಯ.... ಯಾಕೆ ಡಾಕ್ಟರೂ ಕೈ ಚೆಲ್ಲ ಬಿಟ್ರಾ ? ಜ್ಯೋತಿಷಿಗಳು ಸುಳ್ಳು ಹೇಳ್ತಾರಾ ?''

''ಡಾಕ್ಟರರಾಗಲೀ, ಜ್ಯೋತಿಷಿಯಾಗಲೀ ನನ್ನ ಗ್ರಹಚಾರಕ್ಕೆ ಏನೂ ಮಾಡ್ತಾರೆ? ನನಗೆ ಭರವಸೆಯೇ ಇಲ್ಲವಾಗಿದೆ.''

''ಇಷ್ಟು ಬೇಗ ಹೀಗೆ ನಿರಾಸೆಗೊಂಡರೆ ಹೇಗಮ್ಮಾ.... ಮನೆ ದೇವರಿಗೆ ಹರಕೆ ಹೊತ್ತರೆ ಎಲ್ಲಾ ಕೆಲಸವೂ ನೆರವೇರುತ್ತದೆ.''

''ಆಗಲಿ, ನಿಮ್ಮ ಹರಕೆ ಫಲಿಸಲಿ... ಆಗ ಕೂಡಾ ಈ ಮಗುವನ್ನು ನನ್ನ ಸ್ವಂತ ಮಗುವಂತೆ ನೋಡಿಕೊಳ್ತೀನಿ. ಯಾವ ಅನ್ಯಾಯವನ್ನು ಮಾಡುವುದಿಲ್ಲ. ಸದ್ಯಕ್ಕೆ ನನಗೆ ನಿಮ್ಮ ಒಪ್ಪಿಗೆ ಬೇಕು. ''

''ಸರಿಯಮ್ಮ. ನಿನ್ನ ಆಸೆಗೆ ನಾನೇಕೆ ಅಡ್ಡ ಬರಲಿ ? ನೀನು ವಿದ್ಯಾವಂತೆ. ತಿಳುವಳಿಕಸ್ಥೆ. ಪ್ರಪಂಚ ಜ್ಞಾನದ ಬಗ್ಗೆ ತಿಳಿದವಳು. ಹೊರಗಿನ ವ್ಯವಹಾರಗಳನ್ನು ಬಲ್ಲವಳು. ... ನೀನೂ, ದಿವಾಕರ ಇಬ್ಬರೂ ಒಂದಾಗಿ , ನಿಧಾನವಾಗಿ ಯೋಚಿಸಿ, ಸರಿಯಾದ ನಿರ್ಧಾರಕ್ಕೆ ಬನ್ನಿ. ಮುಂದೆ ಪಶ್ಚಾತ್ತಾಪ ಪಡುವಂತಾಗಬಾರದು. ಇದೇ ನನ್ನ ಸಲಹೆ.'' ಅತ್ತೆಯೊಡನೆ ಮಾತನಾಡಿ,ಅವಳು ಸಮಾಧಾನಗೊಂಡಿದ್ದಳು. ಇದೇ ಸಮಯದಲ್ಲಿ ಗಾಯತ್ರಿ ಮತ್ತೆ ಗರ್ಭಿಣಿ ಎಂದು ತಿಳಿದಾಗ, ಎದೆಯ ಮೂಲೆಯಲ್ಲಿ ಎಲ್ಲೋ ಚುಳ್ ಎಂದಿದ್ದು, ಕೆಲವೇ ನಿಮಿಷಗಳಲ್ಲಿ ತನಗೆ ತಾನೇ ಸಮಾಧಾನ ಹೇಳಿಕೊಂಡಿದ್ದಳು.

ಅವರವರ ಭಾಗ್ಯಕ್ಕೆ ತಕ್ಕಂತ ಸಂಸಾರ, ಗಂಡ, ಮಕ್ಕಳು ಅಂತ ಹೇಳ್ತಾರೆ ಅಂತ ಅಜ್ಜಿ ಆಗಾಗ್ಗೆ ಹೇಳ್ತಾ ಇದ್ರು.... ಆ ಮಾತುಗಳು ಈಗ ನೆನಪಿಗೆ ಬರ್ತಾ ಇದೆ. ನನ್ನ ಭಾಗ್ಯಕ್ಕೆ

ಎರಡೆರಡು ಮದುವೆ. ಆದರೆ ಮಕ್ಕಳು ? ಸೊನ್ನೆ. ಹೆಸರಿಗೆ ನಾನು ಪೂರ್ಣ. ಆದರೆ ನನ್ನ ಬಾಳು ಅಪೂರ್ಣ. ನನ್ನ ಬಾಳು ಪೂರ್ಣ ಎನಿಸಬೇಕಾದರೆ ನನಗೆತಾಯಿಯ ಪಟ್ಟಬೇಕು. ನನ್ನ ಮಗು ನನ್ನನ್ನು ಬಾಯ್ತುಂಬಾ ಅಮ್ಮಾ ಅಂತ ಕರೆಯಬೇಕು. ಕೊರಳಿಗೆ ಜೋತು ಬೀಳಬೇಕು. ನಾನು ಮಗುವನ್ನು ಅಪ್ಪಿ ಮುದ್ದಾಡಬೇಕು. ಈ ನನ್ನ ಆಸೆ ನೆರವೇರುವ ಸಮಯ ಬಂದಿದೆ. ದತ್ತು ಮಗುವಿನ ಸಾಕುತಾಯಿಯಾಗುವುದರಲ್ಲೇ ನಾನು ತೃಪ್ತಿ ಪಟ್ಟುಕೊಳ್ಳುತ್ತೇನೆ.

ಆದರೆ ನಾನೊಮ್ಮೆ ಆ ವ್ಯಕ್ತಿಯನ್ನು ಮುಖತಃ ಭೇಟಿಯಾಗಬೇಕು. ಅವನೊಡನೆ ಮಾತನಾಡಿ, ಮಕ್ಕಳ ವಿಷಯಗಳನ್ನು ವಿವರವಾಗಿ ತಿಳಿದುಕೊಳ್ಳಬೇಕು. ಆತನಿಗೆ ಮನಃಪೂರ್ವಕವಾಗಿ ಥ್ಯಾಂಕ್ಸ್ ಹೇಳಬೇಕು. ಆಗಲೇ ನನಗೆ ನೆಮ್ಮದಿ.... ಪೂರ್ಣಿಮಾ ತನಗೆ ತಾನೇ ಹೇಳಿಕೊಂಡಳು.

''ಮೇಡಂ, ನಿಮ್ಮನ್ನು ಕೇಳಿಕೊಂಡು ಯಾರೋ ಬಂದಿದಾರೆ. ನಿಮ್ಮನ್ನು ಈಗಲೇ ನೋಡಬೇಕಂತೆ. ಅಲ್ಲಿ ವೈಟಿಂಗ್ ರೂಂನಲ್ಲಿ ಕಾಯ್ತಾ ಇದಾರೆ.'' ಅಟೆಂಡರ್ ಬಂದು ಹೇಳಿದ. ತನ್ನ ಮೇಲಿನ ಆಫೀಸರ್‌ನಿಂದ ಪರ್ಮಿಷನ್ ಪಡೆದುಕೊಂಡು ಕೆಳಗಿಳಿದು ಬಂದಳು. ಕಿಟಕಿಯ ಬಳಿ ನಿಂತಿದ್ದ ವ್ಯಕ್ತಿಯ ಗುರುತು ಅವಳಿಗೆ ಸಿಗಲಿಲ್ಲ.

''ಎಕ್ಸ್‌ಕ್ಯೂಸ್ ಮೀ... ನೀವು ಯಾರೋ ಗೊತ್ತಾಗಲಿಲ್ಲ'' ಎಂದಳು.

''ಅಂದ್ರೆ ನನ್ನನ್ನು ಮರೆತು ಬಿಟ್ಟಿದೀಯ ಅಂತಾಯ್ತು. ಒಳ್ಳೇದೇ ಆಯ್ತು.'' ಅವಳಿಗೆ ಧ್ವನಿಯ ಪರಿಚಯ ಸಿಕ್ಕಿತು. ನಿಂತಲ್ಲೇ ಕಲ್ಲಾದಳು.

''ಇವನೇಕೆ ಇಲ್ಲಿಗೆ ಬಂದಿದಾನೆ ? ಈಗ ನನ್ನಿಂದೇನಾಗಬೇಕು ?''ಅವಳ ಮನವನ್ನು ಓದಿದವನಂತೆ ಅವನು ಮತ್ತೆ ಮಾತನಾಡಿದ.

''ಹೇಗಿದೀಯ ಪೂರ್ಣಿಮಾ? ನಿನ್ನ ಸಂಸಾರ ಹೇಗಿದೆ ? ನಿನ್ನಗಂಡ ಮಕ್ಕಳು ಹೇಗಿದಾರೆ ? ''

''ನನಗೆ ನಿಮ್ಮೊಡನೆ ಯಾವ ಮಾತೂ ಬೇಕಿಲ್ಲ.''

''ನಿನ್ನನ್ನು ಕ್ಷಮೆ ಕೇಳಲು ಬಂದಿದೀನಿ ಪೂರ್ಣಿಮಾ... ನನ್ನಿಂದ ನಿನಗೆ ಅನ್ಯಾಯವಾಯಿತು. ನನ್ನನ್ನು ಕ್ಷಮಿಸಿಬಿಡು.''

''ಇಷ್ಟು ವರ್ಷಗಳ ನಂತರ ಈಗೇಕೆ ಕ್ಷಮೆ ಕೇಳ್ತಿದೀರಿ ?''

''ಆಗ ನನ್ನ ಬುದ್ಧಿ ಸರಿ ಇರಲಿಲ್ಲ. ಅವಿವೇಕಿಯಾಗಿದ್ದೆ. ಸಂಶಯದ ಭೂತ ನನ್ನಲ್ಲಿ ಹೊಕ್ಕಿತ್ತು. ನಿನಗೆ ಹಿಂಸೆ ಕೊಟ್ಟು, ನಾನು ಸರಿ ಅಂತ ತಿಳಿದು ಕೊಂಡಿದ್ದೆ. ಆದರೆ ನನಗೆ ಈಗ ಪಶ್ಚಾತ್ತಾಪವಾಗಿದೆ.''

''ಈಗ ನಿಮಗೆ ಏನಾದರೆ ನನಗೇನು ? ನನಗೆ ಯಾವ ಮಾತೂ ಬೇಕಿಲ್ಲ.''

''ನಿನಗೆ ಬೇಕಿಲ್ಲದಿದ್ದರೂ, ನಾನು ಹೇಳಲೇಬೇಕು. ಆಗಲೇ ನನ್ನ ಹೃದಯ ಹಗುರವಾಗುವುದು. ನಿನ್ನ ನನ್ನ ಡೈವೋರ್ಸ್ ನಂತರ ನಾನು ಮತ್ತೆ ಮದುವೆಯಾದೆ. ಆದರೆ ಈಗ ನನ್ನ ಹೆಂಡತಿ ನನ್ನೊಂದಿಗಿಲ್ಲ, ಮಕ್ಕಳು ನನ್ನ ಬಳಿ ಇಲ್ಲ, ಏಕಾಂಗಿಯಾಗಿದೀನಿ. ನನ್ನ

ಅಪರಾಧಕ್ಕೆ ನನಗೆ ಶಿಕ್ಷೆಯಾಗುತ್ತಿದೆ. ನಾನು ಅನುಭವಿಸುತ್ತಿದ್ದೇನೆ.''

''ಈ ಕಥೆಯನ್ನೆಲ್ಲ ನನಗೆ ಹೇಳಬೇಡಿ. ನಾನು ಮತ್ತೆ ಮತ್ತೆ ನಿಮ್ಮ ಮೋಸದ ಬಲೆಗೆ ಬೀಳುವುದಿಲ್ಲ.''

''ನಿನ್ನನ್ನು ಮೋಸ ಗೊಳಿಸಲು ನಾನು ಇಲ್ಲಿಗೆ ಬಂದಿಲ್ಲ. ಕಡೆಯ ಬಾರಿ ನಿನ್ನನ್ನೊಮ್ಮೆ ನೋಡಿ, ಕ್ಷಮೆ ಕೇಳುವ ತವಕದಿಂದ ಬಂದೆ. ನೀನು ಸುಖವಾಗಿದೀಯ ಅಂತ ತಿಳಿದು ಸಂತೋಷವಾಗಿದೆ. ದಿವಾಕರನಂತಹ, ಪ್ರೀತಿಯ ಗಂಡ, ಮುದ್ದಾದ ಎರಡು ಮಕ್ಕಳು. ನಿನ್ನ ಬಾಳು ಈಗ ಸಂಪೂರ್ಣವಾಗಿದೆ.... ನಮ್ಮಿಬ್ಬರ ಡೈವೋರ್ಸ್ ಆದದ್ದು ಒಳ್ಳೆಯದೇ ಆಯ್ತು... ನನ್ನಿಂದಾಗುವ ಹಿಂಸೆಗಳ್ನೆಲ್ಲಾ ಸಹಿಸಿಕೊಂಡು ಬದುಕಿದ್ರೆ ಅದು ಬದುಕು ಅಂತ ಅನ್ನಿಸ್ತಿರಲಿಲ್ಲ, ನರಕವಾಸವಾಗಿರುತ್ತಿತ್ತು. ಈಗ ನನಗೂ ನೆಮ್ಮದಿ. ನಿನ್ನೊಡನೆ ಮಾತನಾಡಿದ್ದು ಇನ್ನು ಸಾಕು. ನಾನು ಹೋಗಬೇಕು... ಗುಡ್‌ಬೈ'' ಎಂದು ಹೇಳಿ, ಹಿಂತಿರುಗಿ ನೋಡದೆ ಅಲ್ಲಿಂದ ಮರೆಯಾದ. ಪೂರ್ಣಿಮಾ ಗರಬಡಿದವಳಂತೆ ನಿಂತೇಇದ್ದಳು. ಅಟೆಂಡರ್ ಬಂದು ಎಚ್ಚರಿಸಿದ.

''ನಿಮಗೆ ಮನೆಯಿಂದ ಫೋನ್ ಬಂದಿದೆ ಮೇಡಂ. ನಿಮ್ಮ ಹಸ್ಬೆಂಡ್ ಫೋನು ಮಾಡಿದಾರೆ...'' ಪೂರ್ಣಿಮಾ ಆತುರಾತುರವಾಗಿ ಬಂದು ರಿಸೀವರ್‌ನ ಎತ್ತಿಕೊಂಡಳು. ''ಆ ಮನುಷ್ಯ ಇನ್ನೊಂದರ್ಧ ಗಂಟೆಯಲ್ಲಿ ನಮ್ಮ ಮನೆಗೆ ಬರ್ತಾ ಇದಾರಂತೆ. ನಿನಗೆ ಬರೋಕೆ ಆಗುತ್ತಾ?''

''ಇಲ್ಲ ದಿವಾಕರ್, ನನಗೆ ಈಗ ಬರುಕ್ಕಾಗುಲ್ಲ. ವಿಪರೀತ ಕೆಲಸವಿದೆ. ಅಲ್ಲದೇ ನನ್ನ ಮೂಡ್ ಕೂಡಾ ಚೆನ್ನಾಗಿಲ್ಲ.''

''ನಿನ್ನ ಮೂಡ್‌ಗೆ ಏನಾಯ್ತು?'' ಗಾಬರಿಯಿಂದ ಕೇಳಿದ.

''ಮನೆಗೆ ಬಂದ ಮೇಲೆ ಹೇಳ್ತೀನಿ. ಫೋನ್‌ನಲ್ಲೇ ಹೇಳಬೇಕಾ ? '' ಲೈನ್ ಕಟ್ ಮಾಡಿದಳು. ತಲೆ ಬಿಸಿಯಾಗಿತ್ತು . ಪಕ್ಕದ ಹೊಟೆಲಿನಿಂದ ಕಾಫಿ ತರುವಂತೆ, ಪ್ಯೂನ್‌ನ ಕಳುಹಿಸಿದಳು. ಇಲ್ಲಿ ಚಂದ್ರ ಬಂದು ನನ್ನ ಮನಸ್ಸನ್ನೆಲ್ಲಾ ಕಲಕಿ ಬಿಟ್ಟ, ಅಲ್ಲಿ ಹೋಗಿ ಆ ಮನುಷ್ಯನ ಬಳಿ ನಗುನಗುತ್ತಾ ಮಾತನಾಡಲೂ ನನ್ನಿಂದ ಸಾಧ್ಯವಾಗುವುದಿಲ್ಲ ಅಂತೆನ್ನಿಸಿತ್ತು. ಬಿಸಿ ಬಿಸಿ ಕಾಫಿಯನ್ನು ಕುಡಿದ ಮೇಲೆ ನರಗಳು ಸಡಿಲವಾಗಿವೆ ಎಂದೆನಿಸಿದಲೂ ಕೆಲಸದಲ್ಲಿ ಗಮನ ಹರಿಸಲು ಅವಳಿಂದ ಸಾಧ್ಯವಾಗಲಿಲ್ಲ. ಗಳಿಗೆಗೊಮ್ಮೆ ಗಡಿಯಾರದ ಕಡೆ ನೋಡುತ್ತಿದ್ದಳು.

ನಿತ್ಯದಂತೆ ಇವಳು ಮನೆಗೆ ವಾಪಸ್ಸು ಬರುವಷ್ಟರಲ್ಲಿ ಆ ವ್ಯಕ್ತಿ ಬಂದು ಹೊರಟು ಹೋಗಿದ್ದ. ''ಇದೇ ತಾನೇ ಆ ಮನುಷ್ಯ ಹೊರಟು ಹೋದ. ನಿನಗೆ ಎದುರಿಗೆ ಸಿಕ್ಕಿದ್ದರು ಸಿಕ್ಕಿರಬಹುದು. ಇನ್ನೊಂದು ಐದು ನಿಮಿಷ ಮುಂಚೆ ಬರಬಾರದಾಗಿತ್ತಾ'' ದಿವಾಕರ ಪಟಪಟನೆ ನುಡಿದ. ಅವಳಿಗೆ ನಿರಾಸೆಯಾಗಿರಲಿಲ್ಲ. ಮತ್ತೊಂದು ದಿನ ನೋಡಿದ ರಾಯ್ತು ಅಂತಂದುಕೊಂಡಳು.

''ಇಲ್ಲ ನನಗೆ ಯಾವ ವ್ಯಕ್ತಿಯೂ ಸಿಗಲಿಲ್ಲ. ಅಲ್ಲದೇ ನನಗೇನು ಗೊತ್ತು ಆತ

ಹೇಗಿದ್ದ ಅಂತ. ಇನ್ನೊಂದು ದಿನ ಬರ್ತಾನೆ ಬಿಡಿ.''

''ಇಲ್ಲ ಅವನು ಮತ್ತೆ ಬರುಲ್ಲವಂತೆ. ಬಾಂಡ್ ಪೇಪರ್ನಲ್ಲಿ ಮಕ್ಕಳನ್ನು ನಮಗೆ ಕೊಟ್ಟು ಬಿಟ್ಟಿರುವುದಾಗಿ ಬರೆದುಕೊಟ್ಟಿದಾನೆ. ನಮಗೆ ಕಾಣಿಕೆಯಾಗಿ ಕೊಟ್ಟಿದಾನೆ.''

''ನಮಗೆ ಕಿರಣ ಒಬ್ಬ ಸಾಕು. ಇಬ್ಬಿಬ್ಬರು ಯಾಕೆ ?''

''ಕಿರಣ ಇನ್ನು ಚಿಕ್ಕವನು. ಜ್ಯೋತಿ ಹುಡುಗಿ. ಇಬ್ಬರಿಗೂ, ತಾಯಿ ತಂದೆ ಇಲ್ಲ, ಅಕ್ಕ ತಮ್ಮನಾದರೂ ಒಟ್ಟಿಗೆ ಬೆಳೆಯಲಿ ಅಂತ ನನ್ನ ಆಸೆ ಅಂತ ಆ ವ್ಯಕ್ತಿ ಕೈ ಮುಗಿದು ಕೇಳಿಕೊಂಡ. ನಾನು ಹೂಂ ಅಂತ ಒಪ್ಪಿಗೆ ಕೊಟ್ಟುಬಿಟ್ಟೆ.''

''ಎರಡೆರಡು ಮಕ್ಕಳನ್ನು ನೋಡಿಕೊಳ್ಳೋದು ಸುಲಭ ಅಂತ ಅಂದುಕೊಂಡಿದೀರಾ ? ದಿವಾಕರ್. ನಿಮಗೇ ಕಷ್ಟ, ನಿಮ್ಮ ತಾಯಿಗೇ ಕಷ್ಟ ''

''ಗಾಯತ್ರಿ ಮತ್ತೆ ಪ್ರೆಗ್ನೆಂಟ್ ಅಂತೆ. ನಿನಗೆ ಗೊತ್ತಾ ? ಅವರಿಗೂ ಎರಡು ಮಕ್ಕಳು. ಸಾಕೋದು ಕಷ್ಟವಾಗಿದ್ದರೆ, ಸ್ಟಾಪ್ ಮಾಡ್ತಿರಲಿಲ್ವಾ ? ನನಗೆ ಗೊತ್ತು ಖರ್ಚು ಹೆಚ್ಚಾಗುತ್ತೆ ಅಂತ ತಾನೇ ನೀನು ಹೇಳ್ತಿರೋದು. ನಾನು ನಾಲ್ಕು ಮಕ್ಕಳಿಗೆ ಟ್ಯೂಷನ್ ಪಾಠ ಮಾಡಿ ಸಂಪಾದಿಸ್ತೀನಿ. '' ಎದೆ ಉಬ್ಬಿಸಿ ಹೇಳಿದ.

''ಸರಿಯಪ್ಪಾ ನೀವು ಎಲ್ಲಾ ನಿರ್ಧರಿಸಿಯಾಗಿದೆ. ಮತ್ತೆ ನನ್ನನ್ನೇಕೆ ಕೇಳ್ತೀರಿ ? ಆದರೆ ಒಂದು ಕಂಡೀಷನ್. ಕಿರಣ್ ಒಬ್ಬನೇ ನನ್ನ ಮಗ, ಏನಾದ್ರೂ ನಾನು ಅವನನ್ನೇ ಸಾಕಿ ಬೆಳೆಸುವುದು. ಇನ್ನು ನೀವುಂಟು, ನಿಮ್ಮ ಜ್ಯೋತಿ ಉಂಟು ನಂಗೊತ್ತಿಲ್ಲ.''

''ಅವಳು ನಿನ್ನನ್ನೇ ಅಮ್ಮ ಅಂತ ಕರೆಯೋದು. ನನ್ನನ್ನಲ್ಲ. ಹಾಗೇ ಕಿರಣ ನನ್ನನ್ನೇ ಅಪ್ಪ ಅಂತ ಕರೆಯೋದು, ನಿನ್ನನ್ನಲ್ಲ... ನಾನು ಅಮ್ಮ ಆಗಲಾರೆ, ನೀನು ಅಪ್ಪ ಆಗಲಾರೆ.'' ತನ್ನ ಜೋಕಿಗೆ ತಾನೇ ನಕ್ಕು ಅವಳ ಕಡೆ ನೋಡಿದ.ಅವಳು ನಗಲಿಲ್ಲ. ಅವಳ ಮನಸ್ಸು ಇನ್ನೂ ತಿಳಿಯಾಗಿರಲಿಲ್ಲ.

''ನನ್ನ ಮೇಲೆ ಕೋಪಾನಾ ಪೂರ್ಣಿಮಾ ? ಗುಂ ಅಂತೀದಿಯ ..''

''ಇವತ್ತು ಯಾಕೋ ನನ್ನ ಮೂಡೇ ಚೆನ್ನಾಗಿಲ್ಲ''

''ಹಾಂ ಅದನ್ನೇ ಕೇಳಬೇಕೂಂತಿದ್ದೆ. ಪೋನಿನಲ್ಲಿ ಅದೇ ಮಾತನ್ನು ಹೇಳಿದೆಯಲ್ಲ ಯಾರಾದ್ರೂ ಏನಾದ್ರೂ ಅಂದ್ರಾ ?''

''ಯಾರೂ ಏನೂ ಅಂದಿಲ್ಲ, ಇವತ್ತು ಅವನು ಬಂದು ನನ್ನ ಮೂಡ್ ಕೆಡಿಸಿಬಿಟ್ಟ.''

''ಅವನು ? ಅವನು ಅಂದ್ರೆ ಯಾರು ?''

''ಅವನೇ ಚಂದ್ರ.... ಪಾಪಿ, ಮಾಡೋ ಪಾಪವನ್ನೆಲ್ಲಾ ಮಾಡಿಬಿಟ್ಟು ಕ್ಷಮೆ ಕೇಳೋದಿಕ್ಕೆ ಬಂದಿದ್ದ. ನಾಚಿಕೆ ಇಲ್ಲದೇ...''

''ಕ್ಷಮೆ ಕೇಳೋಕೆ ಬಂದಿದ್ನಾ ? ಯಾಕೆ ಏನಾಯ್ತಂತೆ ?''

''ನಿನಗೆ ದ್ರೋಹ ಮಾಡಿದ್ದಕ್ಕೆ ತಕ್ಕ ಶಾಸ್ತಿ ಆಯಿತು, ಹೆಂಡತಿಯನ್ನು ಕಳೆದುಕೊಂಡೆ. ಮಕ್ಕಳು ದೂರವಾದರು. ಈಗ ನಾನೂ ದೇಶಾಂತರ ಹೋಗ್ತಾ ಇದೀನಿ. ಹೋಗುವ ಮೊದಲು ನಿನ್ನನ್ನೊಮ್ಮೆ ಕಂಡು ಕ್ಷಮೆ ಕೇಳಬೇಕೂಂತ ಬಂದಿದೀನಿ. ಕ್ಷಮಿಸ್ತೀಯಾ ? ಅಂತ

ಕೈಮುಗಿದು ಕೇಳಿಕೊಂಡ.''

''ನೀನೇನಂದೆ ?''

''ನಾನು ಏನೂ ಅನ್ನಲಿಲ್ಲ. ಅವನೊಡನೆ ಮಾತೇ ಬೇಡವೆನಿಸಿತ್ತು ನನಗೆ.''

''ಕ್ಷಮೆ ಕೇಳಿದವರನ್ನು ಕ್ಷಮಿಸಬೇಕಾದುದು ಧರ್ಮ ಅಲ್ವಾ ಪೂರ್ಣಿಮಾ ?''

''ಧರ್ಮ, ಕರ್ಮ ಒಂದೂ ತಿಳಿಯದು ನನಗೆ. ಒಳ್ಳೆ ಧರ್ಮರಾಯನ ತರಹ ಎಷ್ಟು ಸುಲಭವಾಗಿ ಹೇಳ್ತೀರಿ. ಅವನು ದ್ರೋಹ ಮಾಡಿದ್ದು ನನಗೆ. ನಿಮ್ಮ ಪತ್ನಿಗೆ.''

''ಅವನು ದ್ರೋಹ ಮಾಡಿದ್ದು ಅವನ ತಪ್ಪಿಸಬಹುದು. ಆದರೆ ಅದರಿಂದ ಒಳ್ಳೆಯದಾದದ್ದು ನನಗೆ. ಇಲ್ಲದಿದ್ದರೆ, ನೀನು ನನ್ನ ಪತ್ನಿಯಾಗುತ್ತಿದ್ದೆಯಾ ? ನ್ಯಾಯವಾಗಿ ನಾನು ಅವನಿಗೆ ಥ್ಯಾಂಕ್ಸ್ ಹೇಳಬೇಕು.''

''ನಿಮ್ಮ ಮಾತು ಅರ್ಥಹೀನವಾಗಿ ಕಾಣ್ತದೆ ನನಗೆ. ಹಿಂದೊಮ್ಮೆ ನಾನು ಅವನ ಪತ್ನಿಯಾಗಿದ್ದೆ. ಅವನು ನನ್ನನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ. ವಚನ ಭ್ರಷ್ಟನಾದ. ಅದೆಲ್ಲಾ ಏನೂ ಅನ್ನಿಸುವುದಿಲ್ಲವೇ ನಿಮಗೆ ?''

''ಹಾಗಂತ ನಾನು ಅವನಿಗೆ ಏನು ಶಿಕ್ಷೆ ಕೊಡಿಸಲಿ ? ನೀನು ಏನು ಶಿಕ್ಷೆ ಕೊಡ್ತೀಯ! ಈಗಾಗಲೇ ದೇವರೆ ಅವನಿಗೆ ಶಿಕ್ಷೆಯನ್ನು ಕೊಟ್ಟಿದಾನೆ. ಈಗ ನಾವು ಅವನನ್ನು ಕ್ಷಮಿಸುವುದರಲ್ಲಿ ದೊಡ್ಡತನವಿದೆ. ''

''ಏನು ದೊಡ್ಡತನವೋ ಏನು ಸಣ್ಣತನವೋ ? ಒಟ್ಟಿನಲ್ಲಿ ನನ್ನ ಬಾಳಿನಲ್ಲಿ ಅವನು ಒಂದು ಕಪ್ಪು ಚುಕ್ಕೆ.''

''ಕಪ್ಪು ಚುಕ್ಕೆ, ಬಿಳಿ ಚುಕ್ಕೆ ಯಾವುದೂ ಇಲ್ಲ. ಸದ್ಯಕ್ಕೆ ನಮ್ಮ ಬಾಳೆಂಬ ನೀಲಿ ಆಗಸದಲ್ಲಿ ಈ ಎರಡು ಬೆಳ್ಳಿ ಚುಕ್ಕೆಗಳು....'' ಮಕ್ಕಳ ಕಡೆ ಕೈ ತೋರಿದ. ''ಬೇಗ ಬೇಗ ರೆಡಿಯಾಗು , ಈ ಮಕ್ಕಳನ್ನು ಸುತ್ತಾಡಿಸಿಕೊಂಡು ಬರೋಣ....''

ದಿವಾಕರನ ಹುಮ್ಮಸ್ಸಿಗೆ ನಿರಾಸೆ ಮಾಡಲು ಇಷ್ಟವಿಲ್ಲದೆ ಬೇಗ ಬೇಗ ಸಿದ್ಧಳಾದಳು. ದಿವಾಕರ ಮಗಳ ಕೈ ಹಿಡಿದುಕೊಂಡ. ಪೂರ್ಣಿಮಾ ಕಿರಣನನ್ನು ಎತ್ತಿಕೊಂಡಳು. ತಾಯಿಗೆ ಹೇಳಿ ಇಬ್ಬರೂ ಮನೆಯಿಂದ ಹೊರಬಿದ್ದರು.

ಎದುರಿನ ಫುಟ್‌ಪಾತ್‌ನಲ್ಲಿದ್ದ ದೊಡ್ಡ ಮರದ ಮರೆಯಲ್ಲಿ ಚಂದ್ರ ನಿಂತಿದ್ದ. ಇವರುಗಳಿಗಾಗಿಯೇ ಕಾಯುತ್ತಾ ನಿಂತಿದ್ದವನಂತೆ ಆ ಸುಖೀ ಪರಿವಾರವನ್ನೇ ಕಣ್ಣು ರೆಪ್ಪೆ ಮಿಟುಕಿಸದೇ ನೋಡಿದ. ದೂರದಿಂದಲೇ ಚಂದ್ರನನ್ನು ಗುರುತಿಸಿದ ಜ್ಯೋತಿ ''ಅಪ್ಪಾ....'' ಎಂದು ದಿವಾಕರನ ಕೈ ಜಗ್ಗಿದಳು. ''ಏನು ಮರೀ'' ಎನ್ನುತ್ತಾ ದಿವಾಕರ, ಅವಳ ಕೈ ಮಾಡಿದೆಡೆಗೆ ನೋಡಿದ. ಅಷ್ಟರಲ್ಲಿ ಚಂದ್ರ ಸರ್ರನೆ ಮರೆಯಾಗಿದ್ದ. ದಿವಾಕರನಿಗೆ ಏನೂ ಕಾಣಿಸಲಿಲ್ಲ... ಸರಸರನೆ ರಸ್ತೆಯನ್ನು ದಾಟಿ ರಸ್ತೆಯ ತಿರುವಿನಲ್ಲಿ, ಪಕ್ಕಕ್ಕೆ ತಿರುಗಿ, ಮುಂದೆ ಮುಂದೆ ನಡೆದರು. ನಿಟ್ಟುಸಿರನ್ನು ಬಿಟ್ಟು ಚಂದ್ರ ಅಲ್ಲಿಂದ ಮರೆಯಾದ.

********



ಚಂದ್ರ ಅತೃಪ್ತ ಮನಸ್ಸಿನ, ವಿಚಿತ್ರ ನಡವಳಿಕೆಯ ಯುವಕ. ಆಸೆ ನಿರಾಸೆಗಳ ತೂಗುಯ್ಯಾಲಿಯಲ್ಲಿ ಮನಸ್ಸನ್ನು ಇಳಿಬಿಟ್ಟವನು. ದುಂಡು ಕೆನ್ನೆಗಳ ತುಂಬು ಗಲ್ಲದ, ಆತನ್ನೂ ಯೌವ್ವನಕ್ಕೆ ಕಾಲಿಟ್ಟು ಅರಳುತ್ತಿರುವ ಆಕರ್ಷಕ ಹುಡುಗಿ ಪೂರ್ಣಳನ್ನು ಕಂಡ ಚಂದ್ರನ ಮನಸ್ಸು ಅವಳನ್ನು ತನ್ನವಳನ್ನಾಗಿಸಿಕೊಳ್ಳುವ ಆಲೋಚನೆಗಳ ಕಡೆ ವಾಲುತ್ತದೆ. ಪ್ರೀತಿ, ಮದುವೆಯ ಬಗ್ಗೆ ಅರಿವಿಲ್ಲದವಳನ್ನು ಪ್ರೀತಿಯ ಸೆಲೆಗೆ ಸೆಳೆಯುತ್ತಾನೆ. ಅವನ ಮಾತುಗಳಿಂದ ಆಕರ್ಷಿತಳಾದ ಪೂರ್ಣ, ಅವನು ಪ್ರೀತಿಸುತ್ತಿರುವನೆಂದು ನಂಬಿ, ಅವನ ಯೌವ್ವನ ಸಹಜವಾದ ಆಸೆಗೆ ಸ್ಪಂದಿಸಿ ಅವನಿಗೆ ತನ್ನನ್ನು ಒಪ್ಪಿಸಿಕೊಳ್ಳುತ್ತಾಳೆ. ಈ ಘಟನೆಯ ಬಗ್ಗೆ ಅರಿವಿಲ್ಲದ ಎರಡೂ ಮನೆಯವರು, ವಿರೋಧಗಳ ನಡುವೆಯೂ ಅವರಿಬ್ಬರ ಮದುವೆಯನ್ನು ನೆರವೇರಿಸುತ್ತಾರೆ. ಆದರೆ, ಅವಳ ಮೇಲಿನ ಆಕರ್ಷಣೆ ಕಡಿಮೆಯಾದ ನಂತರ ಚಂದ್ರ ಅವಳನ್ನು ತಿರಸ್ಕಾರದಿಂದ ನೋಡುತ್ತಾನೆ. ಅವಹೇಳನ ಮಾಡುತ್ತಾನೆ. ಅವಳ ನಡತೆಯನ್ನು ಸಂಶಯದಿಂದ ಹಳಿದು ಹಿಂಸೆ ಮಾಡುತ್ತಾನೆ. ತನ್ನ ಜೀವನದ ಬಗ್ಗೆ ಯಾವ ಗುರಿಯನ್ನು ಇಟ್ಟುಕೊಂಡಿರದ ಪೂರ್ಣ ಅವನ ದೌರ್ಜನ್ಯಗಳನ್ನು ಸಹಿಸಲಾಗದೇ ಅವನಿಂದ ದೂರವಾಗುತ್ತಾಳೆ. ಕೆಲಸಕ್ಕೆ ಸೇರಿಕೊಳ್ಳುತ್ತಾಳೆ. ಬಾಳಿನ ಈ ಅಧ್ಯಾಯಕ್ಕೆ ತೆರೆ ಎಳೆದುಕೊಳ್ಳುತ್ತಾಳೆ. ಆದರೆ, ಆನಂತರ ಅವಳ ಜೀವನದ ಇನ್ನೊಂದು ಅಧ್ಯಾಯದ ಪುಟಗಳು ತೆರೆದುಕೊಳ್ಳುತ್ತವೆ. ದಿವಾಕರನೊಡನೆ ಅವಳ ಸ್ನೇಹ ಪ್ರಾರಂಭವಾಗುತ್ತದೆ. ಅಪೂರ್ಣವಾಗಿದ್ದ ಪೂರ್ಣಳನ್ನು ಅವನು ಸಂಪೂರ್ಣದೆಡೆಗೆ ಒಯ್ಯುವನೇ...? ಕಾದಂಬರಿಯ ಪುಟಗಳಲ್ಲಿ ಪೂರ್ಣಳ ಜೀವನ ಪೂರ್ಣಗೊಂಡಿತೇ? ಅಪೂರ್ಣವಾಗಿಯೇ ಉಳಿಯಿತೇ? ಕಾದಂಬರಿಯನ್ನು ಓದಿ ತಿಳಿಯುವಿರಲ್ಲವೇ?

ಧೃತಿ ಪ್ರಕಾಶನ
ಬೆಂಗಳೂರು